ಬೇಕರ್,* ಮಿರ್ಸ್ಕಿ, ಜಾಂಕೋ ಲಾರ್ವಿನ್ಸ್ಕರೇ ಮೊದಲಾದ ವಿಮರ್ಶಕರು ಬರೆಯ ಮಾತಿನ ಬುಡುಬುಡಿಕೆ ಎಂದು ಈ ಗ್ರಂಥವನ್ನು ಕರೆಯುತ್ತಾರೆ. ಆದರೆ ಚಾರ್ಲ್ಸ್ ಎಡ್ವರ್ಡ್ ರಸೆಲ್ ಎಂಬ ಮಾನ್ಯ ವಿಮರ್ಶಕರು "ಅಂದಿನ ರಷ್ಯಾವನ್ನರಿಯದವರು ಇಂದಿನ ರಷ್ಯಾದೇಶವನ್ನರಿಯುವುದು ಬಹಳ ಕಷ್ಟ. ಈ ಭಯಂಕರ ಸಮರದ ಚಿತ್ರಕಾರರಲ್ಲಿ ಗಾರ್ಕಿ ಸಮರ್ಥನೂ, ಸತ್ಯವಾದಿಯೂ, ಭಾವಜ್ಞನೂ ಆಗಿದ್ದಾನೆ. ಅನೇಕ ಅಧ್ಯಾಯಗಳಲ್ಲಿ ಇತಿಹಾಸಕಾರನು ಮಾಡಲಾಗದ ಕಾರ್ಯಭಾಗವನ್ನು ಕೆಲವೇ ಅಧ್ಯಾಯಗಳಲ್ಲಿ ಗಾರ್ಕಿ ನಿರ್ವಹಿಸಿದ್ದಾನೆ" ಎಂದು ಅಭಿಪ್ರಾಯ ಪಟ್ಟಿದ್ದಾರೆ. 'ತಾಯಿ' ಯಲ್ಲಿ ಮದಿರಾಮತ್ತ ಪತಿಯಿಂದ ನೊಂದು ನೊಂದು ಹಣ್ಣಾಗಿದ್ದ ಒಬ್ಬ ತಾಯಿಯು ಸುಪ್ತಚೇತನ ಜಾಗೃತಗೊಂಡುದರ ವಿಚಾರ ಚಿತ್ರಿತವಾಗಿದೆ. ಅವಳ ಜೀವನ ಸರ್ವಸ್ವವೂ ಅವಳ ಒಬ್ಬನೇ ಮಗ. ಅವನು ಕ್ರಾಂತಿನಾಯಕನಾಗುತ್ತಾನೆ. ಅವನನ್ನು ಕಾರಾಗಾರಕ್ಕೆ ದಬ್ಬಲು ತಾಯಿ ಅವನ ಕೆಲಸವನ್ನು ತಾನು ವಹಿಸಿಕೊಳ್ಳುತ್ತಾಳೆ. ಪಡಬಾರದ ಕಷ್ಟಗಳನ್ನೆಲ್ಲಾ ಪಡುತ್ತಾಳೆ. ತನ್ನ ಅಸಹಾಯಕತೆಯನ್ನು ಮರೆತು ಸಿಂಹಿಣಿಯಾಗುತ್ತಾಳೆ. ಕೊನೆಗೆ ರಷ್ಯಾದ ಮಹೋನ್ನತಿಗಾಗಿ ತನ್ನ, ತನ್ನ ಮಗನ ಆತ್ಮಗಳನ್ನು ಅಮೂಲ್ಯ ಬಲಿದಾನವಾಗಿ ಒಪ್ಪಿಸುತ್ತಾಳೆ.

ಉತ್ಕ್ರಾಂತಿಯ ಆಸೆ, ಉನ್ನತ ಜೀವನದ ಹಂಬಲು, ಅನ್ಯಾಯ ಕ್ರೌರ್ಯಗಳ ಬಗ್ಗೆ ಅಸಹನೆಗಳನ್ನು ಗಾರ್ಕಿ ಈ ಕಾದಂಬರಿಯಲ್ಲಿ ತುಂಬಿದ್ದಾನೆ. **ಜನತೆ ಜಾಗೃತಗೊಂಡ ಹೊರತೂ ಅದಕ್ಕೆ ಮುಕ್ತಿಯಿಲ್ಲ. ದರ್ಪ ದಬ್ಬಾಳಿಕೆಗಳನ್ನು ನಿರ್ಭೀತಿಯಿಂದ ಎದುರಿಸಿದ ಹೊರತೂ ಏಳಿಗೆಯಿಲ್ಲ** ಎಂದು ಘಂಟಾಘೋಷವಾಗಿ ಸಾರಿದ್ದಾನೆ. ತನ್ನ ಜೀವನ ಸೇವೆಯ ಆದರ್ಶವನ್ನೆಲ್ಲಾ ಈ ಮಾತುಗಳಲ್ಲಿ ಅಡಗಿಸಿ ಇಡೀ ಜಗತ್ತನ್ನೇ ಒಂದು ಅಧಿಕಾರವಾಣಿಯಿಂದ ಎಚ್ಚರಗೊಳಿಸಿದ್ದಾನೆ.

---

* A long-winded, monotonous description of the brutalised life of men, women and children in a Russian Factory.

"ಕಾಯಕರ್ಮಿಗಳೇ, ಎಚ್ಚರಗೊಳ್ಳಿರಿ!
ನೀವೇ ಜೀವನದ ಒಡೆಯರು–ಪ್ರಭುಗಳು!
ಎಲ್ಲರೂ ಬದುಕುವುದು ನಿಮ್ಮ ದುಡಿಮೆಯಿಂದ;
ಆ ನಿಮ್ಮ ದುಡಿಮೆಗಾಗಿಯೇ ನಿಮ್ಮನ್ನು ಬಂಧಿಸುತ್ತಾರೆ.
ಎಚ್ಚರಗೊಳ್ಳಿರಿ! ನೀವು ಬಂಧಿತರು. ಅವರು ನಿಮ್ಮ
ಆತ್ಮನನ್ನು ಘಾತಿಸಿ ಸುಲಿದಿದ್ದಾರೆ.
ಒಂದು ಶಕ್ತಿಯ ಗರ್ಭದೊಳಗೆ ಅಡಕವಾಗಿರಿ.
ತನು ಮನಗಳಿಂದ ಒಂದುಗೊಳ್ಳಿರಿ.
ಆ ಮಹಾಶಕ್ತಿಯು ಮತ್ತೆಲ್ಲ ಅಡಚಣೆಗಳನ್ನು ಗೆಲ್ಲುವುದು"

ಆ ಪಾಂಚಜನ್ಯದ ರುದ್ರನಾದವು ರಷ್ಯದೇಶವನ್ನು ಮುಟ್ಟಿತು–ಜಗತ್ತನ್ನೇ ಮುಟ್ಟಬೇಕು. ಜಗತ್ತಿಗೇ ಜೀವಪ್ರದಾನ ಮಾಡಬೇಕು. ಅಂದೇ ಗಾರ್ಕಿಯ ಸೇವೆ, ತ್ಯಾಗಗಳ ಸಾರ್ಥಕ್ಯ ಸಿದ್ಧಿಸುವುದು.

———:———

# ಮ್ಯಾಕ್ಸಿಂ ಗಾರ್ಕಿ

## ಸೋವಿಯಟ್ ರಷ್ಯದ ಸಾಹಿತ್ಯ ಶಿಲ್ಪಿ !

ಲೇಖಕ : ವಿ. ಎಂ. ಇನಾಂದಾರ್

ಅನುವಾದಕ : ಅರ್ಚಿಕ ವೆಂಕಟೇಶ

ಒಂದು ಯುಗದ ಶಕ್ತಿ ನಾನಾ ಪ್ರವಾಹಗಳ ಮೂಲಕ ಪ್ರಸರಿಸುವುದು ; ಅಂಥದರಲ್ಲಿ ಸಾಹಿತ್ಯವೂ ಒಂದು. ಯಾವದೇ ಒಂದು ಪುಸ್ತಕದ ಹಿನ್ನೆಲೆಯಾಗಿ ಆ ಗ್ರಂಥಕಾರನ ವ್ಯಕ್ತಿತ್ವವನ್ನು ಕಂಡುಕೊಳ್ಳುವಂತೆ, ಒಂದು ದೇಶದ ರಾಷ್ಟ್ರೀಯ ಸಾಹಿತ್ಯವನ್ನು ಪರಿಶೀಲಿಸುವಾಗ ಅಲ್ಲಿನ ಸ್ವಭಾವ ವೈಚಿತ್ರ್ಯ, ಜೀವನದ ಶಕ್ತಿಸಾಮರ್ಥ್ಯ, ಧ್ವನಿ ಇವುಗಳನ್ನು ಗ್ರಹಿಸಬಹುದು. ಯಾವದೇ ಯುಗದ ಸಾಹಿತ್ಯದಲ್ಲಿಯೂ ಕೂಡ ಅಂದಿನ ಕಾಲದ ರಾಜಕೀಯ, ಧಾರ್ಮಿಕ ಮತ್ತು ತಾತ್ವಿಕ ವಿಚಾರ-ವ್ಯವಹಾರದಲ್ಲಿ ವೈಯಕ್ತಿಕವಾದ ಮತ್ತು ವ್ಯಕ್ತಿಗೆ ಸಂಬಂಧಿಸದ ದ್ವಂದ್ವಶಕ್ತಿಗಳು ಏಕಮುಖವಾಗಿ ಹರಿದು ನೈಜಕಲ್ಪನೆಯನ್ನು ಮಾಡಿಕೊಡುವುದು ಕಂಡುಬರುತ್ತದೆ. ಕಾಲಶಕ್ತಿ ಪ್ರತಿ ಯತ್ನದಲ್ಲೂ ತನ್ನ ಕೈಚಳಕ ತೋರದೆ ಬಿಡುವುದಿಲ್ಲ. ಯಾವುದೇ ಕಲಾತ್ಮಕವಾದ ಕಾರ್ಯ ಸ್ವತಂತ್ರವಾಗಿ ಉಜ್ಜೀವಿತವಾಗಿದೆಯೆಂದು ಭಾವಿಸಿದರೂ ಆಯಾಕಾಲದ ಬೇಕು-ಬೇಡಗಳ ಮುದ್ರೆಯನ್ನು ಹೊತ್ತೇ ಇಂದಿನ ಬೆಳಕನ್ನು ಅದು ಕಾಣಬೇಕು. ಅದು ಹಾಗೇ ನಡೆದುಬಂದಿದೆ.

### ಅಸಮಾನ ವೈಶಿಷ್ಟ್ಯ

ಮೇಲೆ ಹೇಳಿದ ಅಭಿಪ್ರಾಯಗಳು ಪ್ರತಿಯೊಬ್ಬ ಪ್ರತಿಭಾವಂತನಾದ ಲೇಖಕನಿಗೆ ಅನ್ವಯಿಸುವುವು. ಆದರಲ್ಲೂ ಗಾರ್ಕಿಯಂಥ ಅಪ್ರತಿಮ ಮೇಧಾವಿ ತನ್ನ ಅಸಮಾನ ಲೇಖನ ವೈಶಿಷ್ಟ್ಯದಿಂದ ತನ್ನ ಯುಗದ ಇತಿಹಾಸದ ಮೇಲೆ ಮಾಡಿದ ಪರಿಣಾಮ - ಆ ಯುಗ ಆತನ ಮೇಲೆ ಮಾಡಿದ ಪ್ರಭಾವಯುತ ಪರಿಣಾಮಕ್ಕಿಂತಲೂ ಎಷ್ಟೋ ಪಾಲು ಮಿಗಿಲಾದುದು. ಆತನ ಬರೆಹಗಳು ರಾಷ್ಟ್ರದ ಮುಖವನ್ನೇ ನೂತನ ದಿಕ್ಕಿಗೆ ತಿರುಗಿಸಿ, ಜನಜೀವನ

ದಲ್ಲಿ ಕ್ರಾಂತಿಯನ್ನೆಸಗಿ ಮಹಾಕಾರ್ಯಗೈದುವು. ಗಾರ್ಕಿಯ ಜೀವನ ಬೇರೆಯಲ್ಲ; ರಷ್ಯದ ಜೀವನ ಬೇರೆಯಲ್ಲ. ಅಷ್ಟರಮಟ್ಟಿನ ಏಕಭಾವ, ಏಕರಸ ಆತನಲ್ಲಿತ್ತು. ಅಂದು ಇಡೀ ರಷ್ಯ ಯಾವ ಜೀವನಪಥದಲ್ಲಿ ಮುನ್ನಡೆಯುತ್ತಿತ್ತೋ ಅದುವೇ ಗಾರ್ಕಿಯಲ್ಲಿ ಏಕತಾನವಾಗಿತ್ತು. ಆತನ ಪ್ರಭಾವದಿಂದ ರಾಷ್ಟ್ರಕ್ಕೆ ರಾಷ್ಟ್ರವೇ ಅಂತರ್ಮುಖದಿಂದ ಬಹಿರ್ಮುಖವಾಯಿತು. ಪ್ರತಿಯೊಬ್ಬ ವ್ಯಕ್ತಿಗೂ ಸಹಜವಾಗಿರಬೇಕಾದ ವ್ಯಕ್ತಿವೈಲಕ್ಷಣಗಳೂ, ಸ್ಥಾನಮಾನಗಳು ಗೊತ್ತಾದುವು. ಈ ಮಹತ್ಕಾರ್ಯಕ್ಕೆ ಗಾರ್ಕಿಯ ಅಚಲವಾದ ಆತ್ಮೀಯತೆ, ಭಕ್ತಿಯ ಉತ್ಕಟತೆ, ಜನಜೀವನದ ಉನ್ನತಿಯ ಅಪಾರವಾದ ಆಶೆ, ಅದಕ್ಕಾಗಿಯೇ ವಿನಾಸಲಾಗಿದ್ದ ಮಿಗಿಲಾದ ಶ್ರದ್ಧೆ ಇವು ಆತನ ಲೇಖನಗಳಲ್ಲಿ ಒನ್ಮುಖವಾಗಿ ವೈಗೊಂಡು, ರಷ್ಯನ್ ರಾಷ್ಟ್ರದ ಆಳವನ್ನು ಅರಿತು ಬಾಳನ್ನು ಪ್ರಗತಿ ಪಥಕ್ಕೆ ತಿರುಗಿಸಿದವು. ಈ ಹಿಂದೆ ಜನತೆ "ಕೊಳೆತು ನಾರುವ ನೀರಿನ ಮಡುವಿ" ನೋವಾದಿಯಲ್ಲಿದ್ದ ಅನೇಕ ಬಗೆಯ ಕಂಟಕದಲ್ಲಿ ಸಿಲುಕಿತ್ತು. ಅಂತೆಯೇ ಗಾರ್ಕಿ ರಷ್ಯದ ಪುನರುಜ್ಜೀವನದ ಮಂತ್ರವನ್ನು ಮನದಲ್ಲಿ ಮಿಡಿಯುತ್ತ ಮುಖ್ಯವಾಗಿ ಕೂಲಿಗಳಾಗಿ ಬಾಳಹೋರಾಟದಲ್ಲಿ ಬೇಯುವ ಜನರನ್ನು ತನ್ನ ದೃಷ್ಟಿಯಲ್ಲಿಟ್ಟು ಲೇಖನರಂಗಕ್ಕಿಳಿದನು. ಗಾರ್ಕಿ ಅತ್ಯಂತ ಜನಪ್ರಿಯನಾದ ಬರೆಹಗಾರನಾದುದು - ತನ್ನ ಕಾಲದ ಸಾಮಾಜಿಕ ಸ್ಥಿತಿಯ ಪ್ರಭಾವದಿಂದ; ಅದರಲ್ಲೂ ದಿನದ ಬಾಳಿಗಾಗಿ ಹೋರಾಡುವ ಅಸಂಖ್ಯಾತ ಕೂಲಿಗಾರರ ಜೀವನ ಕಲಹದ ನೋವಿನಿಂದ. ಆತನ ಬರೆಹದಲ್ಲಿ ತಾನು ಜನಕ್ಕಾಗಿ ಮಾಡುವ ಹೋರಾಟ ಅದಕ್ಕಾಗಿ ತಾನು ವಿನಿಯೋಗಿಸುವ ಶಕ್ತಿ, ರಷ್ಯನ್‌ರಾಷ್ಟ್ರ ಆತನ ಕಾಲದಲ್ಲಿ ದೊರಕಿಸಿದ ಕೀರ್ತಿ, ಘನತೆ ಮತ್ತು ಅದರಿಂದುಂಟಾದ ಪ್ರಭಾಯುತವಾದ ಸತ್ಪರಿಣಾಮ ಇವುಗಳು ದೇಶ ಬದುಕಿದೆ ಎಂಬ ಭಾವನೆಯನ್ನು ಬೇರೂರಿಸಿದುವು.

## ದೇದೀಪ್ಯಮಾನ ಬಾಲಚುಕ್ಕೆ

ರಷ್ಯನ್ ಸಾಹಿತ್ಯಜೀವನದಲ್ಲಿ ಗಾರ್ಕಿ, ಕಾರ್ಗತ್ತಲೆಯಲ್ಲಿ ಕಣ್ಣು ಕುಕ್ಕಿಸುವಂತೆ ಮೂಡಿಬಂದ ದೇದೀಪ್ಯಮಾನವಾದ ಬಾಲಚುಕ್ಕೆ. ಅವನು ಹೋರಾಡಿದುದು ಅಂದಿನ ತತ್ವದೊಂದಿಗೆ, ವ್ಯಕ್ತಿಸ್ವಾತಂತ್ರ್ಯಕ್ಕೆ ಭಂಗ ತರುವ ಪದ್ಧತಿಯೊಂದಿಗೆ ಮತ್ತು ಸಾಮಾಜಿಕ ಚಟುವಟಿಕೆಯಿಂದ ಹೊರಗಾಗಿರ

ಬೇಕೆಂಬ ಭಾವನೆಯೊಂದಿಗೆ. ಕ್ರಾಂತಿ ಆತನ ಕಾರ್ಯದುಸಿರು. ರಷ್ಯನ್ ಸಾಮಾಜಿಕರಲ್ಲಿ ಸ್ವತಂತ್ರವಾದ ಮತ್ತು ವಿಶ್ವಾಸಾರ್ಹವಾದ ವ್ಯಕ್ತಿಗಳನ್ನೂ ಬೆಳಕಿಗೆ ತಂದ ಮಹಾಲೇಖಕರಲ್ಲಿ ಗಾರ್ಕಿ ಮೊಟ್ಟಮೊದಲಿಗ. ಈ ರೀತಿ ಮುಂದೆ ಬಂದ ವ್ಯಕ್ತಿಗಳು ಅಂದಿನ ಸಮಾಜದ ಕುಶಕ್ತಿಯೊಂದಿಗೆ ಮುಖತಃ ಹೋರಾಡಲು ಸಮರ್ಥರಾಗಿದ್ದರು. ಒಬ್ಬರಿಗೊಬ್ಬರು ಅಪ್ಪಣೆ ಪಾಲಕರಾಗಿರ ಬೇಕೆಂಬ ತತ್ವಕ್ಕೆ ಆತ ತುಂಬಾ ವಿರೋಧಿ. ಅಲ್ಲದೆ 'ಸಾಧ್ಯವಿರುವ ಮಟ್ಟಿಗೆ' ಕಾರ್ಯಮಾಡುವುದು ಎಂಬ ಮನೋಭಾವಕ್ಕಂತೂ ಅವನು ಉರಿದು ಬೀಳು ತ್ತಿದ್ದ. ಅವನು ಮಾತನಾಡಿದ ಧ್ವನಿ ಆತನ ಅವರ್ಣನೀಯ ಧೈರ್ಯ ಆತನ ಕಾರ್ಯತತ್ಪರತೆಯ ಪ್ರತೀಕವಾಗಿರುತ್ತಿತ್ತು. ರಷ್ಯನ್ ಸಮಾಜಕ್ಕಾಗಿ ತಾಳ್ಮೆಯಿಂದ ಕಾರ್ಯ ಮುಂದುವರಿಸುವವರಿಗೆ ಅವನ ನುಡಿ ಸಿಡಿಲಿನಂತಿರು ವುದು. ಅಷ್ಟು ಓಜಸ್ಸು ತುಂಬಿದ ವಾಣಿ ಆ ಮಹನೀಯನದು.

೧೮೯೨ರಿಂದ ೧೯೦೨ರ ಅವಧಿಯಲ್ಲಿ ಅವನು ಬರೆದ ಲೇಖನಗಳಲ್ಲೆಲ್ಲ ಭಿಕ್ಷುಕರು ಮತ್ತು ಪಾದಚಾರಿಯಾಗಿ ತಿರುಗಾಡುವ ಜನ ಉನ್ನತಸ್ಥಾನ ವನ್ನಲಂಕರಿಸಿದರು. ಅಲ್ಲದೆ ಸಮಾಜದ ಉನ್ನತಿಗೆ ಕಲಂಕ ತರುವ ಮನೋ ಭಾವವಾಗಲೀ, ನೈರಾಶ್ಯಭಾವನೆಯಾಗಲೀ ಗಾರ್ಕಿ ನಿರ್ಮಿತ ಭಿಕ್ಷುಕ ಮತ್ತು ಪಾದಚಾರಿ ಜನದಲ್ಲಿ ಎಲ್ಲಿಯೂ ಕಂಡುಬರುವುದಿಲ್ಲ. ಆದರೆ ಈ ಜನ ಸಾಮಾನ್ಯ ಮಾನವ ದರ್ಜೆಯನ್ನು ಮೀರಿ ಶಕ್ತಿಯುತರಾಗಿ, ಸ್ಫೂರ್ತಿಯುತ ರಾಗಿ, ಆತ್ಮೀಯ ಸಾಮರ್ಥ್ಯವನ್ನು ಬೆಳೆಯಿಸಿಕೊಂಡವರಾಗಿ, ಜೀವನ ಹೋರಾಟದ ಅಂತರಂಗವನ್ನರಿತವರಾಗಿ ಕಾಣುತ್ತಾರೆ. ಓದುಗನಲ್ಲಿ ಈ ಕರುಣೆ, ಮರುಕ ಆ ಜನಕ್ಕಾಗಿ ಹುಟ್ಟುವಂತೆ ಮಾಡುವುದರ ಬದಲು ಭಯ ದಿಂದ ಕೂಡಿ ಭಕ್ತಿಯನ್ನು ಹುಟ್ಟಿಸುತ್ತಾರೆ. ಈ ರೀತಿ ಗಾರ್ಕಿ ತನ್ನದೇ ಆದ ವೈಶಿಷ್ಟ್ಯವನ್ನು ಲೇಖನಗಳಲ್ಲೆಲ್ಲ ತುಂಬಿದ್ದಾನೆ. ತನ್ನ ಸಮಕಾಲೀನರು ಯಾರೂ ಮಾಡದ ಮಹಾಕಾರ್ಯವನ್ನು ಈತ ಮಾಡಿದ್ದಾನೆ. ಈತನ "Once in a Fall" ಅಥವಾ "On the Raft" ಪುಸ್ತಕಗಳನ್ನು ನೋಡಿ ದರೆ ಆತನು ಸಮಕಾಲೀನ ಸಾಹಿತ್ಯದ ಸಂಪ್ರದಾಯಶರಣತೆಯನ್ನು ಗಾಳಿಗೆ ತೂರಿಬಿಟ್ಟಿರುವುದು ದೃಗ್ಗೋಚರವಾಗುವುದು. ಇದು ರಷ್ಯನ್ ವಿಮರ್ಶಕ ಮಂಡಲಿಯಲ್ಲಿ ಅದ್ಭುತ ಕ್ರಾಂತಿಯನ್ನೆಸಗಿತು. ಗಾರ್ಕಿಯ ಈ

ವ್ಯಕ್ತಿಗಳು ನೀಷೆಯ ಅನುಕರಣವೆಂದು ಆಕ್ಷೇಪಿಸಲ್ಪಟ್ಟರೂ ಮುಂದಣ ವರ್ಣವಿಭಾಗದ ಮತ್ತು ಯುದ್ಧಕ್ಕಾಗಿ ಹೋರಾಡುವ, ಕೂಲಿಗಳಾಗಿ ದುಡಿವ ಜನರ ಮನೋಭಾವನೆಯನ್ನು ಮೂಡಿಸುವ ಕಾರ್ಯಮಾಡಿದರು. ಕೂಲಿಗಾರರ, ಕಾರ್ಮಿಕರ, ಶ್ರಮಜೀವಿಗಳ ಪ್ರತೀಕವಾಗಿ, ಸತ್ಯವನ್ನು ಎತ್ತಿಕಟ್ಟಿ ಅಂಥ ಜನ ಮಾನವರಾಗಿ ಬಾಳಬೇಕು ಎಂಬ ತತ್ವವನ್ನು ಮುಕ್ತಕಂಠವಾಗಿ ಸಾರಿದರು. ಇಂಥ ಶ್ರಮಜೀವಿಗಳು ಅರೆಹೊಟ್ಟೆ ತಿಂದು, ಅರೆಬೆತ್ತಲೆಯಾಗಿ ಇರುವುದನ್ನೂ ಮುಂದೆ ಅವರಿಗಾಗುವ ಭವಿತವ್ಯತೆಯನ್ನು ತೋರಿಕೊಟ್ಟರು.

## ನೂತನ ಸ್ವರೂಪ

೧೮೦೬ರಲ್ಲಿ ಗಾರ್ಕಿ ಲೆನಿನ್‌ರನ್ನು ಭೆಟ್ಟಿಯಾದ ಮೇಲೂ, ಲೇಖಕನೆಂದು ಹೆಸರಾಂತ ಮೇಲೂ, ಅವನ ಬರೆವಣಿಗೆಯಲ್ಲಿ ನೂತನ ಸ್ವರೂಪದ ಸೃಷ್ಟಿಯಾಯ್ತು. ಅಲ್ಲಿಯವರೆಗೆ, ಕೆಲಸಮಾಡಲು ಶಕ್ತಿ ಉತ್ಸಾಹಗಳಿದ್ದೂ ಅದರ ಸದುಪಯೋಗ ಮಾಡಿಕೊಳ್ಳದೆ ಸುಮ್ಮನೆ ದೂಷಣೆಯನ್ನು ಮಾಡುತ್ತ ಕಾಲಕಳೆಯುತ್ತಿದ್ದ ಜನರ ಮನೋಭಾವ ನಿರೂಪಣೆ; ಸಂಪ್ರದಾಯ ಶರಣತೆಯ ಶೃಂಖಲೆಯಲ್ಲಿ ತಮ್ಮನ್ನು ತಾವು ಬಿಗಿದುಕೊಂಡು ಒದ್ದಾಡುವ ಜನದ ಸ್ಥಿತಿ ಗಾರ್ಕಿ ಬರೆದ ಕತೆಗಳಲ್ಲಿ ಸ್ಪಷ್ಟವಾಗಿ ಮೂಡಿದೆ. ಇದರಿಂದಾಗಿ ಬದಲಾವಣೆ ಬಾರದೆ ಹೋಗಲಿಲ್ಲ. ಜೀವನದಲ್ಲಿ ತಮ್ಮ ಸ್ಥಾನವೇನೆಂದು ವಿಚಾರಕ್ಕೆ ತಾರದೆ ವಾತಾವರಣದ ಗುಲಾಮರಾಗಿ, ಮುಂದೆಯೂ ತಮಗೆ ಸುಮಾರ್ಗವಿಲ್ಲವೆಂದು ನಿರಾಶೆಯ ಮಡುವಿನಲ್ಲಿ ಮುಣುಗಿ ಗಾಬರಿಯಾದ ಜನರ ನೈಜಚಿತ್ರ "Lower Depths" ಮತ್ತು "Creatures that once were men" ಎಂಬ ಕೃತಿಗಳಲ್ಲಿ ಮೂಡಿದೆ. ಇದರಲ್ಲಿ ಜನತೆಯ ದೌರ್ಬಲ್ಯ, ಅಜಾಗರೂಕತೆ, ದುಶ್ಚಟಗಳು ಅವರ ಪ್ರಗತಿಗೆ ಹೇಗೆ ಕಾಲ್ತೊಡಕಾದುವೆಂಬುದನ್ನು ಸ್ಪಷ್ಟವಾಗಿ ತೋರಿಸಲಾಗಿದೆ. "Verenka Olekova" ಮತ್ತು "Imp" ಗಳಲ್ಲಿ ಗಾರ್ಕಿಯ ಪ್ರಗತಿ ಇನ್ನೂ ಮುಂದೆ ಸಾಗುತ್ತದೆ. ಇಲ್ಲಿ ಸಾಮಾನ್ಯಜೀವಿಯ ಚಿತ್ರವೊಂದು ಪರಿಪೂರ್ಣ ಕಲಾತ್ಮಕವಾಗಿ ಮೂಡಿದೆ. ಬುದ್ಧಿವಂತನೆಂದು ಮೆರೆಯುವ ಒಬ್ಬ ಉಚ್ಚ ತರಗತಿಯ ಮಾನವನಿಗೂ, ಸಾಮಾನ್ಯಜೀವಿಗೂ ಇರುವ ವ್ಯತ್ಯಾಸವನ್ನು ತೋರುವಲ್ಲಿ ಸಾಮಾನ್ಯಜೀವಿಯ ಜೀವನ ಎಷ್ಟು ಮೇಲ್ತರದ್ದಾಗಿರುತ್ತದೆಂದು ತೋರಿಸಲಾಗಿದೆ. ಮುಖ್ಯವಾಗಿ

ಈ ಜೀವನದಲ್ಲಿ ಪ್ರಾಮಾಣಿಕತೆ, ಕರ್ತವ್ಯನಿಷ್ಠೆ ಇವುಗಳು ಸ್ಪಷ್ಟವಾಗಿ ಕಂಗೊಳಿಸುತ್ತವೆ.

ಗಾರ್ಕಿಯ ತತ್ವಜ್ಞಾನದ ಪೂರ್ಣ ಬೆಳವಣಿಗೆಯನ್ನೂ, ಕಲೆಯನ್ನೂ ಕಾಣಬೇಕಾದರೆ "Foma Godeyev" ಎಂಬ ಕಾದಂಬರಿಯನ್ನೂ "Philistines" ಎಂಬ ನಾಟಕವನ್ನೂ ನೋಡಬೇಕು. ಈ ಕೃತಿಗಳಲ್ಲಿ ಬಂಡವಾಳ ಶಾಹಿಯ ಅನಾಹುತ, ಬಡವ-ಬಲ್ಲಿದರ ನಡುವಣ ಹೋರಾಟಗಳಿಗೆ ಬಣ್ಣ ವೇರಿದೆ. ಕರುಳು ಕರಗುವಂತೆ ಚಿತ್ರಿಸಲಾಗಿದೆ ಅಲ್ಲಿನ ಸನ್ನಿವೇಶವನ್ನು. ಗಾರ್ಕಿಯ ಕೃತಿರತ್ನಗಳೆಂದು ಹೇಳಬಹುದಾದ "Life of a Superfluous Man" "The Confession" ಮತ್ತು "Mother" ಗಳಲ್ಲಿ ಆತನ ಪ್ರತಿಭೆ ಪ್ರಖರವಾಗಿ ಮಿಂಚುತ್ತಿದೆ. ಅಬ್ಬರದಿಂದಲೂ, ಆವೇಶದಿಂದಲೂ ದಡವುಃಖ ವನ್ನು ಪ್ರವೇಶಿಸುವ ಹೊಳೆಯಂತೆ ಮುನ್ನುಗ್ಗುತ್ತಿದೆ. ಇಲ್ಲಿಯೂ ಕೂಡ ಬಡ ತನ ಸಿರಿತನಗಳ ನಡುವಣ ಮಹಾಸಂಗ್ರಾಮ ಮೂರ್ತಿವೆತ್ತು ನಿಂತಿದೆ. "The Confession" ಅಖಂಡ ರಷ್ಯದ ರೈತರನ್ನು ಜಾಗ್ರತಗೊಳಿಸಿತು. "Mother" ಅಂತೂ ಫಾಕ್ಟರಿ ಕೂಲಿಗಾರರ ಜೀವನದ ಮಹಾಕಾವ್ಯ. "The Rise and Fall of Artomonovs" ವಿಶೇಷವಾಗಿ "Decadence" ಎಂದು ಹೆಸರಾಗಿರುವ ಪುಸ್ತಕದಲ್ಲಿ ಬಂಡವಾಳಶಾಹಿಯ ಏಳುಬೀಳುಗಳನ್ನು ಚಿತ್ರಿಸ ಲಾಗಿದೆ. "Kilm Samghin" ದಲ್ಲಿ ಬುದ್ಧಿಜೀವಿಯಾದ ಬಂಡವಾಳಿಗಳ ಜೀವನ ಚಿತ್ರವಿದೆ. ಇದು ರಾಜ್ಯಕ್ರಾಂತಿಯಾಗದ ಮುನ್ನ ರಷ್ಯದ ಸ್ಥಿತಿ ಹೇಗಿತ್ತೆಂಬುದನ್ನು ನೈಜವಾಗಿ ಪ್ರತಿಬಿಂಬಿಸುವ ಕನ್ನಡಿ. "My Universities" ನಲ್ಲಿ ಗಾರ್ಕಿ ತನಗೆ ಯಾವ ಬಗೆಯ ಶಿಕ್ಷಣ ದೊರಕಿತೆಂಬುದನ್ನು ಬಹಳ ಚೆನ್ನಾಗಿ ಹೇಳಿದ್ದಾನೆ.

## ಚಿಕ್ಕಂದಿನಲ್ಲಿ

ಗಾರ್ಕಿಯ ಜೀವನ ಕಷ್ಟಮಯವಾದುದು. ಅದುವೇ ಆತನ ಕೃತಿ ಗಳಲ್ಲೆಲ್ಲ ಎರಕ ಹೊಯ್ದಂತಿದೆ. ಆತ ಅತ್ಯಂತ ಸಾಹಸಿ, ಧೈರ್ಯಶಾಲಿ. ಮೊದಲಿಂದ ಕೊನೆಯವರೆಗೂ ಬದುಕುವುದಕ್ಕಾಗಿ-ರೊಟ್ಟಿಗಾಗಿ ಹೋರಾಡಿದ ಮಹಾವ್ಯಕ್ತಿ. ಬಾಲ್ಯದಿಂದಲೂ ವಿಪತ್ತಿನಲ್ಲಿಯೇ ತೂರಿಬಂದ ಗಾರ್ಕಿ ಒಮ್ಮೆ

ಆತ್ಮಹತ್ಯೆಗೂ ಯತ್ನಿಸಿದ. ಆದರೆ ಸುದೈವ ಆತನನ್ನು ಮರಣದ ಮಹಾ ಹಿಡಿತದಿಂದ ಪಾರುಮಾಡಿತು. ಅವನು ಬದುಕಿದ.

ಮ್ಯಾಕ್ಸಿಂ ಗಾರ್ಕಿ ೧೮೯೦ರಲ್ಲಿ ಕೊರೋಲೆಂಕೋವನ್ನು ಸಂಧಿಸಿದುದು. ಇಲ್ಲಿಂದಲೇ ಆತನ ಸಾಹಿತ್ಯಜೀವನ ಉಗಮವಾಯಿತೆನ್ನಬೇಕು. ಮೊದಲಿನಿಂದಲೂ ಹೋರಾಟ ಜೀವನವೇ ನಡೆಯಿಸಿಕೊಂಡು ಬಂದ ಗಾರ್ಕಿ ಮೊಂಡತನವನ್ನೇ ಮುಂದೆ ಮಾಡಿಕೊಂಡು ಯಾವದೇ ಬಗೆಯ ನಿಶ್ಚಿತ ಜೀವನದಲ್ಲಿ ನಿಲ್ಲಲು ಸಿದ್ಧನಾಗಲಿಲ್ಲ. ವಕೀಲರಲ್ಲಿದ್ದ ಕೆಲಸಕ್ಕೂ ಶರಣು ಹೊಡೆದು ಅತ್ತಿತ್ತ ಅಲೆಯಹತ್ತಿದಾಗ ಈತನ ಮೊತ್ತಮೊದಲಿನ ಕತೆ "Makar Chudra" - Tiflis ಎಂಬ ದಿನಪತ್ರಿಕೆಯಲ್ಲಿ ಬೆಳಕು ಕಂಡಿತು. ೧೮೯೫ರಲ್ಲಿ "Ruskoo Bogatsoo" ಎಂಬ ಪೀಟರ್ಸ್‌ಬರ್ಗದ ಸುಪ್ರಸಿದ್ಧ ದಿನ ಪತ್ರಿಕೆಯಲ್ಲಿ "Chelkash" ಎಂಬ ಕತೆ ಪ್ರಕಟವಾದ ಮೇಲೆ, ಗಾರ್ಕಿ ರಷ್ಯನ್ ಸಾಹಿತ್ಯದಲ್ಲಿ ಅಪ್ರತಿಮ ಮೇಧಾವಿಯಾದ ಬರೆಹಗಾರನೆಂದು ಕೀರ್ತಿವೆತ್ತನು. ಅವನ ಲೇಖನಗಳು ಜನಪ್ರಿಯವಾಗುತ್ತ ನಡೆದಂತೆ ಅವನ ಬರೆವಣಿಗೆಯೂ ಪ್ರಗತಿ ಪಥದಲ್ಲಿ ಸಾಗಿತು. ರಷ್ಯ ಮತ್ತು ಜನಜೀವನಗಳ ವಿಷಯಗಳಲ್ಲಿ ಗಾರ್ಕಿ ಬರೆದ ಬರೆಹಗಳು ಬರಬರುತ್ತ ಸರ್ಕಾರದ ಕಟ್ಟಳೆಗೆ ವಿರೋಧವಾಗುತ್ತ ಬಂದುವು. ತತ್ಪರಿಣಾಮವಾಗಿ ಅನೇಕ ಸಲ ಸೆರೆಮನೆಯನ್ನು ಕಂಡದ್ದಾಯಿತು ಗಾರ್ಕಿ. ಕೂಲಿಗಾರ ಜೀವನಕ್ಕೆ ಬೇಕಾದ ನೆಮ್ಮದಿಗಾಗಿ ಹೋರಾಡಲು ನಿಶ್ಚಯಿಸಿದ್ದ ಗಾರ್ಕಿಯ ಮುಂದಣ ಜೀವನವೆಲ್ಲ ಕ್ರಾಂತಿಕಾರಕ ಚಟುವಟಿಕೆಗಳಲ್ಲಿಯೇ ಪರ್ಯವಸಾನ ಹೊಂದಿತು. ಈತನ ಜೀವನವೇ ಸಮಗ್ರವಾದ ರಷ್ಯನ್ ಜನಾಂಗದ ಜೀವನದ ಮೈವೆತ್ತು ನಿಂತಿದೆ ಎಂಬಂತೆ ತೋರುವುದು.

## ಲೆನಿನ್‌ನೊಡನೆ ಮೈತ್ರಿ

ಗಾರ್ಕಿ ಬೇರೆ - ರಾಜಕಾರಣ ಬೇರೆ ಎಂದು ಹೇಳುವುದು ಅಸಾಧ್ಯ. ರಷ್ಯದಲ್ಲಿ ನಡೆದ ಮೂರು ಮಹಾ ರಾಜ್ಯಕ್ರಾಂತಿಗಳಲ್ಲಿ – (೧೯೦೫ರ ಫೆಬ್ರವರಿ ಮತ್ತು ಅಕ್ಟೋಬರ್ ಮತ್ತು ೧೯೧೭) ಇವನು ಸಿಕ್ಕಿಬಿದ್ದ. ಈತ ಲೆನಿನ್ ಮತ್ತು ಸ್ಟಾಲಿನ್‌ರ ಹತ್ತಿರದ ಮಿತ್ರನಾಗಿ ಅವರ ಪ್ರೇಮಾದರಗಳನ್ನೂ ನಂಬುಗೆಯನ್ನೂ ಸಂಪಾದಿಸಿ ಕೂಲಿಗಾರರ ರಾಜ್ಯಕ್ರಾಂತಿ ಯಶಸ್ವಿಯಾಗು

ವಂತೆ ಹೋರಾಡಿದನು. ಲೆನಿನ್‌ನೊಡನಾದ ಗಾರ್ಕಿಯ ಮೈತ್ರಿಯಿಂದ ಕೂಲಿಗಾರರಿಗಾಗಿ ಬೆಳೆದ ಆತ್ಮೀಯತೆ ಅಪಾರವಾಯಿತು. ಈ ಅವಧಿಯಲ್ಲೆಲ್ಲ ಗಾರ್ಕಿ ಕ್ರಾಂತಿಕಾರಿ ಚಟುವಟಿಕೆಯಲ್ಲೇ ತಲ್ಲೀನನಾಗಿದ್ದರೂ ಆತನ ಒಲವು ಸಾಹಿತ್ಯದ ಕಡೆಗೆ ಹೆಚ್ಚಾಗಿದ್ದಿತು.

ಗಾರ್ಕಿಯ ರಾಜಕೀಯ ಜೀವನ ಪ್ರಾರಂಭವಾದಂದಿನಿಂದ ಬೋಲ್‌ಷವಿಕ್ ಜನರಿಗಾಗಿಯೇ ಸಲ್ಲಿಸಿದ ಮುಡಿಪು ಹೆಚ್ಚು. ಗಾರ್ಕಿ ಸ್ವತಃ ಫ್ಯಾಕ್ಟರಿ ಕೆಲಸಗಾರನಾಗಿದ್ದ. ಹಳಿ ಹಾಕುವ ಕೆಲಸವನ್ನೂ ಮಾಡುತ್ತಿದ್ದ. ಶ್ರಮ ಜೀವಿಗಳ ನಾನಾಮುಖವಾದ ಕೆಲಸಕಾರ್ಯಗಳನ್ನು ಈತ ಮಾಡಿ ಅವರ ಅಪಾರ ಅನುಭವವನ್ನು ಪಡೆದುಕೊಂಡಿದ್ದ. ಬೋಲ್ಷೆವಿಕ್ಕರಲ್ಲೂ, ಲೆನಿನ್ನನ ವ್ಯಕ್ತಿಗತ ಜೀವನದಲ್ಲಿಯೂ ಝಾರನ ಸಾಮ್ರಾಜ್ಯವನ್ನು ಬುಡಮೇಲು ಮಾಡ ಬೇಕೆಂಬ ಬಗ್ಗೆ ಇದ್ದ ನಿಶ್ಚಿತ ಅಭಿಪ್ರಾಯ, ಅಜೇಯವಾದ ಶ್ರದ್ಧೆ, ಕಾರ್ಯ ತತ್ಪರತೆ ಇವುಗಳನ್ನು ಗಾರ್ಕಿ ಲೆನಿನ್ನನ ವಿಷಯ ಬರೆದ ಚಿಕ್ಕ ಜೀವನ ಕತೆ ಯಲ್ಲಿ ಸ್ಪಷ್ಟವಾಗಿ ನಿರೂಪಿಸಿದ್ದಾನೆ. ಈ ಎಲ್ಲ ಗುಣಗಳೇ ರಷ್ಯದ ಪುನರ್ನಿ ರ್ಮಾಣಕ್ಕೆ ಅವಶ್ಯವೆಂದು ಅವನು ನಂಬಿದ್ದನು. ಅಲ್ಪಾವಧಿಯಲ್ಲಿಯೇ ಗಾರ್ಕಿ ಅತ್ಯಂತ ಪ್ರಸಿದ್ಧಿಗೆ ಬಂದ ಕೂಡಲೆ ಅವನು ರಷ್ಯದ ಪಂಡಿತರ ಸಭೆ ಯಲ್ಲಿ ಸದಸ್ಯನಾಗಿ ಆರಿಸಲ್ಪಟ್ಟನು. ಈ ವರ್ತಮಾನ ಝಾರನಿಗೆ ತಿಳಿದ ಕೂಡಲೇ ಅವನು ಕ್ರೋಧಾವಿಷ್ಟನಾಗಿ ಗಾರ್ಕಿಯನ್ನು ಸದಸ್ಯತ್ವದಿಂದ ತೆಗೆದು ಹಾಕಬೇಕೆಂದು ಅಧಿಕಾರ ವಾಣಿಯಿಂದ ಹೇಳಿದನು. ಈ ಅಪಮಾನಕರ ವಾದ ಅಸಹ್ಯವಾದ ವರ್ತನೆಗಾಗಿ ರಷ್ಯನ್ ಸಾಹಿತ್ಯದ ಇಬ್ಬರು ಬಹು ದೊಡ್ಡ ಸಾಹಿತಿಗಳು ಚೆಕಾಫ್ ಮತ್ತು ಕೊರೊಲೆಂಕೊ ಅವರು ಪಂಡಿತ ಮಂಡಳಿಗೆ ರಾಜೀನಾಮೆಯಿತ್ತು ಹೊರಗಾದರು. ಇದಾದ ಮೇಲೆ ಗಾರ್ಕಿ ಸ್ವಸಂತೋಷ ದಿಂದ ಅನೇಕ ವರ್ಷಗಳ ಕಾಲ ರಷ್ಯವನ್ನು ಬಿಟ್ಟು ಯು. ಎಸ್. ಎ. ದಲ್ಲಿ (ಸೋಷಿಯಲ್ ಡೆಮಾಕ್ರಾಟಿಕ್ ಪಾರ್ಟಿ) ಪ್ರಜಾಪ್ರಭುತ್ವವಾದಿ ಸಂಘದ ಕಾರ್ಯ ಮಾಡುತ್ತ ವಾಸಮಾಡಿದನು. ಕೆಪ್ರಿ (Capri) ಯಲ್ಲಿ ವಾಸಮಾಡಲು ಹೋದಾಗ ಅಲ್ಲಿನ ನಿರಂಕುಶ ಪ್ರಭುತ್ವದೊಂದಿಗೆ ಅವ್ಯಾಹತವಾಗಿ ಹೋರಾಟ ನಡೆಯಿಸಿ ರಷ್ಯನ್ ಕ್ರಾಂತಿ ಅಲ್ಲಿಯೂ ಬರುವಂತೆ ಮಾಡಿದನು. ಈ ಸ್ಥಳ ದಲ್ಲಿ ಕ್ರಾಂತಿಕಾರಿ ಚಟುವಟಿಕೆಯನ್ನು ಕಲಿಸುವುದಕ್ಕಾಗಿ ಕೂಲಿಕಾರರಿಗಾಗಿ

ಶಿಕ್ಷಣ ಶಾಲೆಯೊಂದನ್ನೇರ್ಪಡಿಸಿದನು. ಈ ಸಂದರ್ಭದಲ್ಲಿ ಲೆನಿನ್ ಮತ್ತು ಗಾರ್ಕಿಯವರಲ್ಲಿ ನಡೆದ ಪತ್ರವ್ಯವಹಾರವು ಅತಿ ಮಹತ್ವವಾದುದು. ಇದರಲ್ಲಿ ತತ್ವಜ್ಞಾನದ ವಿಷಯವಲ್ಲದೆ ಗಾರ್ಕಿ ಬೋಲ್ಷೆವಿಕ್ಕರಿಗೆ ಯಾವ ರೀತಿ ಸಹಾಯ ಸೌಕರ್ಯಗಳನ್ನು ನೀಡಬಲ್ಲನೆಂಬ ಬಗ್ಗೆ ಸರಿಯಾದ ಉತ್ತರಗಳಿವೆ. ಈತನು ರಾಜಕೀಯದಲ್ಲಿ ತನಗಿದ್ದ ಅತ್ಯುತ್ಸಾಹಕ್ಕಾಗಿ ಲೆನಿನ್ನಂತೆಯೇ ಅನೇಕ ಸಲ ಕಾರಾಗಾರವಾಸಕ್ಕೂ ದೇಶತ್ಯಾಗಕ್ಕೂ ಎರವಾಗಬೇಕಾಯಿತು; ಅವರ್ಣನೀಯ ಕಷ್ಟನಷ್ಟಕ್ಕೀಡಾಗಬೇಕಾಯಿತು.

## ಜನತೆಗಾಗಿ ಹೋರಾಟ

ಇಷ್ಟು ವರ್ಷಗಳ ಜೀವನಾನುಭವದ ಶಕ್ತಿ ಸ್ಫೂರ್ತಿಗಳು ಗಾರ್ಕಿಯ ಬರೆವಣಿಗೆಯಲ್ಲಿ ವ್ಯಾಪಿಸಿ ನಿಂತವು. ರಾಜಕೀಯದಲ್ಲಿ ಆತನಿಗಿದ್ದ ಬುದ್ಧಿ ಕೌಶಲವೇ ಆತನ ಸಾಹಿತ್ಯವನ್ನು ಮೊನಚನ್ನಾಗಿಸಿತು. ಅದೆಲ್ಲ ರಾಜಕೀಯ ಪ್ರಾವೀಣ್ಯತೆಯ ಪ್ರೇರಣೆ. ವಿಮರ್ಶಕರು ರಾಜಕೀಯ ವಿಷಯ ಗಾರ್ಕಿಯನ್ನು ನಾಶಮಾಡಿತೆಂದು ಅಭಿಪ್ರಾಯ ಪಡುತ್ತಾರೆ. ೧೯೦೭ ರ ತರುವಾಯ ಬರೆದ ಲೇಖನಗಳಲ್ಲಿ ನಾವೀನ್ಯತೆಯ ನಿರ್ಮಾಣವೇನೂ ಕಂಡುಬಾರದು. ಆ ಕಾಲದ ಬರೆವಣಿಗೆಯನ್ನು ಯಾವನೇ ಐರೋಪ್ಯ ಲೇಖಕನ ಲೇಖನಕ್ಕೆ ಸಾಮಾನ್ಯವಾಗಿ ಹೋಲಿಸಬಹುದು. ಸಾಮಾಜಿಕ ಕ್ರಾಂತಿಯ ದೃಷ್ಟಿಯಲ್ಲಿ ಗಾರ್ಕಿ ಹಿಂದೆ ಬರೆದ ಎಲ್ಲ ಬರೆಹಗಳಿಗಿಂತಲೂ ಈ ಕಾಲದ ಲೇಖನಗಳು ಅಮರವಾಗುವುವೋ ಇಲ್ಲವೋ ಎಂಬ ಸಂದೇಹವನ್ನು ತೊಡೆದವು. ಒಟ್ಟಾರೆ ಗಾರ್ಕಿ ನವೀನ ಸಂಸ್ಕೃತಿಯನ್ನು ಉಜ್ಜೀವನಗೊಳಿಸಿ ಸಮತಾವಾದದ ಸಂಸ್ಥಾಪನೆಗೆ ಸಂಜೀವಿನಿಯನ್ನಿತ್ತನು. ಆತನ ಸಾಮಾಜಿಕ ಕಾರ್ಯವೆಲ್ಲ ನೂತನ ಸೃಷ್ಟಿಯೆಂದು ಹೇಳಬೇಕು. ಆತನ ತತ್ವಜ್ಞಾನವೆಲ್ಲ ನೊಂದ ಹೃದಯದ ಆರ್ತನಾದದ ಪ್ರತೀಕವಾಗಿದೆ. ವೈಯಕ್ತಿಕ ಜೀವನವೇ ಆ ಬಗೆಯ ದಾಮರಿಂದ ಈ ರೀತಿಯ ಪ್ರತಿಬಿಂಬ ಕಂಡುಬರುತ್ತಿರುವುದು. ರಷ್ಯನ್ ಲೇಖಕರಿಗೆ ತನ್ನ ಕೃತಿಗಳಿಂದ ಹೊಸದಾರಿಯನ್ನು ತೋರಿಸಿಕೊಟ್ಟುದಲ್ಲದೆ ನಿರಂಕುಶ ಪ್ರಭುತ್ವದೊಡನೆ ಹೋರಾಡುವ ಬಗೆಯನ್ನೂ, ಶಾಂತಿ, ಸಹನೆಗಳಿಂದ ರಾಷ್ಟ್ರಕ್ಕೆ ಒಳ್ಳೆಯ ಕಾಲ ಬರುವುದೆಂಬ ನಂಬುಗೆಯನ್ನು ಕಳೆದ ಡೊಸ್ಟೋಯೆವ್‌ಸ್ಕಿ ಮೊದಲಾದವರ ಅಭಿಪ್ರಾಯವನ್ನು ಬದಲಾಯಿಸಿಬಿಟ್ಟನು.

ಜನಜೀವನದ ಉನ್ನತಿಗಾಗಿ ಅಖಂಡವಾಗಿ ಹೋರಾಡಿದ ಮಹಾವ್ಯಕ್ತಿ ಗಾರ್ಕಿಯ ಜೀವನ ಇಂದು ಭವ್ಯವಾಗಿ ತೋರುತ್ತಿದೆ. ಮಹಾಜನರ ಉತ್ಕರ್ಷೆಗಾಗಿ ಕೀಳ್ತನ, ನೀಚತನಗಳೊಡನೆ ಹೋರಾಡಿದ. ಬಂದುದೆಲ್ಲವನ್ನು ಅಚಲ ಧೈರ್ಯದಿಂದ ಎದುರಿಸಿ ಧ್ಯೇಯ ಸಾಧಿಸುವ ಗಾರ್ಕಿಯಂಥ ವ್ಯಕ್ತಿಗಳು ಅಪರೂಪ. ನವನಾಗರೀಕತೆಯ ಅಂತರಂಗದಲ್ಲಿನ ಸ್ವೇಚ್ಛಾನುಸಂಧಾನದೊಡನೆ ಬಿಚ್ಚುಮನದಿಂದ ಹೋರಾಡುವ ವ್ಯಕ್ತಿಗಳು ಇನ್ನು ವಿರಳ. ಗಾರ್ಕಿ ಸೋವಿಯೆಟ್ ರಷ್ಯದ ಬರೆಹಗಾರರ ಮೊದಲನೆಯ ಕಾಂಗ್ರೆಸ್ ಅಧಿವೇಶನದಲ್ಲಿ ಕಡೆಯದಾದ ತನ್ನ ಭಾಷಣದಲ್ಲಿ—

"ನಾಶಹೊಂದಲರ್ಹವಾದ ಜಗತ್ತಿನ ನ್ಯಾಯಾಧಿಪತಿಗಳಂತೆ ನಾವು ತೋರುತ್ತಿದ್ದೇವೆ. ಕ್ರಾಂತಿಕಾರೀ ಕೂಲಿಗಳ, ದಲಿತರ, ಬಡವರ ಬಂಧುಗಳೆಂದು ಕಾಣಿಸುತ್ತಿದ್ದೇವೆ. ತಮ್ಮ ಶ್ರಮಜೀವನದಿಂದ ಬದುಕಬೇಕೆನ್ನುವವರ ಕಾಲ್ತೊಡಕ್ಕಾಗಿದ್ದ ದ್ವೇಷ, ಅಸೂಯೆ, ಮತ್ಸರ, ದುಷ್ಕೃಟಗಳನ್ನು ತೊಡೆದು ಹಾಕುವವರಂತೆ ಕಂಡುಬರುತ್ತಿದೇವೆ. ನಾವು ಪ್ರಭುತ್ವ, ನೀಚತನ, ಮತ್ತು ಧನಿಕ ಜಗತ್ತಿನ ಘೋರ ದೇವತೆಯ ವೈರಿಗಳು. ಪಶುತುಲ್ಯವಾದ ವೃತ್ತಿ ಸ್ವಾತಂತ್ರತೆ ಧರ್ಮವೆಂದು ಸಾರುವ ಮಾರಿಯ ದೈವೀ ಶಕ್ತಿಗೂ ನಾವು ಹಗೆಗಳು." ಎಂದು ಹೇಳಿದ್ದಾನೆ. ಈ ರೀತಿ ಮಾರಿ ಸ್ವರೂಪಳಾದ ಸಿರಿದೇವಿಯನ್ನು ಸ್ಥಾನಭ್ರಷ್ಟಳನ್ನಾಗಿ ಮಾಡುವ ಯತ್ನದಲ್ಲಿ ತೊಡಗಿದ ರಷ್ಯನ್ ಲೇಖಕರಲ್ಲೆಲ್ಲ ಗಾರ್ಕಿ ಅಗ್ರಗಣ್ಯನಾಗಿದ್ದಾನೆ. ಗಾರ್ಕಿಯ ಜೀವನವೆಲ್ಲ ಸಾಮಾನ್ಯ ಜನಜೀವನದೊಂದಿಗೆ ಬೆರೆತು ಆ ಬಡಪಾಯಿಗಳ ಕಷ್ಟಸುಖಗಳನ್ನು ಚೆನ್ನಾಗಿ ಅರಿತುದು, ಸುರಿತುದು. ಸಾಮಾಜಿಕ ಜೀವನದಲ್ಲೂ ವ್ಯಕ್ತಿ ಮಹತ್ವವು ಬೇರೂರಿ ವ್ಯಕ್ತಿಯನ್ನುಳಿದು ಸಮಾಜವಿಲ್ಲ, ಸಮಾಜ ವ್ಯಕ್ತಿಗಳನ್ನು ಬಿಟ್ಟಿರಲು ಸಾಧ್ಯವಿಲ್ಲ ಎಂಬ ಘನವಾದ ತತ್ವ ಮೂರ್ತಿವೆತ್ತಿತು. ಇದೆಲ್ಲ ಗಾರ್ಕಿಯ ತಪಸ್ಸಿನ ಫಲ. ಮಹಾ ಸಿದ್ಧಿ.

## ಸ್ತುತ್ಯ ದಾನ

ಗಾರ್ಕಿ ಕಣ್ಮರೆಯಾದ. ಜಗತ್ತು ಪ್ರಚಲಿತ ಯುಗದ ಮಹಾ ಲೇಖಕನೊಬ್ಬನನ್ನು ಕಳೆದುಕೊಂಡಿತು. ಇದು ತುಂಬಿ ಬಾರದ ಹಾನಿ—ಕೇವಲ ರಷ್ಯಕ್ಕಷ್ಟೇ ಅಲ್ಲ—ಕಾಲ್ಕೆಳಗೆ ತುಳಿಯಲ್ಪಟ್ಟ ಅಖಿಲ ಪ್ರಪಂಚದ ಮಾನವ

ಜನಾಂಗದ ದೃಷ್ಟಿಯಿಂದ ಕೂಡ ಶಕ್ತಿ, ಉತ್ಸಾಹ, ಧೈರ್ಯಗಳೇ ಮೂರ್ತಿವೆತ್ತು ಬಂದಂತಿತ್ತು ಗಾರ್ಕಿಯ ವ್ಯಕ್ತಿತ್ವ. ಆತನ ಅಗಾಧವಾದ ಸಾರಳ್ಯ ಅಪ್ರತಿಮ ಪ್ರಾಮಾಣಿಕತೆ ಅವನನ್ನು ಬಹು ದೊಡ್ಡ ಸ್ಥಾನಕ್ಕೇರಿಸಿವೆ. ಆತನಿಗೆ ಉಪಕೃತರು ನಾವು ಎಂದು ಹೇಳುವ ರಷ್ಯರನ್ನಲ್ಲದೆ ಹೆಚ್ಚಿಗೆ ಏನೂ ಮಾಡಲಾರದ ನಾವು ಆತ ಲೆನಿನ್ನನ ವಿಷಯದಲ್ಲಿ ಬರೆದುದೇನೆಂದು ನೋಡೋಣ.

"ಅವನು ರಷ್ಯದವನು. ಆದರೆ ಅವನು ಬಹು ಕಾಲ ಜೀವಿಸಿದ್ದುದು ಮಾತೃಭೂಮಿಯನ್ನಗಲಿ. ಜನಾಂಗದ ಸಂಭಾವ್ಯ ಶಕ್ತಿ, ಅವರ್ಣನೀಯ ಬುದ್ಧಿಯ ಬೆಳವಣಿಗೆಯ ವಿಷಯದಲ್ಲಿ ನಾವು ಅನುಮಾನದ ಧ್ವನಿ ಎತ್ತಿದ್ದೆವು. ಅದಕ್ಕೆ ಅಜಾಗೃತವಾದ, ಜೇನರವನ್ನು ಬೇರೂರಿಸುವ, ಒತ್ತಾಯದ ಬಲವಿನ ಇತಿಹಾಸದ ಹಿನ್ನೆಲೆಯೇ ಕಾರಣ. ಆದರೆ ಅದಕ್ಕೆ ಬದಲು ಹೊನ್ನಿನ ನಕ್ಷತ್ರದೋಪಾದಿಯಲ್ಲಿ ರಷ್ಯನ್ ರಾಷ್ಟ್ರದಲ್ಲಿ ಆಶ್ಚರ್ಯಕರವಾಗಿ ಹೊಳೆದ ಲೆನಿನ್ ಮಹಾ ವ್ಯಕ್ತಿ, ಅದ್ಭುತ ಶಕ್ತಿ ಮರಣ ಮುಖದಲ್ಲಿ ಮರೆಯಾಗಿದ್ದಾನೆ. ಆತನ ಮರಣ ದಲಿತರ, ಬಡವರ, ಕೂಲಿಕಾರರ ನಾಯಕತ್ವಕ್ಕೆ ಎಂಥ ಕಾರ್ಗತ್ತಲೆಯನ್ನು ತಂದಿತೆಂಬುದು ಗಮನಾರ್ಹವಾದುದು."

ಮೇಲೆ ಹೇಳಿದ ಮಾತಿನಲ್ಲಿ ಕೇವಲ ಹೆಸರನ್ನಷ್ಟು ಬದಲಾಯಿಸಿ ಬಿಟ್ಟರೆ ಉಳಿದುವೆಲ್ಲ ಗಾರ್ಕಿಗೆ ಅಕ್ಷರಶಃ ಅನ್ವಯಿಸುತ್ತದೆಂಬುದು ಸ್ಪಷ್ಟವಾಗಿಯೇ ಇದೆ.

ಒಂದು ಸಲ ಸ್ಟ್ಯಾಲಿನ್ ಹೇಳಿದ—ಲೇಖಕ ಮಾನವ ಜನಾಂಗದ ಯಾಂತ್ರಿಕ, ಮತ್ತು ಗಾರ್ಕಿ ಅಂಥವರಲ್ಲಿ ಅತಿ ಶ್ರೇಷ್ಠ ಎಂದು.

———:———

# ಮ್ಯಾಕ್ಸಿಂ ಗಾರ್ಕಿಯೊಡನೆ ಭೇಟಿ *

ಅನುವಾದಕ: ಕೆ. ನಾಗೇಶರಾಯ

ಒಬ್ಬ ಬರಹಗಾರ ರಷ್ಯಾ ದೇಶದವನಾಗಿ ಹುಟ್ಟುವುದು ಅವನ ಸುದೈವವೆಂದೇ ಹೇಳಬೇಕು. ಕೂಡಲೇ ಯೂರೋಪಿನಲ್ಲೆಲ್ಲಾ ಅವನು ಸಂಪೂರ್ಣ ಬೆಲೆಯಿಂದ ಸನ್ಮಾನಿಸಲ್ಪಡುವನು. ಆದರೆ ಅದು ಯೂರೋಪಿನಿಂದ ಆಚೆಗೆ ಮಾತ್ರ ಇಲ್ಲ. ಕುಪ್ರಿನ್ನನಾಗಲಿ, (Kuprin) ಚೆಕಾಫ್ (Chekov) ಆಗಲಿ ಜರ್ಮನಿ ಅಥವಾ ಅಮೇರಿಕಾದಲ್ಲಿ ಹುಟ್ಟಿದ್ದರೆ ಯಾರಿಗಾದರೂ ಅವರ ವಿಷಯ ತಿಳಿಯುತ್ತಿತ್ತೆ ? ಗಾರ್ಕಿ ಪ್ರಪಂಚದಲ್ಲೆಲ್ಲಾ ಹೆಸರುವಾಸಿಯಾಗಿರುವುದು ಆತನು ತನ್ನ ಕತೆ ಕಾದಂಬರಿಗಳಲ್ಲಿ ತೋರಿಸಿರುವ ವಿಶೇಷ ಪ್ರತಿಭೆಯಿಂದೇನಲ್ಲ; ಆದರೆ ಅಮೇರಿಕಾ ದೇಶದವರಿಂದ ಅವನು ಅನುಭವಿಸಿದ ಹಿಂಸೆಗಾಗಿ. ಯಾಕೆಂದರೆ ಓ ಹೆನ್ರಿ (O Henry) ಗಾರ್ಕಿಗಿಂತ ಮೇಲ್ಪಟ್ಟವ ಬರಹಗಾರನೆಂಬುದನ್ನು ಸುಲಭವಾಗಿ ತೋರಿಸಬಹುದು.

ಅವನ 'ಆತ್ಮ ಕತೆ' ನೂರಾರು ಪುಟಗಳನ್ನು ತಿರುವಿ ಹಾಕಿದ್ದೇನೆ. ಒಂದು ಕಡೆ ಮಾತ್ರ ಆತನು ಕೊಟ್ಟಿರುವ ಅಜ್ಜಿಯ ಚಿತ್ರ ಗಯಟೆಯ Wahrhiet and Dichling ನಲ್ಲಿ ಬರುವ ಅಜ್ಜಿಯ ಚಿತ್ರವನ್ನು ಮನಸ್ಸಿಗೆ ತರುತ್ತದೆ. ಅದೊಂದು ಬಿಟ್ಟರೆ ಅಂಥಾ ಹೆಚ್ಚಿಗೆಯಾಗಿ ಕಾಣುವ ಯಾವ ವಿಷಯವೂ ಅದರಲ್ಲಿ ತೋರಲಿಲ್ಲ. ಅವನು ಕೊಟ್ಟಿರುವ ಚಿತ್ರಗಳಲ್ಲಿ ಯಾವ ಪಾತ್ರದ ದರ್ಶನವಾಗಲಿ ಅಥವಾ ಲಕ್ಷ್ಯಾರ್ಹವಾದ ಅಲೌಕಿಕ ಬೆಳಕಾಗಲಿ ಕಾಣಬರುವದಿಲ್ಲ.

ಆದರಲ್ಲಿ ಬರುವ ಒಂದು ದೃಶ್ಯವನ್ನು ತೆಗೆದುಕೊಳ್ಳೋಣ. ಒಬ್ಬ ಜಿಪ್ಸಿಯು ರಾತ್ರಿಯ ಹೊತ್ತಿನಲ್ಲಿ ಕುಣಿಯುವ ಚಿತ್ರವನ್ನು ಕೊಟ್ಟಿದ್ದಾನೆ. ಅವನ ಕುಣಿತದ ಜೊತೆಗೆ ಅವನ ಚಿಕ್ಕಪ್ಪನು 'ಗಿಟಾರ್' (Guitar) ಎಂಬ ವಾದ್ಯವನ್ನು ನುಡಿಸುತ್ತಾನೆ. ಆ ಜಿಪ್ಸಿ ಹುಡುಗನು ಮೈ ಮೇಲೆ ದೆವ್ವ ಬಂದವನ ಹಾಗೆ ಕುಣಿಯುತ್ತಾನೆ. ಇದ್ದಕ್ಕಿದ್ದ ಹಾಗೆ ಅಲ್ಲಿದ್ದವರು ಒಳಗಡೆ

* Meetings with Maxim Gorki by Frank Harris

ಇದ್ದ ಅಜ್ಜಿಯನ್ನು ಕರೆಯುವರು. ಆಕೆಯೂ ಕೂಡ ಬಂದವಳೇ ಕುಣಿಯಲು ಪ್ರಾರಂಭಿಸುವಳು. ಈ ಗಿಟಾರಿನ ಸಂಗೀತ ಈ ವಿಚಿತ್ರ ಪ್ರಾಣಿಗಳಲ್ಲಿ-ಹುಡುಗರಾಗಲಿ-ಮುದುಕರಾಗಲಿ-ಕಷ್ಟ ಪಡುವವರ ಬಗ್ಗೆ ಮರುಕವನ್ನೂ ಮತ್ತು ತಮ್ಮ ಹೀನ ಅದೃಷ್ಟದ ಬಗ್ಗೆ ಅನುಕಂಪವನ್ನೂ ಹುಟ್ಟಿಸುವುದಂತೆ. ಆಗ ಚಿಕ್ಕ ಮಕ್ಕಳಾದಿಯಾಗಿ ಎಲ್ಲರ ಕಣ್ಣಿನಲ್ಲೂ ನೀರೂರುವುದು. ಸ್ವಲ್ಪಕಾಲ ದುಃಖಪೂರಿತವಾದ ಸನ್ನಿವೇಶ ಅವರನ್ನು ಮುಸುಕುವುದು.

ಕೂಡಲೇ ಎಲ್ಲರೂ ಕುಡಿಯುವುದಕ್ಕೆ ಪ್ರಾರಂಭಿಸುವರು. ಚಿಕ್ಕ ಹುಡುಗನೂ ಸಹ ಆ ಸಿಹಿ ಪಾನಕದ ರುಚಿ ನೋಡುತ್ತಾನೆ. ತಕ್ಷಣವೇ ಸುಖದ ಮತ್ತು ತೃಪ್ತಿಯ ಭಾವನೆ ಅವರ ಹೃದಯವನ್ನು ತುಂಬುವುದಂತೆ. ಆಗ ಎಲ್ಲರೂ ಹುಚ್ಚುಹುಚ್ಚಾಗಿ ವಿನೋದದ ಹಾಡುಗಳನ್ನು ಹಾಡಲು ಮೊದಲು ಮಾಡುವರು.

ನಾವೆಲ್ಲಾ ರಷ್ಯಾದೇಶದ ಈ ದೃಶ್ಯಗಳ ಚಿರಪರಿಚಿತವಾಗಿರುವೆವು. ಆದರೆ ಯಾವುದೋ ಒಂದು ಚಿಕ್ಕ ಕಾರಣಕ್ಕಾಗಿ ಮೊಮ್ಮಗನನ್ನು ಮೂರ್ಛೆ ಹೋಗುವ ತನಕಾ ಹೊಡೆದು, ವಾರಗಟ್ಲೆ ಅವನು ಗುಣಮುಖವಾಗುವವರೆಗೂ ಆವನ ಆರೈಕೆಯಲ್ಲಿ ತೊಡಗುವ ಆ 'ಅಜ್ಜನ' ಚಿತ್ರವೇನೋ ನನಗೆ ಬಗೆ ಹರಿಯದಾಗಿದೆ. ಇವನ್ನು ನೋಡಿದರೆ ರಷ್ಯಾ ದೇಶದವರ ರಕ್ತದಲ್ಲೇ ಒಂದು ಕೆಟ್ಟ ಚಾಳಿ ಬೆರೆತಿರುವ ಹಾಗೆ ಕಾಣುತ್ತದೆ. ಯಾಕೆಂದರೆ ಪ್ರಪಂಚದ ಇನ್ನಾವ ಭಾಗದಲ್ಲೂ ಮಕ್ಕಳನ್ನು ಹೀಗೆ ಹೊಡೆಯುವುದಿಲ್ಲ. ಗಾರ್ಕಿಯ ಈ ಪುಸ್ತಕ ಯಾವ ವೈಶಿಷ್ಟ್ಯದಿಂದಲ್ಲದಿದ್ದರೂ ಓದಲು ಮಾತ್ರ ಸುರಸವಾಗಿದೆ. ಆದರೂ ಅದು ಬಹಳವಾಗಿ ಹೊಗಳಲ್ಪಟ್ಟಿದೆ. ಗಾರ್ಕಿಯ ಹೆಸರು ಅಮರರ ಪೈಕಿ ಅವನೂ ಒಬ್ಬನೋ ಎನ್ನುವ ಹಾಗೆ ಎಲ್ಲರ ಬಾಯಲ್ಲೂ ಇದೆ.

ಸಾರೋವಿನ (Sarrow) ಕ್ಷಯರೋಗದ ಆಸ್ಪತ್ರೆಯಲ್ಲಿ ಕ್ಷಯರೋಗದಿಂದ ನರಳುತ್ತಿದ್ದರೂ ನಾನು ಅವನನ್ನು 'ಅದೃಷ್ಟಶಾಲಿ' ಯೆಂದೇ ಹೇಳುತ್ತೇನೆ. ಸಾರೋವಿಗೆ ಬರ್ಲಿನ್ನಿಂದ ಮೂರು ಗಂಟೆಗಳ ಪ್ರಯಾಣ ಅಷ್ಟೇ. ಗಾರ್ಕಿಗೆ ಇಟಾಲಿಯನ್ ಭಾಷೆ ತಿಳಿಯುತ್ತದೆಯೆಂದು ಗೊತ್ತಾಗುತ್ತಲೂ ಅವನನ್ನು ಹೋಗಿ ನೋಡುವುದಾಗಿ ನಿರ್ಧರಿಸಿದೆ. ರಷ್ಯಾದೇಶದ ಬರಹಗಾರನಾದ ಇನಾಟಿಫನು (Ignatief) ನಮ್ಮನ್ನು ಭೇಟಿ ಮಾಡಿಸಲು ಒಪ್ಪಿ

ಕೊಂಡನು. ಅಂತೆಯೇ ಒಂದು ವಾಗಿಯ ಬೆಳಿಗ್ಗೆ (Scheffauer) ಷಾಫರ್ ಮತ್ತು ನಾನು ಇನಾಟೆಫನ ಜೊತೆ ಅವನನ್ನು ಕಾಣಲು ಹೊರಟೆವು.

ಸಾರ್ಯೋವು ಬೇಸಿಗೆಯ ವಿಹಾರ ಸ್ಥಳ. ಸುತ್ತಲೂ ಇದ್ದ ಪೈನ್ ಅರಣ್ಯಗಳಿಂದ ಹೆಸರುವಾಸಿಯಾಗಿದೆ. ಅಲ್ಲಿಗೆ ಹೋಗುವಷ್ಟೊತ್ತಿಗೆ ತಿಂಡಿ ತೆಗೆದುಕೊಳ್ಳುವ ವೇಳೆಯಾಗಿದ್ದರಿಂದ ಹತ್ತಿರದಲ್ಲಿದ್ದ ಹೋಟಲಿಗೆ ಮುಂಚೆ ಹೊರಟೆವು. ಕಪ್ಪನೆಯ ಆ ಪೈನ್ ರೆಂಬೆಗಳ ಮೇಲೆ ಪುಸ್ತಕಗಳ ಮಾದರಿ ಯಲ್ಲಿ ಹಿಮವು ಹರಡಿತ್ತು. ಆಗ ಸೂರ್ಯನು ಮೆಲ್ಲನೆ ಹಿಂದೆ ಸರಿಯುತ್ತಿದ್ದನು. ಯಾಕೋ ಏನೋ ಆ ಮಬ್ಬಾದ ಪೈನ್ ಗಿಡಗಳೂ ಆ ಹಿಮ ಮತ್ತು ಮುಳು ಗುತ್ತಿದ್ದ ಸೂರ್ಯ ಇವೆಲ್ಲವೂ ಸಾವನ್ನು ಮನಸ್ಸಿಗೆ ತಂದವು. ನಾವೆಲ್ಲರೂ ಕುಗ್ಗಿದವರಾಗಿ ಮೌನದಿಂದ ಮುಂದೆ ಸಾಗಿದೆವು.

ಆ ಸುಂದರವಾದ ಸಾನೆಟೋರಿಯಮ್‌ನ್ನು ಪ್ರವೇಶಿಸಿದ ಕೂಡಲೇ ಒಬ್ಬ ಚೆಲುವೆಯಾದ ಹುಡುಗಿ ಮೆಟ್ಟಿಲಿಳಿದು ಗಾರ್ಕಿ ನಮ್ಮನ್ನು ನೋಡು ವುದಾಗಿ ಹೇಳಿದಳು. ಕೂಡಲೇ ಆ ಮೆಟ್ಟಲುಗಳನ್ನು ಹತ್ತಿದನಂತರ ಒಂದು ಕೋಣೆಗೆ ಬಂದೆವು. ನಮ್ಮನ್ನು ಕರೆತಂದ ಹುಡುಗಿ ಎಡಬಾಗಲಿ ನಿಂದ ಅದೃಶ್ಯವಾದಳು. ಅವಳು ಹೋದ ಒಂದೆರಡು ನಿಮಿಷದನಂತರ ಬಂದ ಗಾರ್ಕಿಯ ಅಸಭಾವಾಕಾರದಿಂದ ನನಗೆ ದಂಗು ಬಡಿದ ಹಾಗೆ ಆಯಿತು.

ಟಾಲಸ್ಟಾಯಿಯನ್ನು ಮುಂಚೆ ಎತ್ತರವಾದ ಗಂಭೀರ ಪ್ರಾಯದ ವ್ಯಕ್ತಿ ಎಂದು ಭಾವಿಸಿಕೊಂಡಿದ್ದೆ. ಆದರೆ ಅವನನ್ನು ನೋಡಿದ ಮೇಲೆ ಅವನು ಸಣ್ಣ ಗಿಡ್ಡಾಕಾರದ ವ್ಯಕ್ತಿ ಎಂದು ಗೊತ್ತಾಯಿತು. ಅಂತೆಯೇ ಗಾರ್ಕಿಯೂ ಕೂಡ ಒಬ್ಬ ಪುಟ್ಟಾಕಾರದ ಬಲಿಷ್ಠನಾದ ವ್ಯಕ್ತಿ ಎಂದು ಮನಸ್ಸಿ ನಲ್ಲಿ ಎಣಿಸಿದ್ದೆ. ಆದರೆ ಅವರ ಬದಲು ಕಂಡದ್ದು ಆರಡಿಯ, ತೆಳುವಾದ, ಚುರುಕಾದ ವ್ಯಕ್ತಿಯನ್ನು. ರಷ್ಯಾ ಭಾಷೆಯಲ್ಲಿ ಇನಾಟೆಫನಿಗೆ ವಂದನೆಯ ನ್ನರ್ಪಿಸಿದ ಬಳಿಕ ನಮ್ಮನ್ನು ಅವನ ಕೋಣೆಗೆ ಕರೆದೊಯ್ದನು. ಆಗ ನನಗೆ ಅನ್ನಿಸಿತು – ಇವನು ಒಬ್ಬ ಜರ್ಮನ್ ಕೈಸರ್ ಇದ್ದರೂ ಇರಬಹುದೆಂದು.

ನಾನು ಒಳಗೆ ಹೋಗುವುದರೊಳಗಾಗಿ ಅವನು ಕುರ್ಚಿಯ ಮೇಲೆ ಕುಳಿತುಬಿಟ್ಟಿದ್ದನು. ಕೈ ಸಂಜ್ಞೆಯಿಂದ ಒಂದು ಕುರ್ಚಿಯ ಕಡೆ ತೋರಿಸಿ

ದನು. ಇನಾಟಿಫನ ಬಳಿ ರಷ್ಯಾ ಭಾಷೆಯಲ್ಲಿ ಮಾತನಾಡಲು ತೊಡಗಿದಾಗ ಅವನನ್ನು ಪರೀಕ್ಷಿಸಲು ಅನುವಾದೆ. ಗಲ್ಲದಿಂದ ಕೆಳಗಿನವರಿಗೂ ಬರುವಂತಿದ್ದ ನೀಲಿ ಉಣ್ಣೆಯ ಉಡುಪನ್ನು ಬಹಳ ಉದಾಸೀನಭಾವದಿಂದ ಹೊದ್ದಿದ್ದನು. ಅವನ ಕೂದಲಿನ ಬಣ್ಣ ಬೂದು ಬಣ್ಣ. ಮಧ್ಯೆ ಮಧ್ಯೆ ನೆರೆ ಕೂದಲುಗಳು. ಚೊಕ್ಕಟವಾಗಿ ಕ್ಷೌರ ಮಾಡಿಕೊಂಡಿದ್ದ ಕೆನ್ನೆಗಳು. ಅವನ ಮುಖದ ವಿನ್ಯಾಸ ಅಸಾಧಾರಣವಾಗಿ ಕ್ರಮಹೀನವಾಗಿತ್ತು. ಅದಕ್ಕಿಂತ ಸಣ್ಣದಾದ ಮುಂದಲೆಯನ್ನಾಗಲೀ ಅಥವಾ ಅಷ್ಟು ಏರಿದ ಕೆನ್ನೆಯ ಖಂಡಗಳನ್ನಾಗಲೀ ನಾನು ಬೇರೆ ನೋಡಿರಲಿಲ್ಲ. ಆದರೂ ಅವನದು ಭಾವಪೂರಿತವಾದ ಮುಖ. ಅವನ ಕಣ್ಣು ಮತ್ತು ಗಲ್ಲಗಳು ಮಾತ್ರ ಸಾಧಾರಣ ರೀತಿಯಲ್ಲಿದ್ದವು. ಅವನು ಚಿಕ್ಕೆಯ ಹಾಗೆ ತೆಳವು. ಆದರೂ ಚಲನವಲನೆಯಲ್ಲಿ ಬಹಳ ಚುರುಕು. ಆಗಾಗ ಕೆಮ್ಮುತ್ತಿದ್ದಾಗ ಕ್ಷಯರೋಗದಿಂದ ಕೂಡಿದ ಅವನ ದೇಹವೆಲ್ಲಾ ಅಲ್ಲಾಡುತ್ತಿತ್ತು.

ಆ ಸ್ವಾಗತವೇ ನನಗೆ ನಗುವನ್ನುಂಟು ಮಾಡುತ್ತದೆ. ಷಾಫರ್, ಇನಾಟಿಫ್ ಮತ್ತು ನಾನು ಮೂವರು ಒಂದು ಪಟ್ಟವನ್ನು ಮುಟ್ಟಿದ ಬರಹಗಾರರು. ಅವನು ಒಬ್ಬ ಒಕ್ಕಲಿಗ. ಖಂಡಿತವಾಗಿಯೂ ಷಾಫರ್‌ಗಿಂತ ಹೆಚ್ಚಿನ ಪ್ರತಿಭೆಯೇನೂ ಅವನಲ್ಲಿ ಇರಲಿಲ್ಲ. ಆದರೂ ಅವನು ರಾಜತ್ವದ ಪಾದಗಳಲ್ಲಿ ತೋಳಲುತ್ತಿರುವ ತೊತ್ತು ಮಕ್ಕಳಂತೆ ನಮ್ಮನ್ನು ಭಾವಿಸುತ್ತಾನೆ.

ಅವನ ಒರಟುತನವನ್ನು ನೋಡಿ ನನಗೇ ನಗು ಬರುತ್ತದೆ. ಆದರೂ ಅಮೇರಿಕಾ ದೇಶದ ಜನರಲ್ಲಿ ಅಪನಂಬಿಕೆ ಮತ್ತು ಅವಿಶ್ವಾಸವನ್ನು ತೋರಿಸಲು ಗಾರ್ಕಿಗೆ ಸರಿಯಾದ ಕಾರಣವಿದೆಯೆಂದು ಜ್ಞಾಪಕಬರಲು ಸುಮ್ಮನಾದೆ. ಯಾಕೆಂದರೆ ಅಮೇರಿಕಾದ ಬರಹಗಾರರು ಆಪತ್ಕಾಲದಲ್ಲಿ ಅವನಿಗೆ ಕೈ ಕೊಟ್ಟಿದ್ದರು.

ಸೋಮವಾರ ಅಥವಾ ಮಂಗಳವಾರ ರಷ್ಯಾ ಭಾಷೆಯನ್ನು ಇಂಗ್ಲೀಷಿಗೆ ಸರಿಯಾಗಿ ತರ್ಜುಮೆ ಮಾಡುವ ಒಬ್ಬ ಹೆಂಗಸು ಬರುವಳೆಂಬುದಾಗಿ ಗಾರ್ಕಿ ಹೇಳುವನೆಂದು ಇನಾಟಿಫನು ನುಡಿದನು.

"ಹಾಗಾದರೆ ಇಟಾಲಿಯನ್‌ನಲ್ಲಿ ನನ್ನೊಡನೆ ಮಾತನಾಡುವುದಿಲ್ಲವೆ?" ಎಂದು ನಾನು ಕೇಳಿದೆ. ಇನಾಟಿಫ್‌ನು ಅದನ್ನು ಗಾರ್ಕಿಗೆ ತರ್ಜುಮೆ

ಮಾಡಿ ಹೇಳಲು ಗಾರ್ಕಿ ತನ್ನ ಬಲಗೈಯಿಂದ ಮೇಜನ್ನು ತಟ್ಟುತ್ತಾ ಒರಟಾಗಿ ‘ ಇಲ್ಲಾ ! ಇಲ್ಲಾ ! ’ ಎಂದನು. ”

ನಾನು ಎಲ್ಲೋ ತಪ್ಪಿರಬೇಕೆಂದು ಭಾವಿಸಿ ಇಟಾಲಿಯನ್ನಿನಲ್ಲೇ ಮಾತನಾಡಲು ಪ್ರಾರಂಭಿಸಿದೆ. “ಗಾರ್ಕಿಯವರೇ ತಮ್ಮ ‘ಚಿಕ್ಕಂದಿನ ನೆನಪು’, ಗಳನ್ನು ಈಗ ತಾನೆ ಓದಿ ಮುಗಿಸಿದೆ. ನೀವು ಕೊಟ್ಟಿರುವ ರಷ್ಯಾದ ಗೃಹಜೀವನವು ನನ್ನ ಮನಸ್ಸಿಗೆ ಬಹಳ ಹಿಡಿಯಿತು. ಆದರೆ ಒಂದು ಪ್ರಶ್ನೆ ಕೇಳಬೇಕೆನ್ನಿಸಿರುವುದು. ಅದರಲ್ಲಿ ನಿಮ್ಮ ಅಕ್ಕಪಕ್ಕದವರ ವಿಚಾರವೇ ಇಲ್ಲ; ನಿಮ್ಮ ಸಂಸಾರದ ಹೊರಗಿನವರಾದ ಯಾವ ಹುಡುಗ ಹುಡುಗಿಯರ ಪರಿಚಯವೂ ನಿಮಗೆ ಆಗಲಿಲ್ಲವೆ ? ಅಂದರೆ ಪ್ರೇಮಿಕ ಜೀವನದ ಪರಿಚಯ ತಮಗಾಗಲಿಲ್ಲವೆ ? ಅಥವಾ ಅವನ್ನರಿಯುವ ಆಸೆಯೂ ಕೂಡ ಇರಲಿಲ್ಲವೆ ?”

ನಾನು ಪ್ರಮಾಣಮಾಡಿ ಬೇಕಾದರೂ ಹೇಳುತ್ತೇನೆ. ನಾನು ಮಾತನಾಡಿದ್ದು ಅವನಿಗೆ ಅರ್ಥವಾಯಿತೆಂದು. ಏಕೆಂದರೆ ಅವನ ಕಣ್ಣುಗಳು ನನ್ನನ್ನೇ ದೃಷ್ಟಿಸತೊಡಗಿದವು ಅವನ ಭಾವನಾಪ್ರಧಾನವಾದ ಮುಖ ನಾನೆತ್ತಿದ ಪ್ರಶ್ನೆಯನ್ನೇ ಅವಲೋಕಿಸುತ್ತಿತ್ತು. ಆದರೆ ಇಟಾಲಿಯನ್ ಭಾಷೆಯಲ್ಲಿ ನನಗೆ ಉತ್ತರಕೊಡದೆ ಇನಾಟಿಫ್‌ನ ಕಡೆ ತಿರುಗಿ ಒತ್ತಿಒತ್ತಿ ರಷ್ಯಾ ಭಾಷೆಯಲ್ಲೇ ಮಾತನಾಡಿದನು. ಇನಾಟಿಫ್‌ನು “ಗಾರ್ಕಿಗೆ ಇಟಾಲಿಯನ್ ಭಾಷೆ ಬರುವುದಿಲ್ಲ. ಸೋಮವಾರ ಅಥವಾ ಮಂಗಳವಾರ ಒಬ್ಬ ನಿಪುಣಳಾದ ಭಾಷಾಂತರಕಾರಳು ಬರುವಳು” ಎಂಬುದಾಗಿ ತರ್ಜುಮೆಮಾಡಿ ಹೇಳಿದನು.

ಗಾರ್ಕಿ ನಮ್ಮನ್ನೂ ನಮ್ಮ ಭೇಟಿಯ ಉದ್ದೇಶವನ್ನು ತಪ್ಪಾಗಿ ಭಾವಿಸಿದ್ದಾನೆಂದು ನಮಗೆ ಸ್ಪಷ್ಟವಾಗುತ್ತಾ ಬಂದಿತು. ಹೆಚ್ಚಿಗೆ ಏಕೆ ಅವನನ್ನು ಸುಮ್ಮನೆ ಕಾಡುವುದು ? ಬೋಲ್ಷವಿಕ್ ಆಡಳಿತವನ್ನು ಅವನು ಖಂಡಿಸುವನೆಂದು ತಿಳಿದುಬಂದು ನಿರಾಶೆಗೊಂಡು ಹೋದ ಅಮೇರಿಕಾ ಪ್ರತಿನಿಧಿಗಳಿಂದ ಸಾಕಷ್ಟು ಅವನು ಕಾಡಲ್ಪಟ್ಟಿದ್ದನು. ಆದುದರಿಂದ ನ್ಯಾಯವಾಗಿ ನಮ್ಮಲ್ಲಿ ಅವನಿಗೆ ನಂಬಿಕೆ ಬರಲಿಲ್ಲ. ಆದರೂ ಇನ್ನೊಂದು ಪ್ರಯತ್ನಮಾಡಿದೆ. ಇನಾಟಿಫ್‌ನ ಕಡೆ ತಿರುಗಿ “ಗಾರ್ಕಿ ತನ್ನ ಆತ್ಮಕತೆ ಮುಂದುವರಿಸುತ್ತಿದ್ದಾನೆಯೇ ? ಹಾಗಾದರೆ ಅವನ ಪ್ರಣಯಗಳನ್ನು ಯಥಾರ್ಥವಾಗಿ ಅದರಲ್ಲಿ

ತಿಳಿಸುವನೇ" ಎಂದೆ. ಅದನ್ನು ಕಷ್ಟಪಟ್ಟು ಅವನು ಭಾಷಾಂತರ ಮಾಡಿದ ಮೇಲೆ "ಗಾರ್ಕಿ ತನ್ನ ಜೀವನ ಚರಿತ್ರೆಯನ್ನು ಮುಂಬರಿಸುತ್ತಿದ್ದಾನೆ ; ಆದರೆ ಅಷ್ಟೇನು ಯಾವುದನ್ನೂ ಬಿಚ್ಚಿ ಹೇಳುವುದಿಲ್ಲ'' ವೆಂಬುದಾಗಿ ತಿಳಿಯಿತು.

ಕೂಡಲೇ ನಾನು ಎದ್ದೆ. ಗಾರ್ಕಿಗೆ ಆಶ್ಚರ್ಯವಾಯಿತು. ಷಾಫರ್ ಮತ್ತು ನಾನು ಹೊರಗೆ ಹೊರಟೆವು. ಇನಾಟಿಫ್‌ನು ಸ್ವಲ್ಪ ಹೊತ್ತು ಹಿಂದೆಯೇ ನಿಂತನು. ಗಾರ್ಕಿಗೆ ನಮ್ಮ ಅನಿರೀಕ್ಷಿತ ನಿರ್ಗಮನದಿಂದ ಆಶ್ಚರ್ಯವಾದ ಹಾಗೆ ಕಾಣಬಂದಿತು. ನಮ್ಮ ಹಿಂದೆ ಬಂದು ಇನ್ನು ಕೆಲವು ದಿನಗಳೊಳಗೆ ರಷ್ಯಾ ಭಾಷೆಯನ್ನು ತಿಳಿದ ಸೊಗಸಾಗಿ ಮಾತನಾಡುವ ಒಬ್ಬ ಇಂಗ್ಲೀಷ್ ಹೆಣ್ಣು ಮಗಳು ಬರುವಳೆಂದು ಭರವಸೆ ಇತ್ತು. "ಪುನಃ ಬರುವಿರಾ?'' ಎಂದು ಕೇಳಿದ.

ಅವನ ಕಡೆ ನಗುತ್ತಾ ತಿರುಗಿದೆ. ನನಗೆ ಅವನಲ್ಲಿ ಒಂದು ಅಸಾಂಸ್ಕೃತಿಕತೆ - ಒಂದು ಸಾಧಾರಣ ರೀತಿ - ಕಾಣಬಂದಿತು. ''ಆರು ಘಂಟೆಯ ಪ್ರಯಾಣಕ್ಕೆ ಈ ಸಂದರ್ಶನದಿಂದ ಸಂಪೂರ್ಣ ಪ್ರತಿಫಲ ದೊರೆಯಿತೆಂದು ತಿಳಿಸಿಬಿಡಿ'' ಎಂಬ ದಾಗಿ ಇನಾಟಿಫ್‌ಗೆ ಹೇಳಿದೆ.

ಬರ್ಲಿನ್‌ಗೆ ಹಿಂದಿರುಗುತ್ತಿದ್ದಾಗ ಷಾಫರ್‌ನ ಕೂಡ ಗಾರ್ಕಿಯು ವರ್ಣಿಸಲಸದಳವಾದ ಒರಟುತನವನ್ನು ಸಹಿಸಿ ಮಾತನಾಡಲಿಲ್ಲ. ಆಗ ಟಾಲಸ್ಟಾಯಿಯೊಡನೆ ಗಾರ್ಕಿ ನಡೆಸಿದ್ದ ಸಂಭಾಷಣೆಗಳ ವರದಿಯು ನನಗೆ ಜ್ಞಾಪಕಕ್ಕೆ ಬಂದಿತು. ಟಾಲಸ್ಟಾಯಿ ಉಪಯೋಗಿಸುತ್ತಿದ್ದ ಅಶ್ಲೀಲ ಪದಗಳಿಂದ ಗಾರ್ಕಿ ಸಿಟ್ಟುಗೊಳ್ಳುತ್ತಿದ್ದುದೂ ಜ್ಞಾಪಕಕ್ಕೆ ಬಂದಿತು. ಈ ವಿಚಾರವನ್ನು ನಮ್ಮ ಮನಸ್ಸಿಗೆ ತಂದುಕೊಳ್ಳುವುದು ಒಳ್ಳೆಯದು. ಏಕೆಂದರೆ ಇಬ್ಬರ ವ್ಯಕ್ತಿತ್ವವೂ ಇದರಿಂದ ಹೊರಬೀಳುವುದು. ಗಾರ್ಕಿ ಅದನ್ನು ಈ ರೀತಿಯಲ್ಲಿ ಹೇಳಿದ್ದಾನೆ.

"ಟಾಲಸ್ಟಾಯಿ ಮನಸ್ಸು ಮಾಡಿದರೆ ಬಹು ಸರಸವಾಗಿಯೂ ಸೂಕ್ಷ್ಮವಾಗಿಯೂ ಮಾತನಾಡುತ್ತಾನೆ. ಅವನ ಮಾತುಗಳು ಸುಲಭವಾಗಿದ್ದರೂ ರಮಣೀಯವಾಗಿಯೂ ಮನೋಹರವಾಗಿಯೂ ಇವೆ. ಆದರೆ ಕೆಲವು ವೇಳೆ ಕೇಳಲು ಮಾತ್ರ ಮನ ನೋಯುವಷ್ಟು ಅಹಿತವಾಗಿರುತ್ತಿತ್ತು. ಹೆಂಗಸರ ವಿಚಾರದಲ್ಲಿ ಅವನಾಡುತ್ತಿದ್ದ ಮಾತುಗಳನ್ನು ಕಂಡರೆ ನನಗೆ ಆಗುತ್ತಿರ

ಲಿಲ್ಲ. ಏಕೆಂದರೆ ಅವು ಹೇಳಲಾರದಷ್ಟು ಅಸಭ್ಯವಾಗಿರುತ್ತಿದ್ದವು. ಅವನ ಮಾತುಗಳಲ್ಲಿ ಒಂದು ವಿಧವಾದ ಕೃತಕತೆಯೂ ಅಪ್ರಮಾಣಿಕತನವೂ ಇರುತ್ತಿತ್ತು. ಯಾವಾಗಲೂ ತನ್ನ ವಿಚಾರವನ್ನೇ ಹೆಚ್ಚಾಗಿ ಆಡುತ್ತಿದ್ದನು. ಪರಿಚಯವಾದ ಸಾಯಂಕಾಲವೇ ತನ್ನ ಸ್ವಂತ ಕೋರಡಿಗೆ ನನ್ನನ್ನು ಕರೆದು ಕೊಂಡು ಹೋಗಿ ನನ್ನ 'ವೆರಿನ್ನ ಓಲಿಸ್ಸೋವ' ಮತ್ತು 'ಇಪ್ಪತ್ತಾರು ಗಂಡ ಸರು ಒಬ್ಬಳು ಹುಡುಗಿ' ವಿಷಯವಾಗಿ ಮಾತನಾಡಿದನು. ಸರಳವಾಗಿಯೂ ಮತ್ತು ಬಹಳ ಕಟುತರವಾಗಿಯೂ ಅವನು ಮಾತನಾಡಿದ ರೀತಿಯನ್ನು ಕಂಡು ನಾನು ದಿಙ್ಮೂಢನಾದೆ. ಹದಿನೈದು ವರ್ಷ ಪ್ರಾಪ್ತಳಾದ ಹುಡುಗಿ ಆರೋಗ್ಯ ದೃಢಕಾಯಳಾಗಿದ್ದರೆ ಅವಳಲ್ಲಿ ಸ್ಪರ್ಶನ ಮತ್ತು ಆಲಿಂಗನದ ಆಸೆ ಇದ್ದೇ ಇರುತ್ತದೆ. ಅವಳ ದೇಹವು – ಮನಸ್ಸಿಗೆ ವ್ಯತಿರಿಕ್ತವಾಗಿ ಕಂಡರೂ, ಆ ಅನಿರ್ವಚನೀಯವಾದುದೇ ಸರಿಯೆಂದು ಭಾವಿಸುತ್ತೇನೆ. ನೀನು ಪೆರಿಂಕಾನ ಆರೋಗ್ಯದೃಢಕಾಯಳೆಂದು ವರ್ಣಿಸುತ್ತೀ. ಆದರೆ ಅವಳ ಭಾವನೆಗಳು ನಿಸ್ಸಾರವಾದವುಗಳು – ಅದು ಜೀವನದ ನೈಜವಾದ ಚಿತ್ರವಲ್ಲ.''

ಅನಂತರ ಹೊಲಸು ಮಾತುಗಳನ್ನು ಧಾರಾಕಾರವಾಗಿ ಬಳಸುತ್ತಾ ನನ್ನ 'ಇಪ್ಪತ್ತಾರು ಗಂಡಸರು ಒಬ್ಬಳು ಹುಡುಗಿ'ಯ ವಿಚಾರವಾಗಿ ಮಾತನಾಡಿದ. ಆಗ ಸ್ವಲ್ಪ ನನ್ನ ಮನಸ್ಸು ನೋಯಿತು. ಆದರೆ ಆಮೇಲೆ ಆ ಹೊಲಸು ಮಾತುಗಳನ್ನು ಅವನಿಗೆ ಪ್ರಸ್ತುತವಾಗಿ ಕಂಡುಬಂದುದರಿಂದ ಉಪಯೋಗಿಸಿದನೆಂದು ನನಗೆ ತಿಳಿಯಬಂದಿತು. ಆಗ ಕೇಳಲು ಮಾತ್ರ ಬಹಳ ಅಸಹ್ಯವಾಗುತ್ತಿತ್ತು. ನಾನು ಅದೊಂದಕ್ಕೂ ಉತ್ತರ ಕೊಡದಿರಲು ಅವನು ಇದ್ದಕಿದ್ದ ಹಾಗೆಯೇ ದಯಾಶೀಲನಾಗಿ ನಾನು ಏನು ಮಾಡುತ್ತೇನೆ – ಎಂಬ ಪ್ರಶ್ನೆಗಳನ್ನು ಕೇಳಲು ಮೊದಲು ಮಾಡಿದನು.''

ಟಾಲಸ್ಟಾಯಿ ಶ್ರೀಮಂತ ಹಾಗೂ ತಾನು ಬಡವ – ಅದ್ದರಿಂದ ಯಾವ ಎಣಿಕೆಗೂ ದೂರವಾದವನೆಂಬದಾಗಿ ಗಾರ್ಕಿ ಯೋಚಿಸಿದ್ದ. ಆದರೆ ಟಾಲ ಸ್ಟಾಯಿಗೆ ಆ ತರದ ಒಣಜಂಭವೇನೂ ಇರಲಿಲ್ಲ.

ಗಾರ್ಕಿಯನ್ನು ಭೇಟಿಮಾಡಿದ ಮೇಲೆ ವಾಸ್ತವಿಕವಾದ ವಿಚಾರ ತಿಳಿಯಿತು. ಅವನು ನೈಜವಾದ ಮಾತಿನ ಮಾನ್ಯತೆಯನ್ನು ಶಂಕಿಸುವ ಒಬ್ಬ ಹಳ್ಳಿಯುವನೆಂದೇ ನನ್ನ ಮನಸ್ಸಿನಲ್ಲಿ ಅಂದುಕೊಂಡೆ. ಅದೊಂದರಿಂದಲೇ ಅವನದು

ಎಷ್ಟು ಚಿಕ್ಕ ಮನಸ್ಸೆಂದು ಗೊತ್ತಾಯಿತು. - ಅದೂ ಅಲ್ಲದೆ ಅವನ 'ಬಾಲ್ಯ' (Childhood) ಬಹಳ ಉದ್ದವಾಗಿದೆ. ಮೇಲೆ ಮೇಲೆ, ಪುನರುಕ್ತಿಗಳಿದ್ದೇ ಇವೆ. ಹೆಚ್ಚೇನು ನನ್ನ ಮನಸ್ಸಿನಿಂದ ಅವನ ವಿಚಾರವನ್ನು ದೂರಹಾಕು ವಷ್ಟು ಬೇಸರವುಂಟಾಯಿತು.

ಕೆಲವು ದಿನಗಳನಂತರ ರಷ್ಯಾದ ಬಾತ್ಮಿದಾರನಾದ ಮಾರ್ಕ್‌ಬ್ರೈಡ ನನ್ನು ಸಂಧಿಸಿದೆ. ಗಾರ್ಕಿಯ ವಿಚಾರವಲ್ಲಿ ತಿರಸ್ಕಾರದಿಂದ ಮಾತ ನಾಡುತ್ತಿದ್ದುದನ್ನು ಕಂಡು ನಗುತ್ತಾ ನಾನು ಗಾರ್ಕಿಯನ್ನು ಪುನಃ ನೋಡಲೇ ಬೇಕೆಂದನು. ನಿಜವಾಗಿಯೂ ಸಹೃದಯನೆಂದೂ ತಿಳಿಸಿದನು. ಮೊದಲನೆಯ ಸಲ ನೋಡಿದಾಗ ಈ ತರದ ಅನುಭವ ಅವನಿಗೂ ಆಗಿತ್ತೆಂದು ನುಡಿದನು.

ಇವೆಲ್ಲದರ ಪರಿಣಾಮವಾಗಿ ಬ್ರೈಡ್ ಗಾರ್ಕಿಗೆ ಪುನಃ ಕಾಗದ ಬರೆ ದನು. ಗಾರ್ಕಿ ಅದಕ್ಕೆ ತನಗೆ ನಿಜವಾಗಿಯೂ ಮೈ ಸರಿಯಾಗಿರಲಿಲ್ಲ ವೆಂದೂ ನಮ್ಮೊಡನೆ ಪುನಃ ಮಾತುಕತೆ ನಡೆಸಲು ಉತ್ಸಾಹಿಯಾಗಿರುವ ನೆಂದೂ ಉತ್ತರ ಬರೆದನು. ನನ್ನ ಅರೆಮನಸ್ಸನ್ನು ಮಾರ್ಕ್ ಬ್ರೈಡನು ಮೆಲ್ಲ ಮೆಲ್ಲನೆ ಒಪ್ಪಿಸಿದನು. ಪುನಃ ಒಂದು ಬೆಳಗ್ಗೆ ಸಾರೋವಿಗೆ ಗಾರ್ಕಿಯನ್ನು ನೋಡಲು ಹೋದೆವು.

ಇಂಗ್ಲೀಷ್ ಮತ್ತು ರಷ್ಯಾ ಭಾಷೆಗಳೆರಡನ್ನೂ ಸ್ಪಷ್ಟವಾಗಿ ಮಾತನಾಡು ತ್ತಿದ್ದ ಒಬ್ಬ ಸುಂದರ ತರುಣಿಯು ನಮ್ಮನ್ನು ಎದುರುಗೊಂಡು ಮಹಡಿಯ ಮೇಲೆ ಕರೆದೊಯ್ದಳು. ಗಾರ್ಕಿ ಹಸ್ತಲಾಘವನ್ನಿತ್ತ ಮೇಲೆ ಮಾರ್ಕ್ ಬ್ರೈಡನ ಕಡೆ ತಿರುಗಿ ಮುಗುಳುನಗೆ ನಕ್ಕನು. ಅನಂತರ ನಾವೆಲ್ಲಾ ಮಾತನಾಡಲು ಕುಳಿತೆವು.

ಆ ಭಾಷಾಂತರಗಾರಳನ್ನು ಕುರಿತು, ಟಾಲಸ್ಟಾಯಿ ಯಾವಾಗಲೂ ಅಶ್ಲೀಲ ಮಾತುಗಳನ್ನು ಬಳಸುತ್ತಿದ್ದನೇ ಗಾರ್ಕಿಯನ್ನು ಕೇಳಿ ಹೇಳಿ ಎಂದೆನು. ಗಾರ್ಕಿ ತನ್ನ ತಲೆಯನ್ನಲ್ಲಾಡಿಸುತ್ತಾ "ಹಳ್ಳಿಯವರಿಗೆ ಕೋಪ ಬಂದಾಗಲಾಗಲಿ ಅಥವಾ ಆತ್ಮೀಯತೆಯಿಂದ ಮಾತನಾಡುವಾಗ ಲಾಗಲಿ ಹೇಗೆ ಮಾತನಾಡುವರೋ ಅದೇ ರೀತಿಯಲ್ಲಿ ಟಾಲಸ್ಟಾಯಿಯೂ ತಡೆಯಿಲ್ಲದೆ ಪ್ರಯತ್ನಪಡದೆ ಮಾತನಾಡುತ್ತಿದ್ದನು ಮತ್ತು ರಷ್ಯಾ ಭಾಷೆಯಲ್ಲಿ ಇಂಥ ಅಶ್ಲೀಲ ಶಬ್ದಭಂಡಾರ ಹೇರಳವಾಗಿದೆ" ಎಂದನು.

"ಹಾಗಾದರೆ ನೀವು ಏಕೆ ಅವನ ಧಾಟಿಯನ್ನು ಅನುಸರಿಸಬಾರದು? ನ್ನು (Childhood) 'ಬಾಲ್ಯ'ದಲ್ಲಿಯೂ ಕೂಡ ಯಾವ ಇಂಗ್ಲೀಷ್ ಸಭ್ಯ ನ್ನು ಗಾಬರಿಮಾಡುವಂತಹ ವಿಚಾರಗಳೇ ಇಲ್ಲವಲ್ಲಾ ಏಕೆ?" ಎಂದೆ.

"ನನಗೆ ಹಾಗೆ ಬರೆಯಲು ಇಷ್ಟವಿಲ್ಲ.. ಹಾಗೇನಾದರೂ ನಾನು ರೆದರೆ ಎಲ್ಲರೂ ನನ್ನ ಗ್ರಾಮ್ಯತನಕ್ಕಾಗಲಿ ಅಥವಾ ನನ್ನ ಅವಿದ್ಯೆ ಾಗಲಿ ಅದನ್ನು ಸರಿಜೋಡಿಸುವವರು" ಎಂದು ಒಂದು ಸಾರಿ ಭುಜವನ್ನು ಲುಕಿಸಿ ನುಡಿದನು.

ನಾನು ಅವನ ವಿಚಾರದಲ್ಲಿ ಮಾಡಿದ ನಿರ್ಧಾರ ಸರಿಯಾದುದೆಂದೇ ೊಳೆಯಿತು. ಅವನ ಮನೋಭಾವದ ಮೇಲೆ ಗ್ರಾಮ್ಯರೀತಿಯು ಇನ್ನೂ ೂಡಕನ್ನುಂಟುಮಾಡುತ್ತಿತ್ತೆಂದು ತಿಳಿಯಿತು.

"ಜನರಲ್ ಕಾರ್ನಿಟ್ ಹೆಂಡತಿಯೊಡನೆ ಆದ ಅನುಭವವನ್ನು ನೀವು ಾಲಸ್ಟಾಯಿಗೆ ಹೇಳಿದಿರಿ ಅಲ್ಲವೆ?" ಎಂದೆನು.

ಅದಕ್ಕೆ "ಹೌದು" ಎಂದನು.

"ಹಾಗಾದರೆ ಅದು ಟಾಲಸ್ಟಾಯಿಯನ್ನು ಸಂತೋಷಗೊಳಿಸಿತೆ?"

"ಓ.. ನಾನು ಉಪಯೋಗಿಸಿದ್ದಕ್ಕಿಂತ ಹೆಚ್ಚಾಗಿ ಅಶ್ಲೀಲ ಮಾತು ಳನ್ನು ಅವನು ಪ್ರಯೋಗಿಸಿದನು" ಎಂದು ಹೇಳಿ ಆ ಭಾಷಾಂತರಕಾರನ ಕಡೆ ೋಡಿ ಒಂದು ಸಲ ನಕ್ಕು ತನ್ನ ಭುಜಗಳನ್ನು ಭಾವಸೂಚಿತರೀತಿಯಲ್ಲಿ ಲುಕಿಸಿದನು.

ಗಾರ್ಕಿಯ ಆ ಕತೆ ಮತ್ತು ಟಾಲಸ್ಟಾಯಿಯ ಟೀಕೆ ಹೀಗಿದೆ:—

ನಾನು (Kazan) ಕಜಾನ್‌ನಲ್ಲಿ ವಾಸವಾಗಿದ್ದಾಗ ಜನರಲ್ ಕಾರ್ನಿಟ್ ಂಡತಿಯ ಬಳಿ ಒಬ್ಬ ತೋಟಿಯಾಗಿ ಕೆಲಸಕ್ಕೆ ಸೇರಿದೆ. ಆಕೆ ಫ್ರೆಂಚ್ ಂಗಸು. ಆಕೆಗೆ ಗಂಡನಿರಲಿಲ್ಲ. ಆಕೆಗೆ ಅಷ್ಟೇನೂ ವಯಸ್ಸಾಗಿರಲಿಲ್ಲ. ದರೆ ಬಹಳ ಕೊಣಸಳು. ಅವಳ ಪಾದಗಳು ಬಹಳ ಪುಟ್ಟದಾಗಿ ್ದವು. ಅವಳ ಕಣ್ಣುಗಳು ಅಸಾಧಾರಣವಾಗಿ ಸುಂದರವಾಗಿದ್ದವು ಯಾವಾ ಲೂ ಚಂಚಲ, ಆದರೆ ಬಹಳ ಚುರುಕು. ಅವಳು ಮದುವೆಯಾಗುವುದಕ್ಕೆ ುಂಚೆ ಒಬ್ಬ ಅಡಿಗೆಯವಳೋ ಅಥವಾ ಒಬ್ಬ ಬೀದಿ ಬಸವಿಯೋ ಆಗಿ

ುರಬೇಕು. ಬೆಳಗಿನ ಝಾವದಲ್ಲಿ ಕುಡಿದುಬಿಟ್ಟು ಕೂದಲನ್ನು ಕೆದರಿ ಕೊಂಡು ಬರೀ ಗೌನಿನಲ್ಲೇ ಆ ತೋಟದಲ್ಲಿ ಅಲೆದಾಡುತ್ತಿದ್ದಳು. ಅವಳ ಕೂದಲುಗಳು ಅವಳ ಕೆನ್ನೆಯ ಮೇಲೂ ತೋಳುಗಳ ಮೇಲೂ ಹರಿದಾಡು ತ್ತಿದ್ದವು. ಅಸಾಧ್ಯ ಬಜಾರಿ ಅವಳು! ಫ್ರೆಂಚ್ ಹಾಡುಗಳನ್ನು ಹೇಳುತ್ತಾ ಏನು ಕೆಲಸಮಾಡುವುದನ್ನೇ ನೋಡುತ್ತಾ ಅಲ್ಲಿಲ್ಲಾ ಅಲೆಯುತ್ತಿದ್ದಳು. ಅವರೆ ಪ್ರತಿ ಕ್ಷಣವೂ ಅಡಿಗೆಯ ಮನೆ ಕಿಟಕಿಯ ಬಳಿ ಹೋಗಿ "ಪಾಲೀನ್, ಏನಾದರೂ ಕೊಡು" ಎಂದು ಕೇಳುತ್ತಿದ್ದಳು.

ಏನಾದರೂ ಎಂದರೆ ಯಾವಾಗಲೂ ಅದು ಒಂದೇ – ಒಂದು ಗ್ಲಾಸ್ ಮದ್ಯ ಅಷ್ಟೇ. ಅವಳ ಮನೆಯ ಕೆಳಭಾಗದಲ್ಲಿ ಮೂರು ಜನ ರಾಜಮನೆ ತನದ ಹೆಂಗಸರು ವಾಸಿಸುತ್ತಿದ್ದರು. ಅವರುಗಳಿಗೆ ತಾಯಿ ಇರಲಿಲ್ಲ. ಅವರ ತಂದೆ ಎಲ್ಲಿಯೋ ಓಡಿಹೋಗಿದ್ದನು. ಜನರಲ್ ಕಾರ್ನೆಟನ ಹೆಂಡತಿಗೆ ಅವರನ್ನು ಕಂಡರೆ ಆಗುತ್ತಿರಲಿಲ್ಲ. ಅವರನ್ನು ಅಲ್ಲಿಂದ ಓಡಿಸುವು ದಕ್ಕೆ ಎಷ್ಟು ಬೇಕೋ ಅಷ್ಟನ್ನೂ ಮಾಡುತ್ತಿದ್ದಳು. ರಷ್ಯಾಭಾಷೆಯೇನೂ ಅವಳಿಗೆ ಚೆನ್ನಾಗಿ ಬರುತ್ತಿರಲಿಲ್ಲ. ಆದರೆ ಶಪಿಸುವುದರಲ್ಲಿ ಬಹಳ ನಿಸ್ಸೀ ಮಳು. ನನಗೇಕೋ ಅವಳ ನಡವಳಿಕೆ ಸರಿಬೀಳಲಿಲ್ಲ. ಏಕೆಂದರೆ ಅವರು ಮೂವರೂ ಖಿನ್ನವದನರಾಗಿ, ಹೆದರಿದವರ ಹಾಗೆ ನಿಸ್ಸಹಾಯರಾಗಿ ಇದ್ದರು. ಒಂದು ದಿನ ಮಧ್ಯಾಹ್ನ ಕುಡಿದಿದ್ದ ಜನರಲ್ ಕಾರ್ನೆಟನ ಹೆಂಡತಿ ಇದ್ದಕ್ಕಿದ್ದಹಾಗೆಯೇ, ಅವರಲ್ಲಿ ಇಬ್ಬರು ತೋಟದಲ್ಲಿ ತಿರುಗುತ್ತಿದ್ದಾಗ ಬಂದು ಕೂಗಾಡಿ ಅವರನ್ನು ತೋಟದಿಂದಟ್ಟಲು ಹವಣಿಸಿದಳು. ಅವರು ಪೆಚ್ಚು ಮಾತನಾಡದೆ ಹಾಗೆಯೇ ಮುಂದರಿದರು. ತನ್ನ ಅಸಾಧಾರಣವಾದ ದೇಹದಿಂದ ಆ ಬಾಗಿಲನ್ನು ಬಿರಡೆಯಂತೆ ಮುಚ್ಚಿ ನಿಂತು ಅವರನ್ನು ಶಪಿಸಲು ತೊಡಗಿದಳು. ಅಲ್ಲೇ ಇದ್ದ ನನಗೆ ಕೋಪ ಬರಲು ಕೂಗಾಟವನ್ನು ನಿಲ್ಲಿಸಿ ಹುಡುಗಿಯರು ಹೋಗಲು ದಾರಿ ಬಿಡು ಎಂದೆನು. ಅದಕ್ಕೆ ಅವಳು "ಏ . . . ನನಗೆಲ್ಲಾ ಗೊತ್ತು ರಾತ್ರಿಹೊತ್ತಿನಲ್ಲಿ ಕಿಟಕಿ ನುಸಿದುಕೊಂಡು ಅವರ ಬಳಿಗೆ ಹೋಗುವುದು" ಎಂದು ಗಟ್ಟಿಯಾಗಿ ಕಿರಿಚಿದಳು.

ನನಗೆ ಕೋಪ ಏರಿತು. ಅವಳ ಭುಜವನ್ನು ಹಿಡಿದು ಬಾಗಲಿನಾಚೆ ನೂಕಿದೆ. ಆದರೆ ನನ್ನ ಹಿಡಿತದಿಂದ ತಪ್ಪಿಸಿಕೊಂಡು ನನ್ನ ಕಡೆ ತಿರುಗಿ

ತನ್ನ ಬಟ್ಟೆಯನ್ನು ಬಿಚ್ಚಿ ಒಳಗೆ ಧರಿಸಿದ್ದ ಉಡುಪನ್ನು ಮೇಲಕ್ಕೆತ್ತಿ 'ಆ ಸುಂಡಿಲಿಗಳಿಗಿಂತ ನಾನು ಚೆನ್ನಾಗಿಲ್ಲವೋ' ಎಂದು ಅರಚಿದಳು. ನನ್ನ ಬುದ್ಧಿ ಸ್ಥಿಮಿತತೆಯನ್ನು ಮೀರಿತು. ಅವಳ ಕತ್ತಿಗೆ ಕೈಹಾಕಿ ಚೆನ್ನಾಗಿ ನಾಲ್ಕೈದು ಸಾರಿ ಅವಳನ್ನು ತಿರುಗಿಸಿ ಅವಳ ಸೊಂಟದ ಕೆಳಕ್ಕೆ ಸರಿಯಾಗಿ ನನ್ನ ಪಿಕಾಶಿಯಿಂದ ಚೆನ್ನಾಗಿ ತೀಡಿದೆನು. ಅದರ ಪರಿಣಾಮವಾಗಿ ಓ ಎಂದು ಅರಚುತ್ತಾ ಬಾಗಲಿನಿಂದ ಹಾರಿ ಓಡಿದಳು.

ಆ ಮೇಲೆ ಪಾಲೀನ್‌ನಿಂದ ನನ್ನ ರಹದಾರಿಯನ್ನು ಪಡೆದು ಗಂಟು ಮೂಟೆಗಳನ್ನು ಕಟ್ಟಿಕೊಂಡು ಆ ಸ್ಥಳವನ್ನು ಬಿಟ್ಟು ಹೊರಟೆ. ಆ ಸಮಯದಲ್ಲಿ ಕಿಟಕಿಯ ಬಳಿ ನಿಂತಿದ್ದ ಆ ಜನರಲ್ಲಿನ ಹೆಂಡತಿ ನನ್ನ ಕಡೆ ತಿರುಗಿ "ಪೋಲೀಸಿನವರಿಗೆ ಹೇಳುವುದಿಲ್ಲ . . . ಅದನ್ನೇನೂ ಮನಸ್ಸಿಗೆ ತಿಳಿದುಕೊಳ್ಳಬೇಡ – ಹಿಂದಕ್ಕೆ ಬಾ – ಹೆದರಿಕೊಳ್ಳಬೇಡ" ಎಂದು ಕೂಗಿದಳು.

ಟಾಲಸ್ಟಾಯಿಯು ಕಣ್ಣಲ್ಲಿ ನೀರು ಬರುವ ತನಕ ನಕ್ಕು ಪಕ್ಕೆ ನೋವಿನಿಂದ ಮಾತನಾಡಲಾರದೆ ಹಾಗೆಯೇ ನರಳುತ್ತಾ 'ಪಿಕಾಶಿಯಿಂದ! ಅದು ಅವಳ ಪಿರ್ರೆಯ ಮೇಲೆ ಸರಿಯಾಗಿ! ದೊಡ್ಡದಾಗಿತ್ತೋ ಆ ಪಿಕಾಶಿ!" ಎಂದು ಕೇಳಿದನು.

ಸ್ವಲ್ಪ ನಿಧಾನಿಸಿ ಅನಂತರ ಗಂಭೀರಭಾವದಿಂದ "ಅವಳ ಬುಡಕ್ಕೆ ಹೊಡೆದದ್ದು ನಿನ್ನ ಸದ್ಭಾವನೆಯನ್ನು ತೋರಿಸುತ್ತದೆ. ಇನ್ನು ಯಾರಾದರೂ ಆಗಿದ್ದರೆ ಸರಿಯಾಗಿ ತಲೆಯ ಮೇಲೆ ಹೇರುತ್ತಿದ್ದರು. ಬಹಳ ಉದಾರಿ ನೀನು! ಅದಿರಲಿ ಅವಳಿಗೆ ನೀನು ಬೇಕಾಗಿತ್ತೆಂದು ನಿನಗೆ ತಿಳಿಯಿತೋ?"

"ನನಗೆ ಅದು ಸರಿಯಾಗಿ ಜ್ಞಾಪಕವಿಲ್ಲ . . ."

"ಆದರೆ ಅದು ಸ್ಪಷ್ಟವಾಗಿದೆ. ಅವಳಿಗೆ ನೀನು ಬೇಕಾಗಿತ್ತು."

"ಆದರೆ ಅದಕ್ಕಾಗಿ ನಾನೇನೂ ಜೀವ ಹೊತ್ತಿರಲಿಲ್ಲ."

"ಯಾವ ಉದ್ದೇಶದಿಂದಾದರೂ ಜೀವವನ್ನು ನೀನು ಹೊತ್ತಿರಬಹುದು. ಆದರೆ ಎಲ್ಲವೂ ಒಂದೇ . . . ನೀನು ಸ್ತ್ರೀಲೋಲನಲ್ಲವೆಂದೇ ಕಾಣುತ್ತದೆ. ಇನ್ನು ಯಾರಾದರೂ ನಿನ್ನ ಸ್ಥಳದಲ್ಲಿದ್ದರೆ ಕಾರ್ನೆಟ್‌ಳ ಮನಸ್ಸನ್ನು ಸಂತೋಷಗೊಳಿಸಿ ಭಾಗ್ಯವಂತರಾಗುತ್ತಿದ್ದರು."

ಇದು ಒಬ್ಬ ಶ್ರೇಷ್ಠ ಕಲಾವಿದನಿಂದ ಹೊರಟಂಥ ಟೀಕೆ. "ನೀನು ನಿಜವಾಗಿಯೂ ವಿಚಿತ್ರ ಪ್ರಾಣಿ-ಎಲ್ಲಿ ಮತ್ಸರಭಾವದಿಂದಿರಬೇಕೋ ಅಲ್ಲಿ ನೀನು ಸಹೃದಯತೆಯನ್ನು ತೋರಿಸುವುದು ಆಶ್ಚರ್ಯವಾಗಿದೆ. . ಆದರೆ ನಿನ್ನಲ್ಲಿ ದೃಢತೆ ಇದೆ. . ನಿಜವಾಗಿಯೂ ಅದು ಒಳ್ಳೇದು" ಎಂಬುದಾಗಿ ಟಾಲಸ್ಟಾಯಿ ಹೇಳಿದ ಮಾತಿನಲ್ಲಿ ಆಶ್ಚರ್ಯವೇನೂ ಕಂಡುಬರುವುದಿಲ್ಲ.

ಸ್ವಲ್ಪ ಮೌನದಿಂದಿದ್ದು "ನಿನ್ನ ಮನಸ್ಸು ನನಗೆ ಅರ್ಥವೇ ಆಗುವುದಿಲ್ಲ . . ಬಹಳ ಗೊಂದಲಗೊಂಡಂಥ ಮನಸ್ಸು ನಿನ್ನದು . . ನಿನ್ನ ಹೃದಯ ಬಹಳ ಸೂಕ್ಷ್ಮವಾದದ್ದು . . ಆದರೂ ಬಹಳ ಸಹೃದಯತೆಯಿಂದ ಕೂಡಿದೆ" ಎಂದನು. ಒಟ್ಟಿನಲ್ಲಿ ಗಾರ್ಕಿಯ ಅಭಿಪ್ರಾಯದ ಪ್ರಕಾರ 'ಟಾಲಸ್ಟಾಯಿಯು ಒಬ್ಬ ನಿಷ್ಠುರನಾದ ವಿಚಾರವಾದಿ.' ಆದರೆ ಟಾಲಸ್ಟಾಯಿ ಗಾರ್ಕಿಯು ಒಬ್ಬ ಪುಸ್ತಕ ಪಿಶಾಚಿಯೆಂದೂ ಮತ್ತು ಅದು ಅವನ ಏಳಿಗೆಗೆ ಅಡ್ಡಿಯನ್ನುಂಟುಮಾಡುವುದೆಂದೂ ತಿಳಿಸಿದ್ದಾನೆ.

ಟಾಲಸ್ಟಾಯಿ ತಾನು ಚಿಕ್ಕವನಾಗಿದ್ದಾಗ 'ಅವಿಶ್ರಾಂತ ಸ್ತ್ರೀಲೋಲ' ನಾಗಿದ್ದನೆಂದು ಮರೆಮಾಚದೆ ಹೇಳಿದ್ದಾನೆ. ಆದರೆ ಶಬ್ದಗಳಿಗೆ ಬದಲು ಹೊಲಸಾದ ಗ್ರಾಮ್ಯಭಾಷೆಯನ್ನು ಟಾಲಸ್ಟಾಯಿ ಉಪಯೋಗಿಸಿದನೆಂದು ಗಾರ್ಕಿ ಹೇಳಿದ್ದಾನೆ.

ಇದೇ ಟಾಲಸ್ಟಾಯಿಯ ಸ್ವೈಜವಾದ ಜೀವನ ಚಿತ್ರ. ಈ ಕಲಾವಿದ ಟಾಲಸ್ಟಾಯಿಯನ್ನೇ ಟರ್ಜನೀಫನು ಅಷ್ಟೊಂದು ಮೆಚ್ಚಿದ್ದು. ತನ್ನ ಕೊನೆಯ ಕಾಗದಗಳೊಂದರಲ್ಲಿ ಟರ್ಜನೀಫನು ಟಾಲಸ್ಟಾಯಿಗೆ ಅವನ ಬೋಧನೆಗಳನ್ನು ನಿಲ್ಲಿಸಿ ಅದರ ಬದಲು ಕಲೆಗಾಗಿ ಶ್ರಮಿಸಿ ರಷ್ಯನರಿಗೆ ಸಾವಿನಿಂದ ಮುಕ್ತಾಯವಾಗದಂತಹ ಎರಡು ಮೂರು ಕಾದಂಬರಿಗಳನ್ನು ಬರೆಯುವುದರಲ್ಲಿ ತೊಡಗಬೇಕೆಂದು ಪ್ರಾರ್ಥಿಸಿಕೊಂಡಿದ್ದನ್ನು ಜ್ಞಾಪಿಸಿಕೊಂಡರೆ ಒಳ್ಳೆಯದು. ಟಾಲಸ್ಟಾಯಿ ಈ ಪ್ರಾರ್ಥನೆಯ ಪ್ರಕಾರ ನಡೆಯದೇ ಇದ್ದದ್ದು ಬಹಳ ದುಃಖಕರವಾಗಿದೆ.

ಟಾಲಸ್ಟಾಯಿಯ ಉದಾಹರಣೆಯನ್ನೇ ಅನುಸರಿಸಿ ಗಾರ್ಕಿ ಅದರಂತೆಯೇ ತನ್ನ ಆತ್ಮಕತೆಯನ್ನು ಸರಳವಾಗಿಯೂ ನೈಜವಾಗಿಯೂ ಏಕೆ ಬರೆಯಲಿಲ್ಲವೆಂದು ಕೇಳಿದಾಗ ರೂಢಿಯಲ್ಲಿದ್ದ ಮಾರ್ಗವನ್ನು ಬಿಟ್ಟುಹೋಗಲು

ಮನಸ್ಸು ಬರಲಿಲ್ಲವೆಂದು ನುಡಿದನು. ಟಾಲಸ್ಟಾಯಿ ಆತ್ಮೀಯರಿದ್ದಾಗ ಮಾತ್ರ ಬಿಚ್ಚಿ ಮಾತನಾಡುತ್ತಿದ್ದನೆಂದೂ, ಬರವಣಿಗೆಯಲ್ಲಿ ಪದ್ಧತಿಯಲ್ಲಿದ್ದ ಮಾರ್ಗದಿಂದಾಚೆ ಅಷ್ಟೇನೂ ಹೋಗಿಲ್ಲವೆಂದು ನುಡಿದನು.

"ಆದರೆ ನೀವು ರಷ್ಯಾದೇಶದ ಕ್ರೂರತನವನ್ನು ಅದರ ನಗ್ನತೆಯಲ್ಲೇ ತೋರಿಸಿದ್ದೀರಿ . . ಹಾಗೇನೇ ರಷ್ಯಾದ ಪ್ರಣಯವನ್ನೂ ಏಕೆ ಬಿಚ್ಚಿ ಹೇಳಬಾರದು."

"ಕ್ರೂರತನ ಕಂಡರೆ ನನಗಾಗುವುದಿಲ್ಲ ಆದುದರಿಂದ ಎಲ್ಲವನ್ನೂ ಸಂದೇಹದಿಂದ ಕಾಣುವ ಹಾಗೆ ಆಗುವುದು. ಜೀವಮಾನವೆಲ್ಲಾ ಈ ಪ್ರಶ್ನೆಗಳನ್ನು ಕೇಳುತ್ತಲೇ ಇದ್ದೇನೆ. ಈ ಕ್ರೂರತನ ಹೇಗೆ ಹುಟ್ಟಿತು ? ಯಾವ ಭಯಾನಕ ಭಾವದಿಂದ ಈ ಪೈಶಾಚಿಕ ವರ್ತನೆ ಉದ್ಭವಿಸಿತು ? ಒಬ್ಬ ಮನುಷ್ಯ ಇನ್ನೊಬ್ಬನನ್ನು ಕಾಡುವುದರಿಂದ ಸಂತೋಷವನ್ನು ಹೇಗೆ ಪಡೆಯುವನು ?"

ಅದಕ್ಕೆ ಸರಿಯಾದ ವಿವರಣೆ ಕೊಡಲು ನನ್ನಿಂದಾಗಲಿಲ್ಲ. ಚಿಕ್ಕಂದಿನಿಂದಲೂ ಕ್ರೂರತನದ ವ್ಯಾಪ್ತಿಯ ಬಗ್ಗೆ ಆಶ್ಚರ್ಯವೂ ಮತ್ತು ಕ್ರೂರತನವನ್ನು ಕಂಡರೆ ಒಂದು ಅಸಹ್ಯಭಾವನೆ ನನ್ನಲ್ಲಾಗುತ್ತಿತ್ತು ಇವೆರಡೂ ನನ್ನ ಮನಸ್ಸನ್ನು ಬಹಳವಾಗಿ ಕಾಡುತ್ತಿದ್ದವು. ಅಜ್ಞಾನಕ್ಕಿಂತಲೂ ಈ ಕ್ರೂರತನ ನನಗೆ ಬಹಳ ಕೆಟ್ಟದಾಗಿ ಕಾಣುತ್ತಿತ್ತು. ಪ್ರತಿಯೊಬ್ಬ ನ್ಯಾಯಾಧೀಶನೂ ನ್ಯಾಯಾಧೀಶನಾಗುವುದಕ್ಕಿಂತ ಮುಂಚೆ ಒಬ್ಬ ಸಾಮಾನ್ಯ ಖೈದಿಯ ಹಾಗೆ ಒಂದು ವಾರ ಜೈಲಿನ ವಾಸ ಅನುಭವಿಸಿದರೆ ಒಳ್ಳೆಯದೆಂದು ನಾನು ಆಗಾಗ್ಗೆ ಹೇಳುತ್ತಲೇ ಇರುತ್ತೇನೆ.

ಗಾರ್ಕಿ ತನ್ನ ಆತ್ಮಕಥೆಯ ಮೂರನೆಯ ಭಾಗವನ್ನು ಮುಗಿಸಿದ[illegible], ಅದರಲ್ಲಿ ತನ್ನ ಮೊದಲನೆಯ ಪ್ರಣಯವನ್ನು ಹೇಳಿರುವನೆಂದೂ, ಆದರೆ [illegible] ಸ್ಟಾಯಿಯ ಹಾಗೆ ಬಿಚ್ಚಿ ಹೇಳಿಲ್ಲವೆಂಬುದಾಗಿಯೂ ತಿಳಿಸಿದನು.

ಬಾಲ್ಷವಿಕ್ ಆಡಳಿತದ ವಿಚಾರವಾಗಿಯೂ ಮತ್ತು ಲೆನಿನ್‌ನ ವಿಚಾರವಾಗಿಯೂ ಕೇಳದೆ ಇರಲು ನನ್ನ ಮನಸ್ಸು ಒಪ್ಪಲಿಲ್ಲ. ಬಾಲ್ಷವಿಕ್ಕರನ್ನು ಅವನು ಖಂಡಿಸಲೇ ಇಲ್ಲ. "ಪ್ರತಿ ಸರಕಾರವೂ ತನ್ನ ರಕ್ಷಣೆಗಾಗಿ ಬಲಪ್ರಯೋಗ ಮಾಡಲೇಬೇಕು . . ಆದುದರಿಂದ ಬಾಲ್ಷವಿಕ್ ಸರಕಾರ ಹಾಗೆ ಮಾಡಿದ್ದಕ್ಕೆ ನಾವು ಏಕೆ ಖಂಡಿಸಬೇಕು ?"

"ಆದರೆ ಇನ್ನಾವ ಸರಕಾರವೂ—ಅಮೇರಿಕಾದ ಸರಕಾರ ಕೂಡ—ತನ್ನ ಪ್ರಜೆಗಳನ್ನು ಗಡೀಪಾರು ಮಾಡಿಲ್ಲ. ಬೇರೆ ಸರಕಾರಗಳೂ ಬಾಲ್ಶೆವಿಕ್ ಸರಕಾರವನ್ನೇ ಅನುಸರಿಸಿದರೆ ಬೇಗನೆ ನಿರಾಶ್ರಿತರು 'No Man's Land' ನ್ನು ಹುಡುಕಬೇಕಾಗುವುದು" ಎಂದೆ.

"ನವೆಂಬರ್ ೧೯೨೨ರಲ್ಲಿ ರಷ್ಯಾದ ಪ್ರಜೆಗಳನ್ನು ಗಡೀಪಾರು ಮಾಡಿದ ವಿಷಯದ ಬಗ್ಗೆ ಪಕ್ಷ ವಹಿಸಿ ಮಾತನಾಡುವುದು ಬಹಳ ಕಷ್ಟ. ಆದರೆ ಪ್ರಪಂಚವೇನೂ ಯಾವ ರಷ್ಯ ನಾಗರಿಕತೆಯನ್ನೇನೂ ಪಡೆದಿಲ್ಲ ಮತ್ತು ಪಡೆಯುವ ಹಾಗೂ ಕಾಣಬರಲಿಲ್ಲ" ಎಂದು ಉತ್ತರವಿತ್ತನು.

ನನಗೆ ಟ್ರಾಟ್ಸ್ಕಿ (Trotsky) ಷ್ಟಿರಿನ್ (Tchitcherin) ಮತ್ತು ರಕೋಸ್ಕಿ (Rakowsky) ಇವರುಗಳ ಪರಿಚಯವಿದೆಯೆಂದೂ ಲೆನಿನ್‌ನನ್ನು ಸಹ ಎದುರುಗೊಂಡು ಮಾತುಕತೆ ನಡೆಸಿದ್ದರೂ ಷ್ಟಿರಿನ್ ಮುಂತಾದವರ ಹೇಳಿಕೆಯ ಪ್ರಕಾರ ಅವನು ಬಹಳ ಮೇಧಾವಿಯೂ ಸದ್ಗುಣಸಂಪನ್ನನಾಗಿಯೂ ಇರಬೇಕೆಂದು ಭಾವಿಸಿದ್ದೇನೆ ಎಂದೆ.

"ಒಂದು ವಿಲಕ್ಷಣ ಪ್ರತಿಭೆ ಅವನದು. ಮನುಷ್ಯರಲ್ಲಿರುವ ಸಾಮಾಜಿಕ ಮತ್ತು ಆರ್ಥಿಕ ಭೇದಭಾವವು (inequality) ನಿರ್ನಾಮವಾಗಬೇಕೆಂಬುದರ ಬಗ್ಗೆ ದೃಢ ಅಭಿಪ್ರಾಯವನ್ನು ಹೊಂದಿದ್ದಾನೆ. ಅದರ ನಿರ್ನಾಮಕ್ಕೆ ಯಾವ ಅಭಿಪ್ರಾಯಗಳಿದ್ದರೂ ಅವನ್ನೆಲ್ಲಾ ಒಪ್ಪಲು ಸಿದ್ಧನಾಗಿದ್ದಾನೆ. ಅವನ ಅಭಿಪ್ರಾಯ ತಪ್ಪೋ ಸರಿಯೋ ಎಂದು ನಾನು ಹೇಳುವುದಿಲ್ಲ. ಕೆಲವರು ಆ ಸಮಸಮಾನತೆ ಅಸಾಧ್ಯವೆಂದು ಹೇಳುತ್ತಾರೆ. ಈ ಅಸಮತ್ವದಿಂದುಂಟಾಗಿರುವ ಪರಿಸ್ಥಿತಿಯು ಯಾರನ್ನಾದರೂ ಗಾಬರಿಗೊಳಿಸುತ್ತದೆ. ಒಂದು ಕಡೆ ಹೊಟ್ಟೆಗಿಲ್ಲದೆ ಸಾಯುತ್ತಿರುವ ಹಸುಳೆಗಳು—ಮತ್ತೊಂದು ಕಡೆ ಸ್ವಾರ್ಥಪರರಾದ ಕೋಟ್ಯಾಧೀಶ್ವರರು—ಸಮಸಮಾನತ್ವದ ಭಾವನೆ ಅನ್ವಂತ್ಯವಾಗಿಯೂ ರಷ್ಯಾವೆಂದೇ ಹೇಳಬೇಕು. ಕಾಲಕ್ಕನುಗುಣವಾಗಿ ತನ್ನ ನೀತಿಯನ್ನೇ ಬದಲಾಯಿಸುವ ನಿಮ್ಮ ಲಾಯಿಡ್ ಜಾರ್ಜ್ (Lloyd George) ನೊಂದಿಗಾಗಲೀ, ನಾಚಿಕೆ ಮಾನ ಮರ್ಯಾದೆಗಳನ್ನು ಬಿಟ್ಟಂಥ ಕ್ಲೆಮೆಂಚೊ (Clemenceau) ನೊಂದಿಗಾಗಲೀ ಅಥವಾ ತಾನು ಪ್ರೀತಿಸುತ್ತಿದ್ದ ತನ್ನ ರೀತಿ ನೀತಿಗಳಿಗೆ ದ್ರೋಹ ಮಾಡಿದ ವಿಲ್ಸನ್ (Wilson) ನೊಂದಿಗಾಗಲೀ ಲೆನಿನ್ನನನ್ನು ಹೋಲಿ

ಸಿದರೆ, ಇವರೆಲ್ಲರಿಗಿಂತಲೂ ಉನ್ನತ ಸ್ಥಾನದಲ್ಲಿ ಇರುವನು. ಲೆನಿನ್ನನು ಮಾಡಿದ ತಪ್ಪುಗಳೆಲ್ಲಾ ಒಬ್ಬ ಅನ್ವೇಷಕನ ಮತ್ತು ಸತ್ಯವಂತನ ತಪ್ಪುಗಳು. ಇತಿಹಾಸವನ್ನೆಲ್ಲಾ ತಿರಿವಿಹಾಕಿದರೂ ತಪ್ಪು ಮಾಡದೆ ಇರುವ ಯಾವ ಸುಧಾರಕನೂ ಸಿಗುವುದಿಲ್ಲ ಲೆನಿನ್ ಒಬ್ಬನೇ ತಾನು ಮಾಡಿದ ತಪ್ಪುಗಳನ್ನು ಒಪ್ಪಿಕೊಂಡು ಅದನ್ನು ಸರಿಪಡಿಸಿಕೊಳ್ಳಲು ಯತ್ನಿಸುತ್ತಿದ್ದ ವ್ಯಕ್ತಿ.

"ಆಗಾಗ್ಗೆ ಲೆನಿನ್ನನು ಸೃಷ್ಟಿಸಬೇಕೆಂದಿರುವ ಪ್ರಪಂಚವನ್ನು ಮನಸ್ಸಿನಲ್ಲೇ ಚಿತ್ರಿಸಿಕೊಳ್ಳಲು ಯತ್ನಿಸುತ್ತೇನೆ. ಅಪರಲ್ಲಿರುವ ಮಾನವರೆಲ್ಲರೂ ಮೇಧಾವಿಗಳು, ಅಸ್ವಾರ್ಥಿಗಳು, ಕರುಣಾಳುಗಳು, ಎಲ್ಲೆಲ್ಲಿಯೂ ಉದ್ಯಾನದಿಂದೊಡಗೂಡಿದ ಪಟ್ಟಣಗಳು. ಯಂತ್ರಗಳೇ ಮನುಷ್ಯನ ಎಲ್ಲಾ ಕೆಲಸಗಳನ್ನು ಮಾಡುವವು. ಮನುಷ್ಯನು ತನ್ನ ದೈಹಿಕ ಬಲವನ್ನು ಆ ಹಾಳು ಕೂಲಿ ಕೆಲಸಕ್ಕಾಗಿ ಉಪಯೋಗಿಸಬೇಕಾಗಿಲ್ಲ. ಮನುಷ್ಯನು ತನ್ನ ನಿಜವಾದ ಶಕ್ತಿಯನ್ನು ರೋಗ ರುಜಿನಗಳನ್ನು ನಿರ್ನಾಮ ಮಾಡುವುದರಲ್ಲಿಯೂ ಮತ್ತು ಈ ಪಾರ್ಥಿವ ಜೀವನವನ್ನು ಕ್ರಮೇಣ ಸ್ವರ್ಗಸುಂದರವಾಗಿ ಮಾಡುವುದರಲ್ಲಿಯೂ ಉಪಯೋಗಿಸುತ್ತಿರುತ್ತಾನೆ. ಮನುಷ್ಯನು ಶ್ರೇಷ್ಠನಾದಂತೆಲ್ಲಾ ಅವನ ಭಾವನೆಗಳೆಲ್ಲವೂ ಸಾಹಸಪೂರ್ವಕವಾಗುವವು.

"ಹತ್ತರಲ್ಲಿ ಒಂಬತ್ತು ಮಂದಿ ತಿಂದು ಕೊಬ್ಬಿ ಶ್ರೀಮಂತತೆಯ ಕನಸನ್ನು ಕಾಣುತ್ತಿರುವಂತಹ ಬೇಸಾಯಗಾರರಿಂದಲೇ ಕೂಡಿದ ದೇಶದಲ್ಲೇ ಒಂದು ಸಾಮಾಜಿಕ ಕ್ರಾಂತಿಯನ್ನೆಬ್ಬಿಸುವ ಧೈರ್ಯ ಲೆನಿನ್ನನಿಗೆ ಇತ್ತು. ಅವರೆಲ್ಲರೂ ಅವನನ್ನು ಹುಚ್ಚನೆಂದು ಕರೆಯುತ್ತಾರೆ. ಇಂಥ ಧೈರ್ಯಶಾಲಿಯ ಈ ಪವಿತ್ರತರವಾದ ಹುಚ್ಚನ್ನು ಹೊಗಳುತ್ತೇನೆ. ಇಂತಹವರ ಪೈಕಿ ಲೆನಿನ್ನದು ಬಹಳ ಶೋಭಾಯಮಾನವಾದ ಹುಚ್ಚು.

"ಭವಿಷ್ಯವೇ ಚರಿತ್ರೆಯಲ್ಲಿ ಅವನಿಗೆ ಅವನ ಸರಿಯಾದ ಸ್ಥಳವನ್ನು ಗೊತ್ತು ಮಾಡಬೇಕು" ಎಂದು ಹೇಳಿದನು.

ನಲವತ್ತು ವರ್ಷಗಳ ಹಿಂದೆಯೇ ಲಂಡನ್ನಿನ Spectator ನಲ್ಲಿ ರಷ್ಯಾ

ದಲ್ಲಿ ಒಂದು ಹೊಸ ಧರ್ಮ ಅಥವಾ ಒಂದು ನೂತನ ಸಮಾಜ ಸ್ಥಾಪನೆ ಯಾಗುವುದೆಂದು ಬರೆದಿದ್ದೆನು. ಗಾರ್ಕಿಯಿಂದ ಲೆನಿನ್ನನ ವಿಷಯ ಅರಿತ ಮೇಲೆ ನಾನು ಹಿಂದೆ ಬರೆದದ್ದು ಸರಿಯೆಂದೇ ಹೊಳೆಯಿತು. ಯುದ್ಧ ಮತ್ತು ಜಾತಿ ವೈಷಮ್ಯಗಳಿಂದ ತೊಳಲಿ ಹಾಳಾಗುತ್ತಿರುವ ಈ ನಿರ್ಗತಿಕ ಯೂರೋಪಿನಲ್ಲಿ, ಇವೆಲ್ಲದರ ವಿಮೋಚನೆಗಾಗಿ ಕನಸು ಕಾಣುವುದಕ್ಕೆ ಇನ್ನೂ ಯಾವ ಅಡ್ಡಿ ಬಂದಿಲ್ಲ.

ಗಾರ್ಕಿಯ ಹೊಗಳಿಕೆ ನನ್ನ ಮನಸ್ಸಿನಲ್ಲಿ ಮೂಡುತ್ತಿದ್ದರೂ ಲೆನಿನ್ನನ ಬಗ್ಗೆ ನನ್ನ ಮನಸ್ಸು ಒಲಿಯಲಿಲ್ಲ. ರೆಡ್ ಸೇನೆಯ ಕ್ರಿಯಾಶಕ್ತಿಗೆ ಬಹಳವಾಗಿ ಹೆಣಗಾಡಿದ ಜನರಲ್ಲೊಬ್ಬನ ಮಗಳನ್ನು ಬಾಲ್ಷೆವಿಕ್ಕರು ಸಂಹರಿಸಿರುವುದನ್ನು ಆಗ ತಾನೆ ಓದಿದ್ದೆನು. ಚರ್ಚಿನ ಕಟ್ಟೆಯನ್ನು ಮುಚ್ಚಿಟ್ಟುಕೊಂಡಿದ್ದೇ ಅವಳು ಮಾಡಿದ ಅಪರಾಧ. ಅವಳ ತಂದೆಯು ಮಾಡಿದ ಸೇವೆಗಾಗಿ, ಕ್ಷಮೆ ಬೇಡಿಕೊಂಡರೆ ಮನ್ನಿಸುವುದಾಗಿ ತಿಳಿಸಿದರು. ರಕ್ತದಿಂದ ತೊಯ್ದ ಆ ದರೋಡೆಕಾರರಲ್ಲಿ ತಾನು ಕ್ಷಮೆ ಬೇಡುವುದಿಲ್ಲವೆಂದಳು. ಮಾರನೆಯ ದಿನ ಬೆಳಗ್ಗೆ ಗುಂಡಿನೇಟಿನಿಂದ ಕೊಲ್ಲಲ್ಪಟ್ಟಳು.

ಕ್ರೂರತನದ ಬಗ್ಗೆ ತೋರಿಸಿದ್ದ ಅಸಹ್ಯತೆಯಿಂದಲೂ ಮತ್ತು ಲೆನಿನ್ನನಲ್ಲಿ ಇಟ್ಟಿದ್ದ ನಿಜವಾದ ವಿಶ್ವಾಸದಿಂದಲೂ ಗಾರ್ಕಿಯು ನಾನು ಊಹಿಸಿದುದಕ್ಕಿಂತಲೂ ಮೇಧಾವಂತನೆಂದು ತಿಳಿಯಬಂದಿತು. ಆದರೆ ಟಾಲ್ಸ್ಟಾಯಿಗೆ ಇವನಿಗಿಂತ ಬಹಳ ಮೇಲು ಮಟ್ಟದ ಸ್ಥಳವನ್ನು ಕೊಡದೆ ಇರಲು ನನ್ನಿಂದಾಗುವುದಿಲ್ಲ. ಅವನ Anna Karonina ಮತ್ತು Resurrection ಗಳೆರಡೇ ಅವನ ಹೆಸರನ್ನು ಚಿರಕಾಲ ಉಳಿಯುವ ಹಾಗೆ ಮಾಡಿವೆ. ಅದೂ ಅಲ್ಲದೆ ಗಾರ್ಕಿಯ ಎಲ್ಲಾ ಬರವಣಿಗೆಗಳಿಗಿಂತಲೂ ಟಾಲ್ಸ್ಟಾಯಿಯ ವಿಚಾರದಲ್ಲಿ ಅವನು ಬರೆದಿಟ್ಟ ನೆನಪುಗಳು ಹೆಚ್ಚು ಬೆಲೆಯನ್ನು ಪಡೆಯುವ ಹಾಗೆ ಕಾಣುತ್ತದೆ.

ರಷ್ಯಾದ ಕಲಾವಿದನಿಗಿಂತಲೂ ರಷ್ಯಾದ ಕ್ರಾಂತಿಕಾರನ ಕಡೆ ಅವನ ವಿಶ್ವಾಸ ಒಲಿದಿದೆ. ಗ್ರಾಮ ಜೀವನದಲ್ಲಿ ಬೆಳೆದು ಬಂದ ಗಾರ್ಕಿಯಲ್ಲಿ ಈ ಬಗೆಯ ಭಾವನೆ ಬರುವುದರಲ್ಲಿ ಯಾವ ಆಶ್ಚರ್ಯವೂ ಕಾಣುವುದಿಲ್ಲ.

ಗಾರ್ಕಿಯ ವಿಚಾರವಾಗಿ ನನ್ನ ಕೊನೆಯ ಸವಿನೆನಪುಗಳಿವು; ಮಾರ್ಕ್

ಬ್ರೈಡನು ಹೇಳಿದಂತೆ ಅವನು ಬಹಳ ದಯಾಪರ ಮತ್ತು ಬಹಳ ಮರ್ಯಾದಸ್ಥ. ಕಾಯಿಲೆಯಿಂದಲೂ ಮತ್ತು ತನ್ನ ವಯಸ್ಸಾದ ದಿನಗಳಲ್ಲಿ ಅನುಭವಿಸುತ್ತಿದ್ದ ದೇಶಾಂತರದ ವಾಸದಿಂದಲೂ, ಹೆಚ್ಚಾಗಿ ಬಾಧಿಸಲ್ಪಟ್ಟ ಅವನು ಆಗಾಗ್ಗೆ ಅಲ್ಪ ಸ್ವಲ್ಪ ಕೆರಳಿ ಕೋಪಿಸಿಕೊಂಡು ಮಾತನಾಡಿದರೆ ಅದನ್ನು ಯಾಕೆ ತಾನೇ ನಾವು ದೊಡ್ಡದನ್ನಾಗಿ ಮಾಡಬೇಕು ?

---

# ಮಿಂಚು ಹನಿ

## ಗಾರ್ಕಿಯ ದಿನಚರಿಯಿಂದ *

ಅನುವಾದಕ : ತ. ರಾ. ಸುಬ್ಬರಾಯ

### ೧. ವಿದ್ಯಾರ್ಥಿನಿಯ ಹೇಳಿಕೆ

ತನ್ನ ಹೆಂಡತಿಯನ್ನು ಕ್ರೈಯಾರ ಕೊಂದ ಮಾಸ್ಕೋ ವಿದ್ಯಾರ್ಥಿ ಮಾಕಾಫ್ ಹೇಳಿದ ಕಡೆಯ ಮಾತುಗಳಿವು :

" ಅವಳು ಸತ್ತುಹೋದಳು ; ಸತ್ತು ಹುತಾತ್ಮಳಾದಳು. ಇಷ್ಟು ಹೊತ್ತಿಗೆ ಆವಳು ಸ್ವರ್ಗದಲ್ಲಿ ದೇವತೆಯಾಗಿರಬೇಕು ; ಆದೇ ನಾನಿಲ್ಲಿ ನನ್ನ ಉಳಿದೆಲ್ಲ ಜೀವಮಾನ ಕಾಲಮುದ್ದಕ್ಕೂ ನಾ ಮಾಡಿದ ಕೊಲೆಯ, ಪಶ್ಚಾತ್ತಾಪದ ಭಾರಹೊತ್ತು ಬಾಳು ಹೊರೆಯಲು ಬದುಕಿದೇನೆ. ಸಾಲದೆ ? ನನ್ನನ್ನು ನಾನೆ ಶಿಕ್ಷಿಸಿಕೊಂಡ ಮೇಲೂ, ನನ್ನನ್ನೇಕೆ ಶಿಕ್ಷಿಸುತ್ತೀರಿ ? ಮೊದಲಿನ ಹಾಗೆ ಈಗಲೂ ನಾನು ರುಚಿಯಾದ ಸೇಬಿನಹಣ್ಣು, ಸೊಗಸಾದ ರೊಟ್ಟಿ ತಿನ್ನಬಲ್ಲೆ; ಆದರೆ ಅವುಗಳಲ್ಲಿ ಮೊದಲಿನ ಮಾಧುರ್ಯವಿಲ್ಲ, ರುಚಿಯಿಲ್ಲ. ಈಗ ನನಗಾವುದೂ ಸಂತೋಷಕೊಡದು—ಮತ್ತೇಕೆ ನನ್ನನ್ನು ಶಿಕ್ಷಿಸುತ್ತೀರಿ.

### ೨. ವಿನೋದ

ಹಿಂದೆ ಸಿಪಾಯಿಯಾಗಿದ್ದವನೊಬ್ಬನು ಒಂದು ಸಲ ನನಗೆ ಹೇಳಿದ :

" ಯುದ್ಧದಲ್ಲೂ ಎಂತೆಂಥ ತಮಾಷೆಯಾಗುತ್ತದೆ, ಗೊತ್ತೇನು ನಿಮಗೆ ? ಒಂದು ವಿಷಯ ಹೇಳುತ್ತೇನೆ ಕೇಳಿ. ಒಂದು ಸಲ ನಾವು ಐದು ಜನ ಪಕ್ಕದ ಕಾಡಿನಿಂದ ಕಟ್ಟಿಗೆ ಆರಿಸಿಕೊಂಡು ಬರಬೇಕೆಂದು ಹೋದೆವು. ಇದ್ದಕ್ಕಿದ್ದ ಹಾಗೇ ದೈತ್ಯದಂಥ ಜರ್ಮನ್ ಷೆಲ್ ಬಂದು ನಮ್ಮ ಮೇಲೆ ಸಿಡಿಯಿತು. ನಾನಂತೂ ಹಾರಿ ಒಂದು ತಗ್ಗಿನಲ್ಲಿ ಬಿದ್ದೆ. ಮೇಲೆಲ್ಲಾ ಕಲ್ಲುಮುಚ್ಚಿ ಹೂತು ಹೋದೆ.

ಪ್ರಜ್ಞೆ ಬಂದಮೇಲೆ ನನಗೆ ನಾನೇ ' ಸಿಮನ್ ನಿನ್ನ ಕಥೆ ಮುಗಿಯಿತು ' ಎಂದುಕೊಂಡೆ. ಆದರೆ ಹಾಗೆಲ್ಲಿ ಆಯಿತು ! ನನಗೇನೂ ಆಗಲಿಲ್ಲ. ಚೆನ್ನಾಗಿ ತಿಳಿವು ಬಂದಮೇಲೆ ಕಣ್ಣುಜ್ಜಿಕೊಂಡು ನೋಡಿದೆ—ಜೊತೆಗೆ ಬಂದ ಗೆಳೆಯರ

---

* Fragments of a Diary by Gorki.

ಸುಳಿವೇ ಇಲ್ಲ ; ಒಬ್ಬರದಾದರೂ ಇಲ್ಲ. ನನ್ನ ತಲೆಯ ಮೇಲೆ ಕೆಲವು ಮರದ ಕೊಂಬೆಗಳು ಬಾಗಿದ್ದುವು ; ಎಲೆಯೊಂದೂ ಇಲ್ಲದ ಬೋಳು ಕೊಂಬೆಗಳು. ಆ ಕೊಂಬೆಗಳಿಂದ ಹರಿದ್ಮಕರುಳಿನ ತುಂಡುಗಳು ಜೋಲಾಡುತ್ತಿದ್ದುವು.

'ನೋಡುತ್ತಿದ್ದ ಹಾಗೇ ನಾನು ನಗಲಾರಂಭಿಸಿದೆ. ಉಕ್ಕಿಬಂತು ನಗು. ನನ್ನ ಸ್ನೇಹಿತರೆನಿಸಿಕೊಂಡವರ ಹೆಸರಿಗೆ ಉಳಿದದ್ದು ಆ ಕೊಂಬೆಗಳಿಗೆ ಸಿಕ್ಕಿ ಜೋಲಾಡುತ್ತಿರುವುದು. ನೋಡಲಿಕ್ಕೆ ಒಳ್ಳೆ ತಮಾಷೆಯಾಗಿತ್ತು.

'ಒಂದು ಗಳಿಗೆಯಾದ ಮೇಲೆ ತುಂಬಾ ಕೆಡುಕೆನಿಸಿತು. ಎಷ್ಟಾದರೂ ಅವರು ನನ್ನ ಗೆಳೆಯರು ; ನನ್ನ ಹಾಗೇ ಮನುಷ್ಯರು. ಈಗ ಇದ್ದಕ್ಕಿದ್ದ ಹಾಗೆ—ಅವರದೇನೇನೂ ಇಲ್ಲ ; ಇರಲೇ ಇಲ್ಲವೆನ್ನುವ ಹಾಗೆ ಆದರೂ ಮೊದಲು—ನಾನು ನಕ್ಕೆ '

* * *

" ಇನ್ನೊಂದು ಸಲ ಒಂದು ಹಳ್ಳಿಗೆ ಹೋದೆವು. ಹಳ್ಳಿಯಲ್ಲಿದ್ದುದೆಲ್ಲಾ ಮೂರೇ ಗುಡಿಸಲು. ಒಂದರ ಮುಂದೆ ಒಬ್ಬ ಮುದುಕಿ ಕೂತಿದ್ದಳು ; ಪಕ್ಕದಲ್ಲೆ ಒಂದು ಹಸು ಮೇಯುತ್ತಾ ಇತ್ತು. 'ಓ, ಅಜ್ಜಿ. ಯಾರದು ಈ ಹಸು ನಿನ್ನದೇನು ?' ಎಂತ ಕೇಳಿದೆವು.

'ಆ ಮುದುಕಿ ಕಣ್ಣೀರು ಸುರಿಸುತ್ತಾ ಅಳಲಾರಂಭಿಸಿದಳು ; ಮೊಳ ಕಾಲೂರಿ ಬೇಡಲಾರಂಭಿಸಿದಳು ಇನ್ನು ಏನೇನೋ ಮಾಡಿದಳು.' 'ನನ್ನ ಮಕ್ಕಳು ! ನೆಲಮಾಳಿಗೆಯಲ್ಲಿ ಬಚ್ಚಿಟ್ಟಿದೀನಿ. ಹಸು ತಗೊಂಡುಹೋದರೆ ಸತ್ತೇ ಹೋಗುತ್ತವೆ.' ಎಂದು ಗೋಳಾಡತೊಡಗಿದಳು.

'ಷ್. ಹೊಡಕೋಬೇಡ. ರಸೀತಿ ಕೊಡುತೀವಿ ಸುಮ್ಮನಿರು' ಎಂದು ಸಮಾಧಾನ ಮಾಡಿದೆವು.

ನಮ್ಮ ದಳದಲ್ಲಿ ಒಬ್ಬನಿದ್ದ, ಕೊಸ್ಟ್ರೋಮಿನಿಂದ ಬಂದ ಹುಡುಗ. ಕಳ್ಳ ಎಂದರೆ ಕಳ್ಳ ; ಕಳ್ಳರಲ್ಲಿ ಕಳ್ಳ. ಅವನು ಆ ಮುದುಕಿಗೆ ಹೀಗೆ ರಸೀತಿ ಬರೆದುಕೊಟ್ಟ : 'ಈ ಮುದುಕಿ ತೊಂಭತ್ತು ವರ್ಷ ಬದುಕಿದಾಳೆ ; ಇನ್ನೂ ತೊಂಭತ್ತು ವರ್ಷ ಬದುಕುವಾಸೆ ಈಕೆಗಿದೆ—ಆದರೆ ಬದುಕುವುದಿಲ್ಲ.' ಇದಕ್ಕೆ ಆ ಒದ್ಮಾಷ್ ಏನೆಂತ ರುಜುಮಾಡಿದ ಗೊತ್ತೆ—'ಸರ್ವಶಕ್ತ ಪರಮೇಶ್ವರ' ಎಂದು.

ಮುದುಕಿಗೆ ಈ ರಸೀತಿಕೊಟ್ಟು ಆಕಳು ಹೊಡೆದುಕೊಂಡು ಹೊರಟು ಹೋದೆವು. ಹಾದಿಯುದ್ದಕ್ಕೂ ನಗುವೇ ನಗು ; ಹೆಜ್ಜೆಯಿಡಲಾಗದಷ್ಟು ನಗು. ಪಕ್ಕೆ ಹಿಡಿದುಕೊಂಡು, ನಕ್ಕದ್ದೂ ನಕ್ಕದ್ದೆ ! ''

## ೨. ಕೋತಿಗೆ ಬದಲು

ಕ್ರಿಮಿಶಾಸ್ತ್ರಜ್ಞ, ಪ್ರೊಫೆಸರ್ ಜ— ಈ ಕಥೆ ಹೇಳಿದರು:

' ಒಂದು ದಿನ ಜನರಲ್ ಬ---ಜೊತೆಯಲ್ಲಿ ಮಾತಾಡುತ್ತಾ ಹಾಗೇ ಮಾತಿನಲ್ಲಿ ನನ್ನ ಕೆಲವು ಪ್ರಯೋಗಕ್ಕೆ ನಾಲ್ಕಾರು ಕೋತಿ ಬೇಕಾಗಿದೆ ಎಂತ ಹೇಳಿದೆ. ಜನರಲ್ ತಟಕ್ಕನೇ ಹೇಳಿದ , ಹಾಸ್ಯಕ್ಕಾಗಿ ಅಲ್ಲ :

' ಜ್ಯೂಗಳಾದರೆ ಹೇಗೆ ? ಆಗುವುದಿಲ್ಲವೇ ? ನಾಲ್ಕಾರುಜನ ಗಲ್ಲಿಗೇರಿಸ ಬೇಕಾದ ಯಹೂದಿ ಗೂಢಚಾರರಿದಾರೆ, ಇಲ್ಲೆ. ಹೇಗಿದ್ದರೂ ಸಾಯುತ್ತಾರೆ. ನೋಡಿ ನಿಮಗೇನಾದರೂ ಉಪಯೋಗವಾಗುವ ಹಾಗಿದ್ದರೆ ಕಳಿಸುತ್ತೀನಿ. '

ನನ್ನ ಉತ್ತರಕ್ಕೆ ಕೂಡ ಕಾಯದೆ ಅವರು ಕೂಡಲೇ ತನ್ನ ಆಳನ್ನು ಕರೆದು ಗಲ್ಲಿಗೇರಬೇಕಾದವರು ಎಷ್ಟು ಜನರಿದಾರೋ ನೋಡಿಕೊಂಡು ಬಾ ಎಂತ ಹೇಳಿ ಕಳಿಸಿದರು.

ನಾನವರಿಗೆ, ನನ್ನ ಪ್ರಯೋಗಕ್ಕೆ ಮನುಷ್ಯರಾದರೆ ಆಗುವುದಿಲ್ಲ ಎಂತ ಎಷ್ಟೋ ವಿವರಿಸಿ ತಿಳಿಸಿಹೇಳಲು ಯತ್ನಿಸಿದೆ. ಆದರೆ ಅವರಿಗೆ ಅರ್ಥವೇ ಆಗ ಲಿಲ್ಲ. ಕಣ್ಣು ಇಷ್ಟಗಲ ತೆರೆದು ಹೇಳಿದರು :

' ಏಕೆ ? ಕೋತಿಗಳಿಗಿಂತಲೂ ಮನುಷ್ಯರು ಬುದ್ಧಿವಂತರಲ್ಲವೇ ? ಮನುಷ್ಯನಿಗೆ ವಿಷದಚುಚ್ಚುಮದ್ದು ಕೊಟ್ಟರೆ, ಹೇಗಾಗುತ್ತೆ ಎಂತ ಹೇಳಬಲ್ಲ. ಆದರೆ ಕೋತಿಗೆ ಹಾಗೆ ಹೇಳಲಾಗುತ್ತದೆಯೇ ?'

ಅಷ್ಟು ಹೊತ್ತಿಗೆ ಅವರು ಕಳಿಸಿದ ಆಳು ಹಿಂತಿರುಗಿ ಬಂದು ಗಲ್ಲಿಗೇರ ಬೇಕಾಗಿದ್ದವರಲ್ಲಿ ಯಹೂದಿ ಒಬ್ಬನೂ ಇಲ್ಲ. ಎಲ್ಲಾ ರುಮೇನಿಯರು, ಬೊಹೀಮಿನಿಯವರು ಎಂದು ಹೇಳಿದ.

' ಛೆ ! ಎಂಥ ಅನ್ಯಾಯ. ಬೊಹೀಮಿನಿಯನರಾದರೂ ನಿಮ್ಮ ಪ್ರಯೋಗಕ್ಕಾಗುವುದಿಲ್ಲವಲ್ಲ !..... ..ಎಂತ ಅನ್ಯಾಯ .......!'

## ೪. ಒಬ್ಬನೇ ಇದ್ದಾಗ ..............

ಈ ದಿನ ಟ್ರಾಟ್‌ಸ್ಕಿ ಸೇತುವೆಯ ಮೇಲೆ ಪಕ್ಕದ ಕೈಪಿಡಿಗೆ (ನೆವಾ ನದಿಗೆ ಹಾರುವಳಂತೆ) ಮಗುವಿನ ಮುಖದ, ಕೆನೆಬಣ್ಣದ ಕಾಲುಚೀಲ ಧರಿಸಿದ ಸುಂದರಿಯೊಬ್ಬಳು ನಿಂತಿದ್ದನ್ನು ನೋಡಿದೆ. ಬೂದಿಬಣ್ಣದ ಕೈಚೀಲ ಮುಚ್ಚಿದ ಕೈಕಂಬಿಯನ್ನು ಹಿಡಿದು ಇದ್ದಕ್ಕಿದ್ದಂತೆ ಆಕೆ ತನ್ನ ಕೆಂಬಣ್ಣದ ನಾಲಗೆಯನ್ನು ಚಟಕ್ಕನೆ ಹೊರಚಾಚಿ ಚಂದ್ರನನ್ನು ಅಣಕಿಸಿದಳು.

ಚಂದ್ರನಲ್ಲಿರುವ ಮುದುಕ ಆಕಾಶದ ಗುಳ್ಳೇನರಿ, ಹೊಲಸು ಮೋಡದೊಳಗೆ ಮೆಲ್ಲಗೆ ನುಸುಳಿಕೊಂಡು ಜಾರುತ್ತಿದ್ದ. ಹೆಚ್ಚು ಕುಡಿದವನಂತೆ ಅವನ ಕೆನ್ನೆ ಕೆಂಪಾಗಿತ್ತು. ಸೇಡು ತೀರಿಸಿಕೊಳ್ಳುವವಳಂತೆ ಹಟಹಿಡಿದು ಚಂದ್ರನನ್ನು ಛೇಡಿಸುತ್ತಿದ್ದಳು ಆ ಸುಂದರಿ; ನನಗೇನೋ ಹಾಗೇ ಅನಿಸಿತು.

'ಇವಳನ್ನು ನೋಡಿದಾಗ ನನಗೆ ಬಹು ದಿವಸದಿಂದ ನನ್ನ ಮನಸಿನಲ್ಲಿ ಮನೆಮಾಡಿಕೊಂಡಿದ್ದ ಕೆಲ 'ವೈಚಿತ್ರ್ಯ'ಗಳು ಜ್ಞಾಪಕಕ್ಕೆ ಬಂತು. ಈ ವಿಚಿತ್ರವನ್ನು ನಾ ಮೊದಲು ಕಂಡದ್ದು ವಿದೂಷಕ ರಾಂಡೇಲನಲ್ಲಿ. ರಾಂಡೇಲ್ ಇಂಗ್ಲೀಷರಾತ. ಒಂದು ದಿನ ಸರ್ಕಸ್ಸಿನ ಕತ್ತಲು ತುಂಬಿದ, ನಿರ್ಜನ ಕೈಸಾಲೆಯಲ್ಲಿ ಹೋಗಹೋಗುತ್ತಾ ಎದುರಿಗಿದ್ದ ಕನ್ನಡಿಯಲ್ಲಿ ತನ್ನ ಪ್ರತಿಬಿಂಬ ಕಂಡ ಕೂಡಲೆ, ಹ್ಯಾಟು ತೆಗೆದು ತಲೆಬಗ್ಗಿ ನಮಸ್ಕಾರ ಮಾಡಿದ. ಅಲ್ಲಿ ಅವನನ್ನು ಬಿಟ್ಟು ಮತ್ತೆ ಯಾರೂ ಇರಲಿಲ್ಲ. ಅವನೊಬ್ಬನೇ ಇದ್ದದ್ದು. ನಾನು ಅವನ ತಲೆಯ ಮೇಲಿನ ಗವಾಕ್ಷದಲ್ಲಿ ಅವನಿಗೆ ಕಾಣಿಸದ ಹಾಗೆ ಕೂತಿದ್ದೆ. ಅವನು ನಮಸ್ಕಾರ ಮಾಡುವ ಹೊತ್ತಿಗೆ ಸರಿಯಾಗಿ ನಾನೂ ಇಣಿಕಿನೋಡಿದೆ. ವಿದೂಷಕ ಮಾಡಿದ್ದನ್ನು ನೋಡಿ ನನ್ನ ತಲೆಯೊಳಗೆ ಎಂತೆಂಥದೋ ಕೆಟ್ಟ ವಿಚಾರ ಸುಳಿದುಹೋದವು. ಮೊದಲೇ ವಿದೂಷಕ; ಅದರಲ್ಲೂ ಇಂಗ್ಲೀಷರವನು; ಇಂಥ ಹುಚ್ಚುಚ್ಚಾರವೇ ಅವನ ಕೂಳಿಗೆ ಕೂಳು ಕೊಡುವ ಕಲೆ.

ಇನ್ನೊಂದುಸಲ ನಮ್ಮ ನೆರೆಮನೆಯಾತ ಆಂ. ಚೆಕಾಫ್ ಒಂದು ದಿನ ತೋಟದಲ್ಲಿ ಕೂತು ಹ್ಯಾಟಿನಲ್ಲಿ ಸೂರ್ಯಕಿರಣ ಹಿಡಿದು ಅದನ್ನು ತಲೆಯಮೇಲೆ ಹಾಕಿಕೊಳ್ಳಬೇಕೆಂದು ವ್ಯರ್ಥವಾಗಿ ಪ್ರಯತ್ನಿಸುತ್ತಿದ್ದ. ಸೋಲಿನಿಂದ ಈ ಸೂರ್ಯಕಿರಣದ ಬೇಟೆಗಾರನಿಗೆ ಬೇಸರವಾಗಿತ್ತು. ಸಿಡುಕುತ್ತಿದ್ದ. ಮುಖ ಗಳಿಗೆ

ಗಳಿಗೆಗೆ ಕೆಂಪೇರುತ್ತಿತ್ತು. ಕಡೆಗೆ ಜೋರಾಗಿ ಹ್ಯಾಟನ್ನು ತಲೆಗೆ ಸಿಕ್ಕಿಸಿ ಕೊಂಡು, ಪಕ್ಕದಲ್ಲಿದ್ದ ನಾಯನ್ನು ಒದ್ದುಬಿಟ್ಟ. ಆ ಮೇಲೆ ಅರ್ಧ ಕಣ್ಣು ಮುಚ್ಚಿಕೊಂಡು ಕಳ್ಳನೋಟದಲ್ಲಿ ಮುಗಿಲಿನ ಕಡೆ ನೋಡುತ್ತಾ ಮನೆಯ ಕಡೆ ಹೆಜ್ಜೆ ಹಾಕಿದ. ಮನೆಯ ಮುಂದಿನ ವರಾಂಡದಲ್ಲಿ ನಾನು ನಿಂತದ್ದನ್ನು ನೋಡಿ ನಸುನಗೆ ನಗುತ್ತಾ, "ನಮಸ್ಕಾರ. ಬೆಲ್ಮಾಂಟನ ಪದ್ಯಗಳನ್ನು ಓದಿದೀಯಾ 'ಹುಲ್ಲಿನಾ ನಸುಗಂಪು ಸೂಸುತಿಹನಾ ಸೂರ್ಯ' ಎಂದು ಬರೆದಿದಾನೆ. ಶುದ್ಧ ಅಪದ್ಧ' ಅಲ್ಲವೇ ? ರಷ್ಯಾದಲ್ಲಂತೂ ಕಾಜನ್ ಸೋಪಿನವಾಸನೆ ಸೂಸುತ್ತಾನೆ ಸೂರ್ಯ; ಇಲ್ಲಿ ಟಾರ್ಟರರ ಬೆವರಿನ ವಾಸನೆ" ಎಂದು.

ಸೀಸೆಯ ಸಣ್ಣಬಾಯೊಳಗೆ ಹಿಡಿಸದ, ದಪ್ಪ ಕೆಂಪು ಪೆನ್ಸಿಲ್ಲನ್ನು ತುರುಕಲು ಯತ್ನಿಸುತ್ತಿದ್ದವನೂ ಚೆಕಾಫೇ. ಪ್ರಯೋಗ ಮಾಡುವುದರಲ್ಲಿ ಹಟಹಿಡಿದ ವಿಜ್ಞಾನಿಯಂತೆ; ಏನೆಂದರೂ ಬಿಟ್ಟರೂ ತಾನೇ. ಸೀಸೆಯ ಬಾಯಿ ಮುರಿಯುವತನಕ ಮಿತಿ. ಹೀಗೆ ಮಾಡುತ್ತಿದ್ದುದೂ ಒಬ್ಬನೇ ಇದ್ದಾಗಲೇ.

ಲಿಯೋ ಟಾಲ್‌ಸ್ಟಾಯ್ ಒಂದು ದಿನ ಓತೀಕೇತ ಒಂದನ್ನು ಪಿಸು ಮಾತಿನಲ್ಲಿ ಕೇಳಿದರು : 'ಸುಖವಾಗಿದ್ದೀಯಾ ನೀನು ? ಏನು ?'

ಹಲ್ಲಿಡನ್‌ಬೆರಿನ ರಸ್ತೆಯ ಪಕ್ಕದಲ್ಲಿದ್ದ ಪೊದೆಗಳ ಮರೆಯಕಲ್ಲಿನ ಮೇಲೆ ಹಾಯಾಗಿ ಬಿಸಿಲು ಕಾಯಿಸಿಕೊಳ್ಳುತ್ತಿತ್ತು. ಟಾಲ್‌ಸ್ಟಾಯ್ ಚರ್ಮದ ಸೊಂಟದ ಪಟ್ಟಿಯಲ್ಲಿ ಎರಡೂ ಕೈ ಸಿಕ್ಕಿಸಿಕೊಂಡು ಅದನ್ನೇ ನೋಡುತ್ತಿದ್ದರು. ಪ್ರಶ್ನೆ ಕೇಳಿಯಾದಮೇಲೆ, ಹುಷಾರಾಗಿ ನಾಲ್ಕುಕಡೆ ನೋಡಿ ಯಾರೂ ಇಲ್ಲ ದ್ದನ್ನು ಖಚಿತಮಾಡಿಕೊಂಡು ವಿಶ್ವಸಾಹಿತಿ ಓತೀಕೇತನ ಕಿವಿಯಲ್ಲಿ ಗುಟ್ಟಾಗಿ ಹೇಳಿದರು : 'ನನಗಂತೂ ಸ್ವಲ್ಪವೂ ಸುಖ ಸಂತೋಷವಿಲ್ಲ !'

ರಸಾಯನ-ಶಾಸ್ತ್ರಜ್ಞ ಪ್ರೊಫೆಸರ್ ಚಿಕಿವಿನ್‌ಸ್ಕಿ ನಮ್ಮ ಊಟದ ಮನೆ ಯಲ್ಲಿ ಕೂತಿದ್ದವರು ಎದುರಿಗಿದ್ದ ತಾಮ್ರದ ತಟ್ಟೆಯಲ್ಲಿ ಮುಖ ನೋಡಿ ಕೊಳ್ಳುತ್ತಾ 'ಜೀವನ ಹೇಗಿದೆಯಪ್ಪಾ' ಎಂದು ಕೇಳಿದರು.

ತಟ್ಟೆಯಲ್ಲಿನ ಪ್ರತಿಬಿಂಬ ಏನು ಉತ್ತರ ಕೊಟ್ಟೀತು ; ಸುಮ್ಮನಿತ್ತು. ಚಿಕಿವಿನ್‌ಸ್ಕಿ ಗಟ್ಟಿಯಾಗಿ ನಿಟ್ಟುಸಿರಿಟ್ಟು, ನಿಧಾನವಾಗಿ ಹುಷಾರಾಗಿ, ಹುಬ್ಬು

ಗಂಟು ಹಾಕಿಕೊಂಡು ಪುಟ್ಟ ಆನೆಯ ಸೊಂಡಲಿನಂತಿದ್ದ ಮೂಗಿನ ಹೊಳ್ಳೆ ಅರಳಿಸುತ್ತಾ ಆ ಪ್ರತಿಬಿಂಬವನ್ನು ತಟ್ಟೆಯಿಂದ ಅಳಿಸಲಾರಂಭಿಸಿದರು.

ಎಸ್. ಎಸ್. ಲೆಸ್ಕಫ್ ಒಬ್ಬನೇ ಊಟಕ್ಕೆ ಕೂತಾಗ ಹತ್ತಿಯ ಉಂಡೆಯನ್ನು ಕೆಳಗಿದ್ದ ಗಾಜಿನ ಬಟ್ಟಲಲ್ಲಿ ಬೀಳುವಂತೆ ಮೇಲಕ್ಕೆಸೆದು ಬಟ್ಟಲಲ್ಲಿ ಹತ್ತಿಬಿದ್ದು ಸದ್ದಾಗುವುದೇನೋ ಎಂದು ಬಟ್ಟಲಿಗೆ ಕಿವಿಗೊಟ್ಟು ಕೇಳುತ್ತಿದ್ದನಂತೆ. ಹಾಗೆಂತ ನಾ ಕೇಳಿದೇನೆ.

ಒಂದು ಸಲ ಪಾದ್ರಿ ಎಫ್. ವ್ಲಾಡಿಮಿರ್‌ಸ್ಕಿ ತನ್ನ ಮುಂದೆ ಬೂಟ್ಸ್ ನಿಟ್ಟುಕೊಂಡು ಗಂಭೀರವಾಗಿ ಅದಕ್ಕೆ ' ಸರಿ-ನೀನಿನ್ನು ಹೋಗು.' ಎಂದರು. ಆಮೇಲೆ ' ಓ ! ನಿನಗೆ ನಡಿಯೋದಕ್ಕೆ ಬರೋದಿಲ್ಲ ' ಎಂದರು. ಇದಾದ ಮೇಲೆ ಆತ್ಮವಿಶ್ವಾಸ ಸೂಸುವ ದನಿಯಲ್ಲಿ ' ನೋಡಿದೆಯೋ ? ನಾನಿಲ್ಲದೆ ನೀನೆಲ್ಲಿಲ್ಲೂ ಓಡಾಡಲಿಕ್ಕೇ ಆಗೋದಿಲ್ಲ !' ಎಂತ ಹೇಳಿದರು.

' ಇದೇನು ಮಾಡುತಾ ಇದೀರಾ ' ಎಂತ ಅಗಾತಾನೆ ಕೋಣೆಯೊಳಗೆ ಬಂದೆ.

ಅವರು ನನ್ನ ಕಡೆ ನೋಡಿ ವಿರಮಿಸಿದರು : 'ಏನೂ ಇಲ್ಲ, ಈ ಬೂಟ್ಸ್ ನೋಡು. ಹಿಮ್ಮಡಿ ಹತ್ತಿರ ಪೂರಾ ಸವೆದುಹೋಗಿದೆ. ಈಗೀಗಂತೂ ತುಂಬಾ ಹೊಲಸು ಬೂಟ್ಸ್ ಮಾಡುತ್ತಾರೆ !'

ಒಬ್ಬರೇ ಇದ್ದಾಗ ಕೆಲವರು ಅಳುವುದನ್ನು, ನಗುವುದನ್ನು ನಾನೋಡಿದೇನೆ. ಒಬ್ಬ ಲೇಖಕ-ಬುದ್ಧಿವಂತ, ಎಂದೆಂದೂ ಕುಡಿಯದಿದ್ದವನು ಒಬ್ಬನೇ ಇದ್ದಾಗ ಯಾವುದೋ ಒಂದು ಹಳೇ ಹರಕುಮುರುಕು ರಾಗ ಸಿಳ್ಳುಹಾಕುತ್ತಾ ಅಳುತ್ತಾ ಇದ್ದ. ಸಿಳ್ಳು ಹಾಕುವುದೂ ಸರಿಯಾಗಿ ಬರದು ; ಹೆಂಗಸಿನ ಹಾಗೆ. ತುಟಿ ನಡುಗುತ್ತಿದ್ದವು. ಕಣ್ಣಿನಿಂದ ನೀರು ಹನಿಹನಿಯಾಗಿ ಉದುರಿ ಹೋಗುತ್ತಿತ್ತು. ಹೊರವಾಗಿ ಬೆಳೆದ ಅವನ ಮೀಸೆ ಗಡ್ಡಗಳಲ್ಲಿ ಮಾಯವಾಗುತ್ತಿದ್ದವು. ಒಮ್ಮೆ ಯಾವುದೋ ಒಂದು ಹೋಟಲಿನ ಕೋಣೆಯಲ್ಲಿ ಕಿಟಕಿಗೆ ಬೆನ್ನು ಮಾಡಿ ನಿಂತು, ಈಜಾಡುವರ ಹಾಗೆ ಕೈ ಆಡಿಸುತ್ತಿದ್ದ ; ವ್ಯಾಯಾಮವೇನಲ್ಲ, ಕೈಯಾಡಿಸುವುದರಲ್ಲಿ ಆವೇಗವಾಗಲೀ ಲಯವಾಗಲೀ ಇರಲಿಲ್ಲ.

ಆದರೆ ಇದೆಲ್ಲಾ ಅಷ್ಟು ವಿಚಿತ್ರವಲ್ಲ. ಕಣ್ಣೀರು, ನಗೆ ಎಲ್ಲಾ ಮನಸ್ಸಿನ ಸ್ವಾಭಾವಿಕ ಸ್ಥಿತಿಗಳು. ಬುದ್ಧಿವಂತರೂ ಹಾಗೆ ಮಾಡುತ್ತಾರೆ ; ಇದರಿಂದ

ನನಗೆ ಅಷ್ಟು ದಿಗ್ಭ್ರಮೆಯಾಗುವುದಿಲ್ಲ, ಹಾಗೆ ಕಾಡು, ಬಯಲು, ಕಡಲು, ಹೊಲದಲ್ಲಿ ಒಬ್ಬೊಬ್ಬ ಕತ್ತಲು ಹೊತ್ತಿನಲ್ಲಿ ಕೂತು ಪ್ರಾರ್ಥನೆ ಮಾಡುವುದು ನನಗಷ್ಟು ಆಶ್ಚರ್ಯವೆನಿಸುವುದಿಲ್ಲ.

ಒಂದುಸಲ ನೇಗ್ರೈಡ್ಸ್ಟೋರ್‌ನಲ್ಲಿ ನಾನೊಂದು ಹೋಟಲಿನಲ್ಲಿ ಇಳಿದುಕೊಂಡಿದ್ದೆ. ಪಕ್ಕದ ಕೋಣೆಯಲ್ಲಿ ವಾರೊನೊಜ್ ಜಿಲ್ಲೆಯ ಜಮೀನ್‌ದಾರನೊಬ್ಬನಿದ್ದ. ಒಂದು ದಿನರಾತ್ರಿ ಈತ ದಾರಿತಪ್ಪಿ ನನ್ನ ಕೋಣೆಯೊಳಗೆ ಬಂದ. ಮೈ ಅರ್ಧ ಬೆತ್ತಲೆ ; ಎಚ್ಚರಮಾತ್ರ ಪೂರಾ ಇತ್ತು. ದೀಪ ಆಗಲೇ ಆರಿಸಿದ್ದೆ. ಸದ್ದುಮಾಡದೆ ನೋಡುತ್ತಾ ಮಲಗಿಕೊಂಡೆ. ಕೋಣೆಯಲ್ಲೆಲ್ಲಾ ತಿಂಗಳ ಬೆಳಕು ತುಂಬಿತ್ತು. ಸೊಳ್ಳೆಪರದೆಯೊಳಗಿನ ತೂತಿನಿಂದ ಅವನ ಒಣಮುಖ, ಅದರ ಮೇಲೆ ಮಿನುಗುತ್ತಿದ್ದ ಏನೋ ಒಂದು ಬಗೆಯ ನಗು ಸ್ಪಷ್ಟವಾಗಿ ಕಾಣುತ್ತಿತ್ತು. ಅವನು ಮೆಲುದನಿಯಲ್ಲಿ ತನ್ನೊಂದಿಗೇ ಸಂಭಾಷಣೆ ನಡೆಸುತ್ತಿದ್ದ.

"ಯಾರಲ್ಲಿ ?"

"ನಾನು.''

"ಇದು ನಿನ್ನ ಕೋಣೆಯಲ್ಲ "

"ಓ ! ಕ್ಷಮಿಸಬೇಕು.''

"ಛಿ ! ಹಾಗೇನೂ ......."

ಮಾತು ನಿಲ್ಲಿಸಿ, ಕನ್ನಡಿಯಲ್ಲಿ ಮೀಸೆ ನೋಡಿ ಮೆಚ್ಚಿಕೊಂಡು ಮೆದುವಾಗಿ ಹಾಡಲಾರಂಭಿಸಿದ.

"ತಪ್ಪು ಸ್ಥಳಕೆ ಬಂದೆ ನಾನು ನಾನು ...
ಹೇಗೆ ಬಂದೆನೋ, ಬಂದೆನೋ, ಬಂದೆನೋ ?"

ಇದಾದಮೇಲೆ ಕೋಣೆ ಬಿಟ್ಟುಹೋಗದೆ ಅವನು, ಒಂದು ಪುಸ್ತಕ ತೆಗೆದುಕೊಂಡು ಅದನ್ನು ಮೇಜಿನ ಮೇಲೆ ಅಡಿಮೇಲುಮಾಡಿ ಇಟ್ಟು ಗಟ್ಟಿಯಾಗಿ ಗದರಿಸುವನಂತೆ ಹೇಳಿದ :

'ಹಗಲಿನಷ್ಟು ಬೆಳಕಾಗಿದೆ ಈಗ. ಬೆಳಿಗ್ಗೆ ಎಲ್ಲಾ ಹಾಳಾದ್ದು ಕತ್ತಲೇ ಕತ್ತಲು. ಆ ಎಷ್ಟು ಸೊಗಸೋ ಈ ಕೋಣೆ ಇಟ್ಟಿರೋದು. ಛಿ ...!

ಹಾಗೆಂದವನೇ ಮೆಲ್ಲಗೆ ಸದ್ದುಮಾಡದೆ ಕೈಯನ್ನು ತೂಕ ತಪ್ಪುವ ಹಾಗೆ ಕೆಳಗೂ ಮೇಲೂ ಆಡಿಸುತ್ತ ತುದಿಗಾಲಿನ ಮೇಲೆ ನಡೆಯುತ್ತಾ ಹೊರಗೆ ಹೋಗಿ ಸದ್ದಾಗದ ಹಾಗೆ ಹುಷಾರಾಗಿ ಬಾಗಿಲು ಹಾಕಿಕೊಂಡ.

ಮಕ್ಕಳು ಬೆರಳಿನಿಂದ ಪುಸ್ತಕದಲ್ಲಿನ ಚಿತ್ರ ಕೀಳಲು ಯತ್ನಿಸುವುದನ್ನು ಎಲ್ಲರೂ ನೋಡಿದೇವೆ. ಅದರಲ್ಲೇನೂ ಹೊಸತಿಲ್ಲ; ಆದರೆ ಅದೇ ಪ್ರೊಫೆಸರು ಒಬ್ಬರು ಯಾರಾದರೂ ನೋಡಿ ಬಿಯ್ದಾರೇನೋ ಎಂಬ ಹಾಗೆ ಹೆದರಿಕೊಂಡು ಸುತ್ತಮುತ್ತ ನೋಡುತ್ತಾ ಚಿತ್ರ ಕೀಳಲೆತ್ನಿಸುತ್ತಿದ್ದರೆ, ಅದು ಆಶ್ಚರ್ಯಪಡ ಬೇಕಾದ್ದೆ.

ಈ ಪ್ರೊಫೆಸರಿಗೆ ಅಚ್ಚಾದ ಚಿತ್ರವನ್ನು ಕಿತ್ತು ತನ್ನ ವೇಸ್ಟ್‌ಕೋಟಿನ ಜೇಬಿನಲ್ಲಿಟ್ಟುಕೊಳ್ಳಬಹುದೆಂದು ಹೇಗೋ ನಂಬಿಕೆಯಾಗಿ ಬಿಟ್ಟಿತ್ತು. ಒಂದೆ ರಡು ಸಲ ಆ ಚಿತ್ರ ಕಿತ್ತುಬಂದ ಹಾಗೇ ತೋರಿತು. ಹಾಳೆಯಿಂದ ಏನನ್ನೋ ತೆಗೆದು ಬೆರಳಿನಲ್ಲಿ ಹಿಡಿದುಕೊಂಡು ಜೇಬಿನಲ್ಲಿ ಹಾಕಿಕೊಳ್ಳಲು ಯತ್ನಿಸಿದ; ಆಮೇಲೆ ಕೈಬೆರಳು ನೋಡಿಕೊಂಡು ಸಿಡುಕುತ್ತ ಚಿತ್ರವನ್ನು ಬೆಳಕಿಗೆ ಹಿಡಿದು ನೋಡಿ ಮತ್ತೆ ಕೀಳಲಾರಂಭಿಸಿದ. ಕಡೆಗೆ ಇದರಿಂದ ಏನೂ ಪ್ರಯೋಜನ ವಾಗದ್ದನ್ನು ನೋಡಿ ರೇಗಿ, ಪುಸ್ತಕವನ್ನು ಒಂದು ಕಡೆ ಒಗೆದು ದಪದಪ ಹೆಜ್ಜೆಹಾಕುತ್ತ ಹೊರಟುಹೋದ. ನಾನು ಹುಷಾರಾಗಿ ಆ ಪುಸ್ತಕವನ್ನು ಪರೀಕ್ಷಿಸಿದೆ. ಅದು ಯಾವುದೋ ಒಂದು ಜರ್ಮನ್ ಯಂತ್ರವಿಜ್ಞಾನದ ಪುಸ್ತಕ. ಅದರ ತುಂಬಾ ಎಲೆಕ್ಟ್ರಿಕ್ ಮೋಟಾರ್, ಅದರ ಬೇರೆ ಬೇರೆ ಭಾಗ ಗಳ ಚಿತ್ರಗಳಿದ್ದವು. ಪುಟಕ್ಕೆ ಅಂಟಿಸಿದ ಚಿತ್ರ ಒಂದಾದರೂ ಇರಲಿಲ್ಲ ಅದ ರಲ್ಲಿ; ಹಾಳೆಯ ಮೇಲೆ ಅಚ್ಚಾದ್ದನ್ನು ಉಗುರಿನಿಂದ ಕಿತ್ತು ಜೇಬಿನಲ್ಲಿ ಇಟ್ಟು ಕೊಳ್ಳುವುದು ಹೇಗೆ! ಯಂತ್ರವಿಜ್ಞಾನಿಯಲ್ಲದೆ, ಇತಿಹಾಸ ಶಾಸ್ತ್ರಜ್ಞನಾ ದರೂ, ಆತನಿಗೂ ಇದು ಗೊತ್ತಿರಬೇಕು.

ಹೆಂಗಸರು ಒಂಟಿಯಾಗಿ ಪೇಷನ್ಸ್ ಆಟ ಆಡುತಾ ಇರುವಾಗ, ಅಥವಾ ಕೇಶಾಲಂಕಾರ ಮಾಡಿಕೊಳ್ಳುವಾಗ ತಮಗೆ ತಾವೆ ಮಾತಾಡಿಕೊಳ್ಳುತ್ತಾರೆ; ನಾ ನೋಡಿದೇನೆ. ಒಂದು ದಿನ ಒಬ್ಬಹೆಣ್ಣುಮಗಳು ಒಂಟಿಯಾಗಿ, ತಾನು ತಿನ್ನುತ್ತಿದ್ದ ಮಿಠಾಯಿಯೊಡನೆ ಪೂರಾ ಐದುನಿಮಿಷ ಮಾತಾಡುತ್ತಿದ್ದಳು. ಒಂದೊಂದನ್ನೆ ಇಕ್ಕಳದಲ್ಲಿ ಮೆಲ್ಲಗೆ ಹಿಡಿದೆತ್ತಿ

'ನೋಡು ನಿನ್ನ ತಿಂದುಹಾಕಿ ಬಿಡುತ್ತೇನೆ' ಎಂದು ಗಬಕ್ಕನೆ ಬಾಯಲ್ಲಿ ಹಾಕಿಕೊಂಡು 'ಯಾರನ್ನು?' ಎಂತ ಕೇಳುತ್ತಿದಳು.

'ತಿನ್ನಲಿಲ್ಲವೇನು?'

ಮತ್ತೆ: 'ನಿನ್ನ ತಿಂದುಹಾಕಿ ಬಿಡುತ್ತೇನೆ!'

'ತಿನ್ನಲಿಲ್ಲವಾ?'

ಆ ಹೆಣ್ಣುಮಗಳು ಕಿಟಕಿಗೆ ಎದುರಾಗಿ ಆರಾಮಕುರ್ಚಿಯಲ್ಲಿ ಒರಗಿದ್ದಳು. ಬೇಸಿಗೆಯ ಸಂಜೆ ಐದು ಗಂಟೆಯ ಸಮಯ. ಕಿಟಕಿಯಿಂದ ಊರಿನ ಸದ್ದು ಸುಮಾರಾಗಿ ಕೇಳಿಸುತ್ತಿತ್ತು. ಆಕೆಯ ಮುಖ ಗಂಭೀರವಾಗಿತ್ತು. ಕಣ್ಣು ಮಿಠಾಯಿಯಲ್ಲೇ ನಾಟಿತ್ತು .......

ಒಂದು ಸಲ ನಾಟಕಕ್ಕೆ ತಡವಾಗಿ ಬಂದ ಕೃಷ್ಣಕೇಶದ ಕೋಮಲೆಯೊಬ್ಬಳು ಥಿಯೇಟರಿನ ಕೈಸಾಲೆಯಲ್ಲಿದ್ದ ಕನ್ನಡಿಯಲ್ಲಿ ಕೂವಲು ತಿದ್ದಿ ಗಡಸು ದನಿಯಲ್ಲಿ ಗಟ್ಟಿಯಾಗಿ ಯಾರಿಗೋ ಹೇಳುತ್ತಿದ್ದಳು:

'ಆದರೇನು – ಸತ್ತೇ ಸಾಯಬೇಕು?'

ಕೈಸಾಲೆಯಲ್ಲಿ ಆಕೆಯ ಹಾಗೇ ನಾಟಕಕ್ಕೆ ತಡವಾಗಿ ಬಂದ ಮತ್ತಾರೂ ಇರಲಿಲ್ಲ. ನನ್ನನ್ನಾಕೆ ನೋಡಲಿಲ್ಲ. ನೋಡಿದ್ದರೂ ನನಗೆ ಅಂಥ ಹಾಳು ಪ್ರಶ್ನೆ ಹಾಕುತ್ತಿರಲಿಲ್ಲ!

ನಿಜ. ಒಬ್ಬಂಟಿಯಾಗಿದ್ದಾಗ ಎಷ್ಟೋ ಜನ ಹೀಗೆ ವಿಚಿತ್ರವಾಗಿ ಆಡುತ್ತಾರೆ. ಇನ್ನೊಂದು ಹೇಳುತ್ತೇನೆ:

ಅಲೆಕ್ಸಾಂಡರ್ ಬ್ಲಾಕ್ ಒಂದು ದಿನ ಸಾರ್ವಜನಿಕ ಪುಸ್ತಕಾಲಯದ ಮಹಡಿ ಮೆಟ್ಟಿಲಮೇಲೆ ನಿಂತುಕೊಂಡು ಯಾವುದೋ ಪುಸ್ತಕದಲ್ಲಿ ಏನನ್ನೋ ಪೆನ್ಸಿಲ್ಲಿನಿಂದ ಗುರುತುಹಾಕುತ್ತಾ ಇದ್ದವನು ಇದ್ದಕ್ಕಿದ್ದಹಾಗೇ ಕೈಪಿಡಿಗೆ ಒತ್ತಿಕೊಂಡು ಗೌರವವಾಗಿ ಯಾರಿಗೋ ಹೋಗಲು ಜಾಗಬಿಟ್ಟ. ನಾನು ಅವನನ್ನೇ ನೋಡುತ್ತಾ ಇದ್ದೆ. ಯಾರೂ ಮೆಟ್ಟಿಲು ಹತ್ತಿ ಬರಲಿಲ್ಲ. ನಾನು ಮೆಟ್ಟಿಲ ಮೇಲಿನ ತುದಿಯಲ್ಲಿ ನಿಂತಿದ್ದೆ. ಅವನು ಕಣ್ಣುಗಳಲ್ಲಿ ಹಿಂದೆ ಹೋದವರನ್ನು ಹಿಂಬಾಲಿಸುವ ನಗೆನೋಟವಿತ್ತು. ಏಕೋ ಏನೋ ನನ್ನ ಕಡೆ ನೋಡಿದಾಗ ನನ್ನನ್ನು ನೋಡಿದ ಕೂಡಲೇ ಆಶ್ಚರ್ಯ ಅರಳಿತು. ಕೈಯಲ್ಲಿದ್ದ

ಪೆನ್ಸಿಲ್ ಕೆಳಕ್ಕೆ ಬಿತ್ತು. ಅದನ್ನು ಎತ್ತಿಕೊಳ್ಳಲು ಬಗ್ಗಿ, ಎತ್ತಿಕೊಂಡು ಕೇಳಿದ:

'ತುಂಬಾ ತಡವಾಗಿ ಹೋಯಿತೇನು ನಾ ಬಂದದ್ದು?'

**ಕಿಡಿಗಳು**

ನ್ಯಾಯಾಲಯ ಹೊತ್ತಿ ಉರಿಯುತ್ತಿತ್ತು. ಛಾವಣಿಯಾಗಲೆ ಉರುಳಿತ್ತು; ನಾಲ್ಕು ಗೋಡೆಗಳ ನಡುವೆ ಬೆಂಕಿ ಛಟಿಛಿಟಿಲೆಂದು ಉರಿ ಕಾರುತ್ತಿತ್ತು. ಕೆಂಪು ಹಳದಿಯ ಬಣ್ಣದ ಎಣ್ಣೆಯಂಥ ಹೊಗೆ, ಕತ್ತಲು ಕವಿದ ಮುಗಿಲಿಗೆ ಕೋತಿ ಕಾಗದದ ಚೂರು ತೂರಿ, ಸುರುಳಿ ಸುತ್ತಿ ಬಿಚ್ಚಿ, ಮೇಲೇರುತ್ತಿತ್ತು. ಬೆಂಕಿಯನ್ನು ಆರಿಸಲು ಮಾತ್ರ ಯಾರೂ ಪ್ರಯತ್ನಮಾಡಲಿಲ್ಲ.

ಸುಮಾರು ಮೂವತ್ತು ನಲವತ್ತು ಜನ ನಿಂತು ಅಗ್ನಿಯ ಕಾಂಡವವನ್ನು ನೋಡುತ್ತಿದ್ದರು. ಎದುರಿನ ಬಂದೂಕದ ಕಾರ್ಖಾನೆಯ ಮುಂದಿನ ಪುರಾತನ ತೋಪುಗಳ ಮೇಲೆ ಆ ಉರಿ ಬೆಳಕಿನಲ್ಲಿ ಕಾಗೆಗಳಂತೆ ಕೂತಿದ್ದರು. ಡೂಮಾದ ಕಡೆಗೆ ಬಾಯಿ ತಿರುಗಿಸಿ ನಿಂತ ತೋಪುಗಳನ್ನು ನೋಡಿದರೆ ಮನಸ್ಸಿನಲ್ಲಿ ಏನೋ ಒಂದು ವಿಚಿತ್ರಭಾವ ಬರುತ್ತಿತ್ತು. ಡೂಮಾ ಉಕ್ಕಿ ಕುದಿಯುತ್ತಿರುವ ನೀರಿನ ಪಾತ್ರೆಯಂತಿತ್ತು. ದಸ್ತಗಿರಿಯಾದ ಮಂತ್ರಿಗಳನ್ನೂ, ಸೇನಾಧಿಕಾರಿಗಳನ್ನೆಲ್ಲಾ ಕಾರುಗಳಲ್ಲಿ ಕೂರಿಸಿಕೊಂಡು, ನಡಸಿಕೊಂಡು ಡೂಮಾಕ್ಕೆ ಕರೆದೊಯ್ಯುತ್ತಿದ್ದರು. ಕರ್ರಗೆ, ಗುರುತು ಹತ್ತದಷ್ಟು ಗುಂಪುಗುಂಪಾಗಿ ಜನ ಅಲ್ಲಿಂದಿಲ್ಲಿಗೆ ಲಾಳಿ ಹಾಕುತ್ತಿದ್ದರು.

ಯುವಕನ ಧ್ವನಿ ಸ್ಪಷ್ಟವಾಗಿ ಕೇಳಿಸಿತು ಆ ಗದ್ದಲದಲ್ಲಿ:

'ಟೋವಾರಿಷಿ! ಈ ಬ್ರೆಡ್ಡಿನ ಕುಂಚನ್ನು ಇಲ್ಲಿ ಯಾರು ಹಾಕಿದೋರ..?'

ಬಂದೂಕದ ಗಾಡಿಗಳ ನಡುವೆ ಹೊಲಸಾದ ಕುರಿಚರ್ಮದ ಟೋಪಿ ಹಾಕಿಕೊಂಡವನೊಬ್ಬನು, ಒಂದು ಕಡೆ ವಾಲಿಕೊಂಡು ಕಾವಲುಗಾರನ ಹಾಗೆ ನಡೆಯುತ್ತಿದ್ದ. ಕುರಿಚರ್ಮದ ನಿಲುವಂಗಿ ಅವನ ಮುಖವನ್ನು ಮುಚ್ಚಿತ್ತು. ಇದ್ದಕ್ಕಿದ್ದ ಹಾಗೆ ನಿಂತು ದಪ್ಪದನಿಯಲ್ಲಿ ಕೇಳಿದ 'ನ್ಯಾಯ ನೀರು ಪಾಲಾದ ಹಾಗೇ ತಾನೇ – ಅಲ್ಲವೇ? ಇನ್ನು ಶಿಕ್ಷೆ ಗಿಕ್ಷೆ ಏನೂ ಇಲ್ಲದ್ದ ಹಾಗೇ?

ಅವನಿಗೆ ಯಾರೂ ಉತ್ತರ ಕೊಡಲಿಲ್ಲ. ಚಳಿರಾತ್ರಿ. ಬೆನ್ನು ಬಾಗಿಸಿ ಜನ ಮೋಡಿಗೆ ಸಿಲುಕಿದವರಂತೆ, ಉರಿಯುತ್ತಿರುವ ನ್ಯಾಯಾಲಯವನ್ನು ಬಗ್ಗಿ ನೋಡುತ್ತಿದ್ದರು. ಕಲ್ಲುಗೋಡೆಗಳ ನಡುವೆ ಮರದ ಭಾವಣಿ ಹೊತ್ತಿ ಉರಿಯುತ್ತಿತ್ತು. ಬಿಳುಚಿಹೋದ ಮುಖಗಳ ಮೇಲೆ, ಉರಿಯ ಬೆಳಕು ಬಿದ್ದಿತ್ತು; ನೋಡಿಯೂ ನೋಡದ ಕೋಟಿ ಕಣ್ಣುಗಳಲ್ಲಿ ಆ ಅಗ್ನಿ ಕಾಂಡ ಪ್ರತಿಬಿಂಬಿಸಿತ್ತು. ರಷ್ಯಾ ನೂರು ಕಷ್ಟದ ಗಂಡುದಾರಿ ಹಿಡಿದ ಆ ರಾತ್ರಿ, ಬಂದೂಕಗಳ ಸುತ್ತ ಗುಂಪುಕಟ್ಟಿ ನಿಂತ ಈ ಜನರನ್ನು ನೋಡಿದರೆ, ಹಿಚುಕಿ ಹಿಂಡಿಮಾಡಿದ ಕಾಗದದ ಹಾಗೆ ಕಾಣಿಸುತ್ತಿದ್ದರು.

ತಪ್ಪು ಮಾಡಿದವರಿಗೆ ಹೇಗೆ? ಅವರ ವಿಚಾರಣೆಯೇ ಇಲ್ಲವೇನು?' ಯಾರೋ ಕೆಳಗನಿಯಲ್ಲಿ ಅಣಕಿಸುವ ಹಾಗೆ ಉತ್ತರಕೊಟ್ಟರು: 'ಹೆದರಬೇಡ' ಯಾರನ್ನು ಮರೆತರೂ, ನಿನ್ನ ವಿಚಾರಣೆ ಮಾತ್ರ ತಪ್ಪುವುದಿಲ್ಲ.'

ಈ ವಿಚಿತ್ರ ಸಂಭಾಷಣೆ ಹೀಗೇ ನಿಧಾನವಾಗಿ ಸಾಗಿತು.

'ಹಾಗಾದರೆ ವಿಚಾರಣೆಗಳು ನಡೆಯುತ್ತವೆ ಅನ್ನು?'

'ಇದಕ್ಕೆ ಯಾರು ಬೆಂಕಿ ಹಾಕಿದೋರು?'

'ಮತ್ತಿನ್ನಾರು? ಯಾರೋ ಕಳ್ಳಕೊರಮರು.'

'ಅವರಿಗೆ ಅನುಕೂಲ ತಾನೆ ಇದರಿಂದ.'

'ಅಗೋ ಅಲ್ಲಿದಾನಲ್ಲಾ ಅವನಂಥವರು........'

ಹೊಲಸು ಟೋಪಿ ಹಾಕಿಕೊಂಡಿದ್ದವನು ಗಟ್ಟಿಯಾಗಿ ಕೂಗಿ ಹೇಳಿದ: 'ನಾನೇನು ಕಳ್ಳನಲ್ಲ. ಸುಳ್ಳನಲ್ಲ. ನಾನಿಲ್ಲಿಯ ಕಾವಲುಗಾರ. ಇಲ್ಲಿ ನನ್ನನ್ನು ಬಿಟ್ಟರೆ ಮತ್ತಾರೂ ಇರುವುದಿಲ್ಲ.'

ಕಾಲಿನ ಹತ್ತಿರ ನೆಲದ ಮೇಲೆ ಉಗುಳಿ, ಹುಷಾರಾಗಿ ಅದನ್ನು ಕಾಲಿನಿಂದ ತಿಕ್ಕುತ್ತ ಹೇಳಿದ.

ನನಗೇನೋ ಇದೆಲ್ಲಾ ಅನುಮಾನವೆ! ತಪ್ಪು ಮಾಡಿದವರನ್ನೆಲ್ಲಾ ಕ್ಷಮಿಸುತ್ತಾರೆ ಎಂದರೂ ಈ ಕೆಲಸ ಏಕೆ ಮಾಡಬೇಕಾಗಿತ್ತು? ಅದೂ ಇಷ್ಟು ಬೇಗ. ನ್ಯಾಯವನ್ನೇ ನಿಲ್ಲಿಸುವ ಮೊದಲು ಅವರು ತಪ್ಪು ಮಾಡುವುದನ್ನೇ ತಡೆಯಬೇಕು. ತಪ್ಪು ಮಾಡುವವರನ್ನು ತೊಡೆದು ಹಾಕಬೇಕು. ಇಲ್ಲ

ವಾದರೆ ಇದೆಲ್ಲಾ ಈ ಬರೆಯೋದು, ಕಾಗದ ಪತ್ರ, ತೀರ್ಮಾನ, ಸೆರೆಮನೆ ಎಲ್ಲಾ ಮತ್ತೆ ಆರಂಭವಾಗೋದೇ. ಮೊದಲು ಕೆಡಕನ್ನು ಹಾಳು ಮಾಡ ಬೇಕು. ಆ ಮೇಲೆ ಈ ಹಳೇ ಕಂತೆ ಎಲ್ಲಾ........

ಅವನು ತಲೆ ಅಲ್ಲಾಡಿಸುತ್ತ ಹೇಳಿದ : ಇದನ್ನೆಲ್ಲಾ ಹೇಗೆ ಮಾಡ ಬೇಕೂಂತ ನಾನೇ ಹೋಗಿ ಅವರಿಗೆ ಹೇಳುತ್ತೀನೆ. ........

ಎಂದವನೇ ತಟಕ್ಕನೆ ಪಕ್ಕಕ್ಕೆ ಸ್ಥಾಲಕ್ಷೀಯಾದ ಕಡೆ ತಿರುಗಿ ಡೂಮಾದ ಕಡೆ ಹೊರಟು ಹೋದ. ಆವರನ್ನು ಹಿಂಬಾಲಿಸಿದ ಜನರ ಗುಜು ಗುಜು, ಅವನನ್ನು ಅಣಕಿಸುವಂತೆ ಯಾರೋ ನಕ್ಕು, ಗಟ್ಟಿಯಾಗಿ ಬೊಗಳುವಂತೆ ಕೆಮ್ಮಲಾರಂಭಿಸಿದರು. ಇವನೇ 'ಎಲ್ಲವನ್ನೂ ಕೆಡವಿ ಬಿಡಿ' ಎಂದು ಹೇಳಿ ಕೊಟ್ಟನು. ಹಾಗೇ ಹೇಳಲು ತರ್ಕಕಾರಣವಲ್ಲ. ಹಾಗೆ ತೋಚಿತು; ಹೇಳಿದ.

ಈಗ ಬೇಸಿಗೆ. ಈ ವಿಷಯದ ಮೇಲೆ ಎಷ್ಟೋ ಜನ ಮಾತಾಡುತ್ತಾ ಇದಾರೆ. ನಿರ್ಧಾರವೂ ಬಲವಾಗಿದೆ ಈ ವಿಷಯದಲ್ಲಿ. ನಿನ್ನೆ ದಿನ ಸೆರೋಧ್ನಿಡಾಂನಲ್ಲಿ ಸಭೆಯಾದ ಮೇಲೆ ಒಬ್ಬ ಗಡ್ಡದ ಶಿಪಾಯಿ ಎದುರಿಗಿದ್ದ ಐವತ್ತು ಜನಕ್ಕೆ ಉತ್ಸಾಹದಿಂದ ತೊದಲುತ್ತಾ, ಮಾತನಾಡುತ್ತಾ ಹೇಳಿದ :

'ಇವರೆಲ್ಲಾ ಮಾತಾಡುತಾ ಇರೋದು ಏನು ? ಮತ್ತು ಹಳೆ ನಾಟ ಕಾನೇ ಆರಂಭಿಸುತಾ ಇದಾರೆ. ಯಾವುದು ನಮ್ಮನ್ನು ಇಷ್ಟು ದಿನ ಹಾಳು ಮಾಡಿತೋ, ಮತ್ತೆ ಅದನ್ನೇ ಕಟ್ಟುತಾ ಇದಾರೆ. ಅದೆಲ್ಲಾ ಆಗೋದಿಲ್ಲಾ ; ಅವರಿಗೆ ಸ್ಪಷ್ಟವಾಗಿ ಹೇಳಿಬಿಡೋಣ ; ನೋಡಿ. ತಿನ್ನಿರಿ, ಕುಡಿಯಿರಿ, ಹುಟ ಹೊಡಿಯಿರಿ ; ಬೇಕಾದ ಮಜಾ ಮಾಡಿ. ಆದರೆ ನಮ್ಮ ತಂಟೆಗೆ ಮಾತ್ರ ಬರಬೇಡಿ. ನಮ್ಮ ಪಾಡು ನಾವು ನೋಡಿಕೊಳ್ಳುತ್ತೀವೆ. ನಾವು-ಗೊತ್ತಿ ಲ್ಲವೇ-ನೀವು ಮಾಡಿರೊ ಪೂರಾ ತೊಳೆದುಬಿಡಬೇಕೆಂತ, ಹಳೆ ಕೊಳೆತ ಬೇರ ನ್ನೆಲ್ಲಾ ಬುಡಮಟ್ಟ ಕಿತ್ತುಹಾಕಬೇಕೆಂತ ನಿಶ್ಚಯ ಮಾಡಿಕೊಂಡಿದೇವೆ. ಖಂಡಿತವಾಗೂ ಆ ಕೆಲಸ ಮಾಡೇ ಮಾಡುತ್ತೀವೆ, ಅಲ್ಲವೇ ?'

ಗುಂಪು ಒಟ್ಟಿಗೆ ಉತ್ತರಕೊಟ್ಟಿತು. 'ಹೂ, ಅದೇ ಮಾಡೋದು.'

'ಸರಿ, ಅಲ್ಲಿಗದು ತೀರ್ಮಾನವಾದ ಹಾಗಾಯಿತು. ಅವರಿಗೀ ಮಾತು ಹೇಳಿಬಿಡೋದೇ. ನೋಡಿ, ನಮ್ಮ ತಂಟೆಗೆ ಬರಬೇಡಿ. ನಿಮ್ಮ ಖುಷಿ

ಬಂದದ್ದು ಮಾಡಿ. ನಮ್ಮ ಕೆಲಸದಲ್ಲಿ ಮಾತ್ರ ಕೈ ಹಾಕಬೇಡಿ!' ಅವರು ಹೇಳೋದು ಕೇಳಿದಿರೇನು, 'ಹೋಗಿ, ಮತ್ತೆ ಯುದ್ಧ ಮಾಡಿ ಎಂತಾರೆ. ಊಹು-ಮತ್ತೆ ಯುದ್ಧದ ಮಾತೇ ಎತ್ತುವಹಾಗಿಲ್ಲ. ಈಗಾಗಲೇ ಬೇಕಾದಷ್ಟು ಯುದ್ಧ ಮಾಡಿ, ಸತ್ತು ಸುಣ್ಣಾಗಿದೇವೆ, ಅಲ್ಲವೇ?'

ಒಕ್ಕೊರಲಿನಲ್ಲಿ ಗುಂಪು ಕೂಗಿತು. 'ನಿಜ'.

ಸಾಮಾಜಿಕ ಕ್ರಾಂತಿಯ ಭೇರಿಗಳಿಗೆ ಗಟ್ಟಿಯಾಗಿ ಮೊರೆಯುತ್ತಿವೆ. ಈಗದು ಜನರಿಂದಲೇ ಕೇಳಿಬರುತ್ತಿದೆ. ಹೋರಾಟದ ಕಿಡಿ, ಸ್ವಾತಂತ್ರ್ಯದ ಬಯಕೆ, ಜನರಲ್ಲಿ ಬಲಿಯುತ್ತಿದೆ. ಈ ಬಯಕೆ ಅವರ ಸಂಘಟನೆಗೆ ಸ್ಫೂರ್ತಿಯಾಗಬೇಕು; ಅವರ ರಾಜಕೀಯ ಕುರುಡುತನಕ್ಕೆ ಮದ್ದಾಗಬೇಕು. ನಾಯಕರಲ್ಲಿ ನಂಬಿಕೆ ಉಳಿದಿಲ್ಲ. ಮೊನ್ನೆ ಮೊನ್ನೆ ತಾನೇ ಸರ್ಕ್ಯಸ್‌ಮಾಡರ್ನೆಲ್ಲಿಯ ಒಬ್ಬ ಹುಡುಗ - ಮೋಟಾರ್ ಡ್ರೈವರ್ ಇರಬೇಕು - ವೋಜ್ಡ್ (ನಾಯಕ) ವೋಜ್ಜಿ (ಲಗಾಮು) ಗಳ ಮೇಲೆ ಒಳ್ಳೆ ಶ್ಲೇಷೆ ಮಾಡಿದ. ಸೇರಿದ ಇನ್ನೂರು ಜನ ಅವನ ಮಾತು ಕೇಳಿ ಚಪ್ಪಾಳೆ ತಟ್ಟಿ ಗಟ್ಟಿಯಾಗಿ ನಗುತ್ತಿದ್ದರು.

ದಿನ ದಿನಕ್ಕೆ ಬದುಕು ಬಿರುಸಾಗುತ್ತಿದೆ; ಕಾವು ಬಲವಾಗುತ್ತಿದೆ; ಯಾವ ಗಳಿಗೆಗೆ ಏನೋ ಎಂಬ ಬಿಗಿತ ಬಿಗಿಯಾಗುತ್ತಿದೆ - ಬಿಗಿಯಾಗುತ್ತಿದೆ.

## ಮಾಲಿ

ಫೆಬ್ರವರಿ ೧೯೧೭

ಮೋಟಾರು ಕಾರುಗಳು, ಇಬ್ಬದಿಯ ಮನೆಗಳ ಪಕ್ಕದಲ್ಲಿ ಓಡಾಡುವವರಿಗೆ ಕೆಸರು ಸಿಡಿಸುತ್ತಾ, ಹಾರನ್ನಿನ ಸದ್ದು ಮಾಡುತ್ತಾ ಚಿಮ್ಮುತ್ತಿವೆ. ಅವುಗಳ ತುಂಬಾ ಹಿಡಿಸಲಾರದಷ್ಟು ಸಿಪಾಯರು ತುಂಬಿದಾರೆ ಅವರ ಕೈಯ ಬಂದೂಕದ ಹೊಳಿಹೊಳೆವ ಮೊನೆಗಳು ಹೊರಹೊರಟು ಮೋಟಾರುಗಳು ಹುಚ್ಚಾಪಟ್ಟೆ ಓಡುವ ಮುಳ್ಳುಹಂದಿಗಳಂತೆ ಕಾಣುತ್ತವೆ. ಆಗಾಗ ರೈಫಲ್ ಸಿಡಿದ ಸದ್ದು ಕೇಳುತ್ತದೆ. ಕ್ರಾಂತಿ! ಹೊಸದಾಗಿ ಗಳಿಸಿದ ಸ್ವಾತಂತ್ರ್ಯದಲ್ಲಿ ದಿಕ್ಕು ತಪ್ಪಿ ಅಲೆಯುತ್ತಿದೆ ರಷ್ಯಾದ ಜನತೆ; ಆ ಸ್ವಾತಂತ್ರ್ಯ ಬಿಗಿಯಾಗಿ ಹಿಡಿಯಲು ಯತ್ನಿಸುತ್ತಿದೆ. ಅದು ಮಾತ್ರ ಕೈಯಿಂದ ಜಾರುತ್ತದೆ.

ಅಲೆಗ್ಸಾಂಡರ್ ಉದ್ಯಾನದಲ್ಲಿ ಮಾಲಿ ಒಂಟಿಯಾಗಿ ತನ್ನ ಕೆಲಸ ಮಾಡುವುದರಲ್ಲೇ ಮಗ್ನನಾಗಿದ್ದಾನೆ. ಮಾಲಿ ಐವತ್ತು ವರ್ಷದ ಬಲವಾದ ಆಳು. ಹೋದ ವರ್ಷದ ಒಣಗಿದ ಎಲೆಗಳನ್ನು ಹೊಸದಾಗಿ ಬಿದ್ದ ಮಂಜನ್ನು, ಹೂ ಮಡಿಗಳಿಂದ ಕಾಲುಹಾದಿಯಿಂದ ತೆಗೆದುಹಾಕುತ್ತಿದ್ದಾನೆ. ಸುತ್ತಲ ಗದ್ದಲದಲ್ಲಿ ಅವನಿಗೆ ಎಳ್ಳಷ್ಟು ಆಸಕ್ತಿಯಿಲ್ಲ. ವಾದ್ಯಗಳ ಧ್ವನಿ, ಕಿರಚಾಟ, ಬಂದೂಕದ ಸದ್ದು, ಹಾಡುಗಳು ಅವನ ಕಿವಿಗೆ ಬೀಳುವಂತೆಯೇ ಇಲ್ಲ. ಎದುರಿಗೆ ಹಾರುತ್ತಿರುವ ಕೆಂಪು ಧ್ವಜ ಕೂಡಾ ಅವನಿಗೆ ಕಾಣದು. ಯಾವಾಗಲಾದರೂ ತಲೆ ಎತ್ತಿ, ಸುತ್ತ ನುಗ್ಗುವ ಜನರನ್ನು, ಚಿಮ್ಮುವ ಮೋಟಾರುಗಳನ್ನು ನೋಡುತ್ತಾನೋ ಏನೋ ಎಂತ ಕಾದೆ. ಅವನು ಮಾತ್ರ ಬಗ್ಗಿಸಿದ ಬೆನ್ನನ್ನು ಮೇಲೆತ್ತಲಿಲ್ಲ, ಕಣ್ಣು ತಿರುಗಿಸಲಿಲ್ಲ.

**ಮಾರ್ಚ್ ೧೯೧೭**

ರಸ್ತೆಗಳಲ್ಲಿ, ಉದ್ಯಾನದ ಕಿರಿದಾರಿಗಳಲ್ಲಿ, ನೂರಾರು ಸಾವಿರಾರು ಜನ ಬೂದಿಬಣ್ಣ ಉಡುಪು ಧರಿಸಿದ ಸಿಪಾಯಿಗಳು ನಿಧಾನವಾಗಿ ನಾರೋದ್ನಿ ಡಾಂನ ಕಡೆ ಹೋಗುತ್ತಿದ್ದಾರೆ. ಕೆಲವರು ಮೆಷೀನ್‌ಗನ್ನುಗಳನ್ನು, ಕಬ್ಬಿಣದ ಹಂದಿಗಳಂತೆ ಹಿಂದೆ ಎಳೆದುಕೊಂಡು ಹೋಗುತ್ತಿದ್ದಾರೆ. ಬರ್ಸ್ನಿಯನ್ ಬಾಂನಿಂದ ಹಿಂದಿರು ಗಿದ ಅಸಂಖ್ಯಾತ ಮೆಷೀನ್ ಗನ್ ದಳಗಳಲ್ಲಿ ಇದೂ ಒಂದು. ಅವರಲ್ಲಿ ಹತ್ತು ಸಾವಿರಕ್ಕಿಂತ ಹೆಚ್ಚು ಜನ ಸೈನಿಕರಿದ್ದಾರಂತೆ. ಅವರಿಗೆ ತಾವೇನು ಮಾಡ ಬೇಕೆಂಬುದೇ ಗೊತ್ತಿಲ್ಲ. ಬೆಳಿಗ್ಗೆ ಬಂದಾಗಲಿಂದ ಹೀಗೇ ಇರಲು ಸ್ಥಳ ಹುಡುಕಿಕೊಂಡು ಊರೆಲ್ಲಾ ಸುತ್ತುತ್ತಿದ್ದಾರೆ. ಇವರನ್ನು ಕಂಡ ಕೂಡಲೇ ದಾರಿಗರು ಪಕ್ಕಕ್ಕೆ ಸರಿಯುತ್ತಾರೆ. ಯುದ್ಧವಾದಿ ಬೇಸತ್ತು, ಹಸಿದು ಭಯಂ ಕರವಾಗಿರುವ ಇವರನ್ನು ಕಂಡರೆ ಎಲ್ಲರಿಗೂ ಹೆದರಿಕೆ. ಇವರ ಪೈಕಿ ಕೆಲ ವರು ತಮ್ಮ ಬಂದೂಕ, ಚೀಲಗಳನ್ನು ಒಂದು ಹೂವಿನ ಮಡಿಯ ಮೇಲೆ ಒಗೆದು ಅದರ ಸುತ್ತು ತಾವು ಕೂತಿದ್ದರು.

ಅಷ್ಟು ಹೊತ್ತಿಗೆ ಮಾಲಿ ಕೈಯಲ್ಲಿ ಕಸಬರಿಗೆ ಹಿಡಿದು ನಿಧಾನವಾಗಿ ಅಲ್ಲಿಗೆ ಬಂದ. ಸಿಟ್ಟಿನಿಂದ ಇವರನ್ನು ನೋಡಿ ಹೇಳಿದ: ‘ ಇದೇನು ಸೈನ್ಯದ ಪಾಳೆಯ ಎಂದುಕೊಂಡಿದ್ದೀರೇನು ? ಇದು ಹೂವಿನ ಮಡಿ; ಹೂವು ಬೆಳೆಯೋ ಜಾಗ. ಹೂವೆಂದರೆ ಏನು ಗೊತ್ತಿದೆಯೇನು ? ಕಣ್ಣು ಕಾಣಿ

ಸೋಲ್ಲೇ? ಇಂಗಿ ಹೋಗಿದೆಯೇನು? ಇದು ಮಕ್ಕಳು ಆಡೋ ಸ್ಥಳ; ಎದ್ದು ಹೋಗಿ ಇಲ್ಲಿಂದ. ಕೇಳಿಸಿತ್ತೋ ಇಲ್ಲವೋ? ಹೂ, ಏಳಿ.'

ಆಯುಧಧಾರಿಗಳಾದ ಆ ಸೈನಿಕರು ಸದ್ದುಮಾಡದೆ ಕುರಿಗಳಂತೆ ಎದ್ದು ಹೋದರು.

ಜುಲೈ ೬, ೧೯೧೭

ಆಗ ತಾನೆ ರಣರಂಗದಿಂದ ಹಿಂದಿರುಗಿ ಬಂದ, ಉಕ್ಕಿನ ಟೋಪಿ ಧರಿಸಿದ ಸಿಪಾಯಿಗಳು, ಪೀಟರು ಮತ್ತು ಪಾಲ್ ಕೋಟೆಗಳನ್ನು ಮುತ್ತುತಿದಾರೆ. ಉದ್ಯಾನದ ಕಾಲು ಹಾದಿಯಲ್ಲಿ, ಹೆಗಲ ಮೇಲೆ ಬಂದೂಕಗಳನ್ನು ಜೋಲು ಹಾಕಿಕೊಂಡು, ಮೆಷಿನ್ ಗನ್ನುಗಳನ್ನು ಎಳೆದುಕೊಂಡು ನಿಧಾನವಾಗಿ ಹೋಗುತ್ತಿದಾರೆ. ಯಾವಾಗಲಾದರೊಮ್ಮೆ ಅವರ ಪೈಕಿ ಒಬ್ಬನು ಹಾದಿಯಲ್ಲಿ ಹೋಗುತ್ತಿದ್ದವನಿಗೆ:

ಬೇಗ ಬಾ; ಯುದ್ಧ ನೋಡುವಿಯಂತೆ' ಎನ್ನುತ್ತಾನೆ.

ನಗರವಾಸಿಗಳಿಗೆಲ್ಲಾ ಯುದ್ಧವನ್ನು ನೋಡುವ ಕುತೂಹಲ ಮಿತಿಮೀರಿ, ನರಿಗಳಂತೆ ನುಸುಳುತ್ತ, ಕತ್ತು ಉಳುಕುವ ಹಾಗೆ ಕತ್ತೆತ್ತಿ ಮುಂದೆ ನೋಡುತ್ತಾ, ಸದ್ದುಮಾಡದೆ ಸೈನಿಕರ ಹಿಂದೆ ನಡೆಯುತ್ತಿದಾರೆ.

ಅಲೆಕ್ಸಾಂಡರ್ ಉದ್ಯಾನದಲ್ಲಿ ದಾರಿಯುದ್ದಕ್ಕೂ ಎರಡು ಪಕ್ಕದಲ್ಲಿ ಹೂವುಗಳು ನಗುತ್ತಿವೆ; ಮಾಲಿ ಪಾತಿ ಸರಿಮಾಡುವುದರಲ್ಲಿ, ಹುಳುಕು ಎಲೆ ಬಾಡಿದ ಹೂವು ಕೀಳುವುದರಲ್ಲಿ ಮಗ್ನನಾಗಿದಾನೆ. ಚೊಕ್ಕಟವಾದ ಉಡುಪು; ಕೈಯಲ್ಲೊಂದು ಸಲಿಕೆ. ಹೋಗ ಹೋಗುತ್ತಾ ಸಿಪಾಯಿಗಳನ್ನೂ, ಅವರನ್ನೂ ನೋಡುತ್ತಾ ನಿಂತವರನ್ನು ಬಾಯಿಗೆ ಬಂದಂತೆ ಬಯ್ಯುತ್ತಾ ಇದಾನೆ.

'ಹೋಗುತಾ ಇದಾನೆ ಎಲ್ಲಿಗೋ? ಇವನು ತುಳಿಲೀ ಎಂತಲೇ ಹುಲ್ಲು ಬೆಳೆಸಿರೋದು? ಬೇರೆ ಕಡೆ ಓಡಾಡಲಿಕ್ಕೆ ಜಾಗವೇ ಇಲ್ಲವೇನೋ?'

ಬಗಲಲ್ಲಿ ರೈಫಲ್ ಸಿಗಿಸಿಕೊಂಡು, ಸಿಪಾಯಿಯ ಉಡುಪು ಧರಿಸಿದ ಉದ್ದಗಡ್ಡಬೆಳೆದ ರೈತನೊಬ್ಬ ಹೇಳಿದ:

'ಏ ಮುದುಕಾ! ನಿನ್ನಕೆಲಸ ನೀ ನೋಡಿಕೋ. ಹೆಚ್ಚಿಗೆ ಮಾತಾಡಿದರೆ ಸುಟ್ಟುಬಿಟ್ಟೇನು.'

'ಎಲ್ಲಿ ಸುಡು ನೋಡೋಣ! ಭಾರಿ ಸುಡೋನು ಕೇಳಲಿಕ್ಕಿಲ್ಲ .... '

'ಯುದ್ಧವಾಗುತಾ ಇರೋದು ಗೊತ್ತಿಲ್ಲೇನು ನಿನಗೆ? ಇಲ್ಲೇ ಯುದ್ಧವಾಗುತ್ತೆ.'

'ಹಾಗೇನು? ಆದರೆ ಹೋಗಿ ಸಾಯಿ. ನಿನ್ನ ಕೆಲಸ ನಿನಗೆ, ನನ್ನದು ನನಗೆ' ಎಂದವನೇ ಸೊಂಟದಿಂದ ಮಾಲಿ ಗಡಗತ್ತರಿಯನ್ನು ತೆಗೆದುಕೊಳ್ಳುತ್ತಾ ಗುಣುಗುಟ್ಟಿದ 'ತುಳಿಬೇಡ ಎಂದರೆ ಇಲ್ಲೇ ಬಂದಿದಾನೆ ತುಳಿಯೋದಕ್ಕೆ .... '

'ಈಗ ಯುದ್ಧ'

'ಯುದ್ಧವಾದರೆ ನನಗೇನು? ಯುದ್ಧ ಮಾಡೋರಿಗೆ ಯುದ್ಧ; ನನ್ನ ಕೆಲಸ ನನಗೆ. ಇಷ್ಟೆಲ್ಲ ಮಾತಾಡುತೀಯ. ಬಂದೂಕ ಸ್ವಲ್ಪ ಚೆನ್ನಾಗಿಟ್ಟುಕೋ ಬಾರದೆ? ನೋಡು ಎಲ್ಲ ತುಕ್ಕು ಹಿಡಿದುಹೋಗಿದೆ. ಥೂ .... '

ಇಷ್ಟರಲ್ಲಿ ವ್ಹಿಸಲ್ಲಿನ ಸದ್ದು ಕೇಳಿತು. ಸಿಪಾಯಿ ಹೊತ್ತಿಸಲೆಂದು ತೆಗೆದ ಸಿಗರೇಟನ್ನು ಹಾಗೇ ಜೋಬಿನಲ್ಲಿ ಹಾಕಿಕೊಂಡು ಮರಗಳ ಮಧ್ಯೆ ಓಡಿಹೋದ.

ಆವನ ಕಡೆ ತಿರಸ್ಕಾರದಿಂದ ಉಗುಳಿ, ಮಾಲಿ ಸಿಟ್ಟಾಗಿ ಕೂಗಿದ:

'ಥೂ ಹಾಳಾದೋನೆ! ಹುಲ್ಲು ತುಳುಕೊಂಡೇ ಹೋಗ್ತಿಯಾ? ಬೇರೆ ರಸ್ತೇನೇ ಇಲ್ಲವೇ? ನಿನ್ನ ಕಾಲಿಗಷ್ಟು ಜೆಂಕಿ ಬೀಳ!'

**ಹೇಮಂತಋತು ೧೯೧೭**

ಮಾಲಿ ಹೆಗಲ ಮೇಲೆ ಒಂದು ಏಣಿ, ಕೈಯಲ್ಲಿ ಗಿಡ್ಡಗತ್ತರಿ ಹಿಡಿದು ಹೊರಟಿದ್ದ. ಆಗಾಗ ನಿಂತು ಹಾದಿಯ ಪಕ್ಕದ ಗಿಡಗಳ ಒಣಗಿದ ಕೊಂಬೆಗಳನ್ನು ಕತ್ತರಿಸಿ ಹಾಕುತ್ತಿದ್ದ. ಮೊದಲಿಗಿಂತ ಈಗ ಕೃಶವಾಗಿದಾನೆ- ಬಾಡಿಹೋಗಿದಾನೆ; ಬಟ್ಟೆಗಳೆಲ್ಲ ದೊಗಲೆಯಾಗಿ ಜೋತುಬಿದ್ದಿವೆ, ಗಳಕ್ಕೆ ಅಂಗಿ ತೊಡಿಸಿದ ಹಾಗೆ. ಕತ್ತರಿಯನ್ನು ಆಡಿಸಿದೊಡನೆ ಒಣಟೊಂಗೆ, ಕತ್ತರಿ ತಾಕಿ ಸಿಟ್ಟಾದಂತೆ ಫಟ್ ಎಂದು ಮುರಿಯುತ್ತದೆ.

ಭೂಕಂಪವಾಗಲಿ, ಬೆಂಕಿಯ ಮಳೆಯೇ ಬಿದ್ದರೂ ಇವನು ಮಾತ್ರ ತನ್ನ ಕೆಲಸ ಬಿಡುವುದಿಲ್ಲ ಎನಿಸಿತು ನನಗೆ ಇವನನ್ನು ನೋಡಿ. ಇವನನ್ನು ಸ್ವರ್ಗಕ್ಕೆ ಒಯ್ದರೆ, ಅಲ್ಲಿಗೋಯ್ಯುವ ದೇವತೆಗಳ ಕೈಯಕಹಳೆ ಹೊಳೆ ಹೊಳೆ ಯುತ್ತಾ ಇರದಿದ್ದರೆ ಇವನೇನೋ 'ನಾಚಿಕೆಯಾಗುವದಿಲ್ಲವೆ? ಕಹಳೆ ಸ್ವಲ್ಪ ಉಜ್ಜಲಿಕ್ಕೇನು? ಎಲ್ಲ ಕಿಲುಬು ಗಟ್ಟಿಹೋಗಿದೆ' ಎಂದು ಅವರನ್ನು ದಬಾ ಯಿಸುವವನೇ! ಆ ಸಿಪಾಯನ್ನು ಅನ್ನಲಿಲ್ಲವೇ ಹಾಗೆ! ದೇವತೆಗಳಾದರೇನು ದೊಡ್ಡವರೇನು?

## ೭. ನಮಗಿಂತ ಕ್ರೂರಿ

೧೯೪೨ನೆ ಜುಲೈ ೧೪ರ 'ನೊವೋಜೇವ್ರೆಮ್ಯಾ'ದ ಹರಿದ ತುಂಡಿನಲ್ಲಿ ನಾನಿವನ್ನು ಓದಿದೆ:

'ಪೆರಿಸ್ಕೋಪನ್ನು ಎತ್ತಿನೋಡಿದೆ. ಎದುರಿಗೆ ಗಾಳಿಯಲ್ಲಿ ತೂಗುವ ಪಚ್ಚೆಪೈರು, ಅದರಲ್ಲಿ ಚುಕ್ಕೆಯಿಟ್ಟಂತೆ ಹೊಳೆವ ನೀಲಿಬಣ್ಣದ ಹೂಗಳು ಕಾಣಿಸುತ್ತಿವೆ. ಸ್ವಲ್ಪದೂರದಲ್ಲಿ ಎರಡು ಪಕ್ಕದಲ್ಲೂ ಮರಗಳು ಬೆಳೆದ ರಸ್ತೆ. ರಸ್ತೆಯ ಆ ಪಕ್ಕದ ಆಚೆ ಕೆಮ್ಮಣ್ಣಿನ ದಿಣ್ಣೆ. ಅದೇ ಶತ್ರುವಿನ ಟ್ರೆಂಚ್. ಅದಕ್ಕೂ ನಮಗೂ ಇನ್ನೂರೇ ಗಜ ದೂರ. ಅದರಲ್ಲಿ ಜರ್ಮನರು ಅವಿತಿದ್ದಾರೆ.

'ಯಾವಾಗಲಾದರೂ ಜರ್ಮನ್ ಸೈನಿಕ ಟ್ರೆಂಚಿನಿಂದ ತಲೆ ಎತ್ತಿ ನೋಡುತ್ತಾನೇನು?' ಎಂತ ನಾನು ಪಕ್ಕದಲ್ಲಿದ್ದವನನ್ನು ಕೇಳಿದೆ. ಆಗಾಗ ಜರ್ಮನರ ತಲೆ ಕಾಣಿಸುತ್ತದೆ. ಅದಕ್ಕೇ ಕಾಯುತ್ತಿರುತ್ತಾರೆ ನಮ್ಮವರು. ಕಂಡಕೂಡಲೆ ಬಂದೂಕ 'ಪರಾ' ಎನ್ನುತ್ತದೆ; ಮೇಲೆದ್ದ ತಲೆ ಅಷ್ಟು ದೂರ ಹೋಗುತ್ತದೆ. ಕೆಲವರಂತೂ ಈ ಗುರಿ ಹೊಡೆವ ಕೆಲಸದಲ್ಲಿ ಪಂಡಿತರಾಗಿ ದ್ದಾರೆ. ಅಂಥವರ ಪೈಕಿ ಒಬ್ಬನನ್ನು ನನಗೆ ತೋರಿಸಿದರು. ಒಣಗಿ ಕಟ್ಟಿಗೆ ಯಾದ ಕುರೂಪಿ. ಮೂರು ಹೊತ್ತೂ ನಿದ್ದೆಗಣ್ಣು ಜಾಗರಿಕೆ ಇವನಿಗೆ. ಅದ ಕ್ಕಾಗೇ ತಯಾರಿಸಿದ ಉಕ್ಕಿನ ಡಾಲಿನ ಹಿಂದೆ, ಅದರಲ್ಲಿರುವ ಖಂಡಿಯೊಳಗೆ ನೋಡುತ್ತಾ ಕೂತಿರುತ್ತಾನೆ. ಹಗಲೂ ರಾತ್ರಿ ಇದೇ ಕೆಲಸ ಅವನಿಗೆ. ಯಾರೂ ಅವನಿಗೆ ಈ ಕೆಲಸ ಕೊಟ್ಟಿಲ್ಲ, ಮಾಡುವಂತೆ ಯಾರೂ ಒತ್ತಾಯ

ಮಾಡುವುದಿಲ್ಲ; ಅವನಿಗೆ ಇದೊಂದು 'ಖಯಾಲಿ.' ಜರ್ಮನರು ನೀರು ತರಲು ಹೋಗುವ ಹಳ್ಳ ಕಾಣುವುದು ಆ ರಂಧ್ರವೊಂದರಿಂದಲೇ. ಅವರೂ ನೆಲದ ಮೇಲೆ ತೆವಳಿಕೊಂಡೇ ಹೋಗುತ್ತಾರೆ; ಆದರೂ ಮೈಮುರಿಯಲು ಸ್ವಲ್ಪ ಮೇಲೆದ್ದರೋ, ರಷ್ಯನ್ ಟ್ರೆಂಚಿನಿಂದ ಬಂದೂಕ ಸಿಡಿದ ಸದ್ದು ಕೇಳಿಸುತ್ತದೆ. ಅಲ್ಲಿಗೆ ಅವನ ಕಥೆ ಮುಗಿಯಿತು. ರಂಧ್ರದಲ್ಲಿ ನೋಡುತ್ತಾ ಕೂತವನು, ರೈಫಲಿನ ಹಿಡಿಯ ಮೇಲೆ ಇನ್ನೊಂದು ಗೆರೆ ಎಳೆಯುತ್ತಾನೆ.

ಒಬ್ಬ ಅಧಿಕಾರಿಗಳು ಹೇಳಿದರು: 'ಸೆರೆಹಿಡಿದ ಜರ್ಮನ್ ಸೈನಿಕರು ಆ ದಾರಿಯನ್ನು 'ಗೋರಿಯ ದಾರಿ' ಎನ್ನುತ್ತಾರೆ. ಈಗ ಒಂದೆರಡು ವಾರದಲ್ಲೇ ಕಡಿಮೆ ಎಂದರೆ ನಲವತ್ತು ಐವತ್ತು ಜನ ಸತ್ತಿದ್ದಾರೆ ಅಲ್ಲಿ. ಎಲ್ಲ ಆ ಮುಹರಾಯನ ಕೆಲಸ' ಎಂತ.

'ಆ ಮುಹರಾಯ' ನಮ್ಮ ಮಾತು ತನಗೇನೂ ಸಂಬಂಧವಿಲ್ಲದವನಂತೆ ಕೇಳಿಸುತ್ತಾ ಕೂತಿದ್ದ. ನಿದ್ದೆಯಿಲ್ಲದೆ ಭಾರವಾದ, ಕೆಂಬಣ್ಣ ಕಣ್ಣುಗಳು ರಂಧ್ರದಾಚೆ ನೋಡುತ್ತಿದ್ದವು ....

* * * *

ಈ 'ನರ ಯಂತ್ರವನ್ನು ನೋಡಿದಾಗ ನನಗೆ ಇವನ ಕುಲಕ್ಕೇ ಸೇರಿದ ಇನ್ನೊಬ್ಬನ ಜ್ಞಾಪಕ ಬಂತು. ಅವನನ್ನು ನೋಡಿದ್ದು ರೈಲಿನಲ್ಲಿ.

ಡಬ್ಬಿಯಲ್ಲಿ ನಾವು ಆರು ಜನ ಇದ್ದೆವು. ಅಲ್ಲಿಗೇ ತುಂಬಿತ್ತು ಅದು. ವಾಲ್ಕಾವ್ ನಿಲ್ದಾಣದಲ್ಲಿ ಇನ್ನೊಬ್ಬ ಸಿಪಾಯಿ ಒಳಗೆ ಬಂದ. ಅಗಲವಾದ ಎದೆ, ಭದ್ರವಾದ ಮೈಕಟ್ಟಿನ ಆಳು. ಬೆನ್ನಿನ ಮೇಲೆ ಬೆನ್ನು ಬಗ್ಗುವಷ್ಟು ಭಾರವಾದ ಹೊರೆ. ಹಾಗೇ ಒಳಗೆ ತೆವಳಿದ. ನನ್ನ ಪಕ್ಕದಲ್ಲಿ ಕೂತವನ ತೊಡೆಯ ಮೇಲೆ ತನ್ನ ಗಂಟು ಹೇರಿ, ಸೆಟ್ಟಗೆ ನಿಂತ ಎದೆಯ ಮೇಲಿನ ಸೆಂಟ್ ಜಾರ್ಜ್ ಶಿಲುಬೆಯನ್ನು ಸರಿಮಾಡಿಕೊಂಡು ನಮ್ಮನ್ನು ದುರುದುರು ನೋಡಿದ.

'ಆಗಲೇ ಆರು ಜನ ಇದೀರಾ. ಪರವಾ ಇಲ್ಲ. ಒಬ್ಬನಿಗೆಷ್ಟು ಜಾಗ ಬೇಕು. ಸ್ವಲ್ಪ ಸರಿದುಕೋತೀರಾ?' ಎಂದ.

ನನ್ನ ಪಕ್ಕದಲ್ಲಿದ್ದ ಸುಂಕದ ಕಟ್ಟೆ ಅಧಿಕಾರಿ ಸಿಟ್ಟಾಗಿ ಹೇಳಿದ 'ಎಲ್ಲಿ ಸರಿದುಕೋ ಬೇಕು?'

'ನನ್ನಂಥ ವೀರನಿಗೂ ಸ್ಥಳವಿಲ್ಲವೇ! ಎಲ್ಲಿ ಹೋದರೂ ಅವನಿಗೆ ಜಾಗಮಾಡಿಕೊಡಲೇ ಬೇಕು' ಎಂದು ಸುಂಕದಕಟ್ಟೆ ಅಧಿಕಾರಿಯ ಮೊಣಕಾಲು ಪಕ್ಕಕ್ಕೆ ಒತ್ತಿ ನಮ್ಮಿಬ್ಬರ ನಡುವೆ ಲಕ್ಷಣವಾಗಿ ಒತ್ತಿ ಕುಳಿತ. 'ಈಗ ಸರಿಹೋಯಿತು!'

ಲಕ್ಷಣವಾಗಿ ಕ್ಷೌರಮಾಡಿಕೊಂಡ ಮುಖ. ನೆತ್ತಿಯ ಚರ್ಮ ಕಾಣಿಸುವಷ್ಟು ಸಣ್ಣದಾಗಿ ಕೂದಲು ಕತ್ತರಿಸಿಕೊಂಡಿದ್ದ. ಒಂದೊಂದಾಗಿ ಕೂದಲು ಕಿತ್ತುಹಾಕಿದಂತೆ ಬೋಳು ಬೋಳಾದ ಹುಬ್ಬು. ಅದರ ಕೆಳಗೆ ಮೀನಿನ ಕಣ್ಣಿನಂತೆ, ಗುಂಡಗೆ ಉಬ್ಬಿಕೊಂಡ ಸಣ್ಣ ಕಣ್ಣುಗಳು ಮಿನುಗುತ್ತಿದ್ದವು.

ರೈಲು ಒಂದು ಸಲ ಕುಲುಕಿ ತೂಗಿತು; ನನ್ನ ಎದುರಿಗೆ ಅರ್ಧನಿದ್ದೆ ಮಾಡುತ್ತಿದ್ದವರು ಏನೋ ಗೊಣಗುಟ್ಟಿದರು. ಮತ್ತೆ ಮೌನ. ನಾನೂ ಕಣ್ಣುಮುಚ್ಚಿದೆ. ಸಿಪಾಯಿ ಧೈರ್ಯವಾಗಿ ಸಿಗರೇಟು ಹಚ್ಚಿ, ಎದುರಿಗಿದ್ದ ಕೆಂಪು ಮೀಸೆಯುವನ ಕೈಲಿ ಮಾತನಾಡಲಾರಂಭಿಸಿದ. ಅವರ ಮಾತುಕಥೆಯನ್ನು ನಾನು ಕನಸಿನಲ್ಲಿಂಬಂತೆ ಕೇಳುತ್ತಾ ಇದ್ದೆ.

'ಒಳ್ಳೆ ತಮಾಷೆಯಾದ, ಅದ್ಭುತ ಯುದ್ಧ ಇದು' ಎಂದ ಕೆಂಪುಮೀಸೆಯವನು. ಸಿಪಾಯಿ ನೆಲದ ಮೇಲೆ ಉಗುಳಿ ಹೇಳಿದ.

'ಅದರಲ್ಲಿ ಅನುಮಾನವೇ ಇಲ್ಲ.'

'ಎಲ್ಲರಿಗೂ ಧೈರ್ಯಕೊಡುತ್ತೆ.'

'ಅಷ್ಟೇ ಅಲ್ಲ ಬೇಕಾದ ಹಾಗೆ ಮಾಡಲು ಸ್ವತಂತ್ರ್ಯ ಕೂಡಾ.'

'ನಿಜ. ಅನುಮಾನವೇ ಇಲ್ಲ. ಆದರೂ ಎಷ್ಟು ಜನ ಸಾಯುತಾ ಇದಾರೆ ........'

'ಸರಿ. ಯಾವತ್ತಿದ್ದರೂ ಒಂದು ದಿನ ಸಾಯೋದೇ........'

ತನ್ನ ಮಾತಿಗೆ ಈ ಪೀಠಿಕೆ ಹಾಕಿ, ದಪ್ಪ ಧ್ವನಿಯಲ್ಲಿ ಸಿಪಾಯಿ ತನ್ನ ಕಥೆ ಆರಂಭಿಸಿದ. ರೈಲು 'ಗಡಗಡ' ಎನ್ನುತ್ತಾ ಅವನ ಧ್ವನಿಗೆ ಶ್ರುತಿ ಕೂಡಿಸಿತು.

'ಈಗ ನನ್ನ ವಿಷಯವನ್ನೇ ತೆಗೆದುಕೊಳ್ಳಿ. ಯುದ್ಧಕ್ಕೆ ಮೊದಲು

ನಾನೂ ನಿಮ್ಮ ಹಾಗೇ ಒಬ್ಬನಾಗಿದೆ. ಐದು ವರ್ಷ ದೋಣಿ ನಡಸುತ್ತಾ ಇದ್ದೆ; ಈಗ ಒಂದೆರಡು ಪರೀಕ್ಷೆ ಆದಕೂಡಲೇ ಕಾರ್ಪೋರಲ್ ಆಗುತ್ತೇನೆ. ಆ ಶಾಲೆಗೇ ನಾನೀಗ ಹೊರಟಿರುವುದು. ಗಾಯಗೊಂಡು ಆಸ್ಪತ್ರೆಯಲ್ಲಿ ದ್ದಾಗ, ಅಭ್ಯಾಸ ಮಾಡಿದೆ. ಶಿಸ್ತು ನಾ ಬಲ್ಲೆ ಎಂಬುದು ಅವರಿಗೆ ಗೊತ್ತಿದೆ. ಗುರಿ ತಪ್ಪದ ಹಾಗೆ ಗುಂಡು ಹೊಡೆಯಬಲ್ಲೆ. ಒಳ್ಳೆ ಚುರುಕಾದ ಕಣ್ಣು ಕೊಟ್ಟಿದಾನೆ ದೇವರು. ಅದೊಂದೇ ಅವನು ನನಗೆ ಮಾಡಿದ ಉಪಕಾರ. ನಾನು ಬಂದೂಕು ಹೊಡೆಯುತ್ತಿದ್ದರೆ ಅಧಿಕಾರಿಗಳೆಲ್ಲಾ ಬಂದು ನಿಂತು ನೋಡುತ್ತಾ ಇದ್ದರು. ಮೊದಲ ಸಲ, ನನಗೆ ಗಾಯವಾಗುವ ಮೊದಲು ಇಪ್ಪತ್ತೊಂಭತ್ತು ಜನ ಜರ್ಮನರನ್ನು ಯಮಪುರಿಗಟ್ಟಿದ್ದೆ ಗೊತ್ತೇನು? ಸುಳ್ಳು ಹೇಳುತಾ ಇಲ್ಲ. ಸರೀಯಾಗಿ ಇಪ್ಪತ್ತೊಂಭತ್ತು–ಊಹು ನಾನು ಎಣಿಸಲಿಲ್ಲ. ಎಣಿಸುತ್ತ ಕೂತರೆ ಗುರಿ ಸಿಗುತ್ತೇನು? ನಾನು ಒಂದು ವರ್ಷದಲ್ಲಿ ಎಷ್ಟು ಜನ ಜರ್ಮನರನ್ನು ಕೊಂದೆನೋ, ಅಷ್ಟು ಕಾಡುಕೋಳಿ ಕೂಡಾ ಹೊಡೆ ಯಲು ಯಾರಿಗೂ ಸಾಧ್ಯವಿಲ್ಲ. ಮನುಷ್ಯ ಕಾಡುಕೋಳಿ ಜಾತಿಗಿಂತ ದೊಡ್ಡ ವನು ನಿಜ. ಆದರೆ ಪೂರಾ ಮನುಷ್ಯ ಕಾಣಿಸುವುದೇ ಇಲ್ಲ; ಬರೀ ಬುರುಡೆ ಮಾತ್ರ ಕಾಣಿಸುತ್ತೆ. ಅದೂ ಟ್ರೆಂಚಿನಿಂದ ಮೇಲೆತ್ತಿದಾಗ ಮಾತ್ರ. ಅಷ್ಟ ರಲ್ಲೇ ಹೊಡೆಯಬೇಕು. ನನ್ನ ಟ್ರೆಂಚಿನಲ್ಲಿ ಕೂತು ನಾನು ಕಾವಲು ಕಾಯು ತ್ತಿದ್ದೆ. ಎದುರಿಗೆ ನೂರು ಗಜ ಅಗಲದ ಜೌಗುಪ್ರದೇಶ. ಅದರ ಹಿಂದೆ ಜರ್ಮನರಿದ್ದರು. ಅವರಿಗಂತೂ ಅದು ಖಂಡಿತ ಸುಖವಾಗಲಿಲ್ಲ. ಒಂದೇ ದಿನ ನಾನು ಎಂಟು ಜನರನ್ನು ಉಡಾಯಿಸಿಬಿಟ್ಟೆ!' ಎಂದು ನಕ್ಕ.

ವಿಚಿತ್ರವಾದ ನಗು - ಕರ್‌ಗೀಜಿನ ಜನ ನಗುತ್ತಾರಲ್ಲಾ ಹಾಗೆ ನಕ್ಕು ದೀರ್ಘವಾಗಿ ನಿಟ್ಟುಸಿರಿಟ್ಟ.

'ಈ ಆಟದಲ್ಲಿ ನನ್ನ ಕೈಚಳಕ ಕಂಡು ಎಷ್ಟೋ ಜನಕ್ಕೆ ಆಶ್ಚರ್ಯ ವಾಗುತ್ತಾ ಇತ್ತು.... ...'

ಕಣ್ಣುಬಿಟ್ಟು ನಾನು ಅವನತ್ತ ನೋಡಿದೆ. ಹೇಮಂತದ ಮಂಕಾದ ಬೆಳಗಿನ ಬೆಳಕಿನಲ್ಲಿ ಒಂದೂ ಕೂದಲಿಲ್ಲದ ಅವನ ಗುಂಡಾದ ಮುಖ ಎಣ್ಣೆ ಹಚ್ಚಿಕೊಂಡ ಹಾಗೆ ಮಿನುಗುತ್ತಿತ್ತು. ತನ್ನ ಪ್ರತಾಪದಿಂದ ಅವನಿಗೇ ಸಂತೋಷ

ವಾಗಿತ್ತು. ಎಷ್ಟು ಹೆಮ್ಮೆ! ಅವನ ಮಿಾಸುಗಣ್ಣು ಸಂತೋಷದಿಂದ ಹೊಳೆ ಯುತ್ತಿದ್ದವು.

* * * *

ಆ ಸಿಪಾಯಿ ಕಥೆಯನ್ನು ನಾನು ನನಗೆ ಪರಿಚಯವಿದ್ದ ಪಾದ್ರಿಯೊಬ್ಬ ನಿಗೆ ಹೇಳಿದೆ ;

'ಅದರಲ್ಲಿ ಸಿಟ್ಟಾಗುವಂಥದೇನಿದೆ ? ನಾವು ವಿಧಿಯ ಆಳುಗಳು, ನಾವು ಮಾಡುವುದು ನಮ್ಮ ಕೆಲಸವಲ್ಲ. ಮಾಡುವುದನ್ನು ಮಾಡಲೇಬೇಕು ಎಂದು ಕೊಂಡಮೇಲೆ, ಅದನ್ನು ನಂಬಿದಮೇಲೆ ನಮ್ಮ ಕೆಲಸವನ್ನೂ, ದಿನದ ಕರ್ತವ್ಯ ವನ್ನೂ ನಾವು ಮಾಡಲೇಬೇಕು ; ಆದಷ್ಟು ಚೆನ್ನಾಗಿ ಮಾಡಬೇಕು. ದೇವರು ಮಾನವನಿಗೆ ಈ ಯುದ್ಧದ ಭಯಂಕರ ಶಿಕ್ಷೆ ವಿಧಿಸುವುದಾದರೆ, ಅದು ನಿಯಮ ವೆಂದು ನಾವೂ ತಲೆ ಬಾಗಲೇಬೇಕು. ಇದೇ 'ಅವನ ಶಾಸನವಾದರೆ'—ಪಾದ್ರಿ ಭುಜ ಕುಣಿಸಿ ಹೇಳಿದ—'ದೇವರು ನಮಗಿಂತಲೂ ಕ್ರೂರಿಯೇನಲ್ಲ, ಎಂತಲೇ ನಾವು 'ಆತನ' ಇಚ್ಛೆಯಂತೆ ಮಾಡೋಣ ; ಆದಷ್ಟು ಚೆನ್ನಾಗಿ........'

ಪಾದ್ರಿ ಒಣಗಿ ಕಟ್ಟಿಗೆಯಾದ ಮನುಷ್ಯ; ಅವನ ಶುಭ್ರವಾದ ಹಸು ಗೂಸಿನಂಥ ಕಣ್ಣುಗಳು ದುಃಖದಿಂದ ನನ್ನ ಕಡೆ ನೋಡಿದವು. ಆಮೇಲೆ ಅವನು ನೆಲದ ಕಡೆ ನೋಡುತ್ತಾ ಮೆದುವಾದ ಧ್ವನಿಯಲ್ಲಿ ಉಸುರಿದ:

"ಅಷ್ಟೇ ಅಲ್ಲ ; ದೇವರು ನಮಗಿಂತ ಕ್ರೂರಿ .... "

## ೮. ಲಿಯೋ ಟಾಲ್‌ಸ್ಟಾಯ್

ಬೇಸಿಗೆಯ ಒಂದು ದಿನ ರಸ್ತೆಯಲ್ಲಿ ಹೋಗುತ್ತಿದ್ದಾಗ ಟಾಲ್‌ಸ್ಟಾಯ್ ಸಿಕ್ಕಿದರು. ಅವರು ತಮ್ಮ ಪುಟ್ಟ ತಾರ್ತರ್ ಕುದುರೆಯ ಮೇಲೆ ಕೂತು ಲಿವೇಡಿಯದ ಕಡೆ ಹೋಗುತ್ತಿದ್ದರು. ತಲೆಯ ಮೇಲೆ ನಾಯಿಕೊಡೆಯಂಥ ದೊಂದು ಬಿಳಿ ಫೆಲ್ಟ್ ಹ್ಯಾಟು, ಒಳ್ಳೆ ಜಿರಲೆ ಹಾಗೆ ಕಾಣುತ್ತಿದ್ದರು ಟಾಲ್‌ಸ್ಟಾಯ್.

ಕುದುರೆಯ ಲಗಾಮು ಹಿಡಿದು ಜಗ್ಗಿ ನಿಲ್ಲಿಸಿ ನನ್ನನ್ನು ಕೂಗಿದರು: ಅವರು ಕುದುರೆಯ ಮೇಲೆ, ನಾನು ಅವರ ಪಕ್ಕದಲ್ಲಿ; ಮಾತಾಡುತ್ತಾ

ಹೊರಟೆವು. ಮಾತಿನಲ್ಲಿ ನಾನು ಅವರಿಗೆ ವಿ. ಜಿ. ಕಾರೊಲೆಂಕೋನಿಂದ ಕಾಗದ ಬಂದ ವಿಷಯ ಹೇಳಿದೆ. ಅದಕ್ಕವರು ಸಿಟ್ಟಿನಿಂದ ತಮ್ಮ ಗಡ್ಡ ಅಲ್ಲಾಡಿಸುತ್ತಾ,

'ಅವನಿಗೆ ದೇವರಲ್ಲಿ ನಂಬಿಕೆ ಇದೆಯೇನು?' ಎಂದು ಕೇಳಿದರು.

'ಏನೋ ನನಗೆ ಗೊತ್ತಿಲ್ಲ.'

'ಅಂದರೆ ಅವನ ಬಗ್ಗೆ ಮುಖ್ಯ ವಿಚಾರವೇ ನಿನಗೆ ಗೊತ್ತಿಲ್ಲ ಎಂದ ಹಾಗಾಯಿತು. ಅವನು ಶುದ್ಧ ಆಸ್ತಿಕ. ಆದರೆ ನಾಸ್ತಿಕರಿಂದಿರು ಅದನ್ನು ಒಪ್ಪಿಕೊಳ್ಳಲು ಹೆದರುತ್ತಾನೆ.'

ಸಿಡಿಗುಟ್ಟುತ್ತಾ, ನನ್ನ ಕಡೆ ಅರೆತೆರೆದ ಕಣ್ಣಿನಲ್ಲಿ ಸಿಟ್ಟಿನಿಂದ ನೋಡುತ್ತಾ ಹೇಳಿದರು. ಅವರಿಗೆ ಈಗ ನನ್ನ ಕೈಲಿ ಮಾತಾಡುವ ಮನಸ್ಸಿಲ್ಲವೆಂಬುದು ಸ್ಪಷ್ಟವಾಗಿತ್ತು; ಆದರೂ ನಾನು ಹೋಗುವ ಸೂಚನೆ ತೋರಿಸಿದ ಕೂಡಲೆ, ತಡೆದರು.

'ಎಲ್ಲಿಗೆ ಹೊರಟೆ? ಕುದುರೆ ಜೋರಾಗಿ ಹೋಗುತ್ತಾ ಇದೆಯೇನು?' ಎಂದು ಕೇಳಿದರು.

ಅಲ್ಲಿಂದ ಮತ್ತೆ ತಮ್ಮ ಗೊಣಗಾಟ ಆರಂಭಿಸಿದರು.

'ನಿಮ್ಮ ಆಂಡ್ರಿವ್‌ಗೂ ಅಷ್ಟೆ: ದೇವರಲ್ಲಿ ನಂಬಿಕೆ ಇದೆ; ನಾಸ್ತಿಕರಿದಿರು ಹಾಗೆಂದು ಒಪ್ಪಿಕೊಳ್ಳಲು ಹೆದರುತ್ತಾನೆ. ದೇವರೇ ಅವನಿಗೆ ತನ್ನನ್ನು ಕಂಡರೆ ಹೆದರುವ ಹಾಗೆ ಮಾಡಿದಾನೆ.'

ಇಷ್ಟುಹೊತ್ತಿಗೆ ಗ್ರಾಂಡ್ ಡ್ಯೂಕ್ ರೇಮನಾಫನ ತೋಟದ ಅಂಚಿಗೆ ಬಂದಿದ್ದೆವು. ರಸ್ತೆಯಲ್ಲಿ ಮೂರು ಜನ ರೇಮನಾಫರೂ ಕಲೆತು ಮಾತಾಡುತ್ತಿದ್ದರು. ಅವರ ಗಾಡಿ ರಸ್ತೆಗೆ ಅಡ್ಡವಾಗಿ ನಿಂತಿತ್ತು. ಪಕ್ಕದಲ್ಲೇ ಜೀನು ಹಾಕಿದ ಕುದುರೆ. ಟಾಲ್‌ಸ್ಟಾಯ್‌ಗೆ ಮುಂದೆ ಹೋಗಲು ದಾರಿಯಿರಲಿಲ್ಲ. ಹಾಗೆ ನಿಂತು ಕಠಿಣವಾಗಿ ರೇಮನಾಫರ ಗುಂಪಿನ ಕಡೆ ನೋಡಿದರು. ಆದರೆ ಇವರು ಬರುವ ಮುನ್ನವೇ ಅವರು ಬೇರೆ ಕಡೆ ತಿರುಗಿಕೊಂಡಿದ್ದರು. ಅಷ್ಟುಹೊತ್ತಿಗೆ ಕಡಿವಾಣದಲ್ಲಿ ಕುಣಿಯುತ್ತಿದ್ದ ಕುದುರೆ, ಹೆದರಿ ದಾರಿಬಿಟ್ಟಿತು. ಟಾಲ್‌ಸ್ಟಾಯರು ಮುಂದೆ ಹೋದರು.

ಒಂದೆರಡು ನಿಮಿಷ ಮೌನವಾಗಿದ್ದು ಆಮೇಲೆ ಟಾಲ್‌ಸ್ಟಾಯ್ ಹೇಳಿದರು : 'ಅವರಿಗೆ ನನ್ನ ಗುರುತು ಹತ್ತಿತು. ಶುದ್ಧ ಮುತ್ಸಾಳರು.' ಇನ್ನೊಂದು ಗಳಿಗೆ ಬಿಟ್ಟು ಹೇಳಿದರು : 'ಟಾಲ್‌ಸ್ಟಾಯ್‌ಗೆ ದಾರಿ ಬಿಡಬೇಕೆಂಬುದು ಕುದುರೆಗಾದರೂ ಗೊತ್ತು !'

*    *    *    *

ಮೊದಲು ನಿನ್ನನ್ನು ನೀನು ನೋಡಿಕೊ – ಆಮೇಲೆ ಬೇರೆಯವರಿಗೆ ಬೇಕಾದಷ್ಟು ಮಾಡಬಹುದು.

*    *    *    *

'ನಮಗೆ ಗೊತ್ತಿದೆ' ಎಂದು ಹೇಳುವಾಗ ನಮ್ಮ ಮಾತಿನ ಅರ್ಥವೇನು ? ನಿಜ ನಾ ಬಲ್ಲೆ: ನಾನು ಟಾಲ್‌ಸ್ಟಾಯ್, ಬರಹಗಾರ, ನನಗೆ ಹೆಂಡತಿ ಮಕ್ಕಳಿದಾರೆ, ನರೆಗೂದಲಿದೆ, ಕುರೂಪಿ ಮುಖವಿದೆ, ಗಡ್ಡವಿದೆ – ಆದರೆ ಇದನ್ನೆಲ್ಲಾ ಪಾಸ್‌ಪೋರ್ಟ್ – ರಹದಾರಿ - ಯಲ್ಲಿ ಬರೆದಿದಾರೆ. ಆದರೆ ಆತ್ಮದ ಬಗ್ಗೆ ರಹದಾರಿಯಲ್ಲಿ ಒಂದು ಮಾತೂ ಇಲ್ಲ. ಅದರ ಬಗ್ಗೆ ನನಗಿದು ಗೊತ್ತಿದೆ : ಆದಕ್ಕೆ ದೇವರ ಬಳಿ ಸಾರಬೇಕೆಂಬ ಬಯಕೆ.

'ಆದರೆ ದೇವರೆಂದರೆ ಏನು ? ನನ್ನ ಆತ್ಮ ದೇವರಲ್ಲಿ ಒಂದು ಅಣುವಿನಷ್ಟು ಭಾಗ. ಧ್ಯಾನಮಾಡುವುದನ್ನು ಕಲಿತವನಿಗೆ ಇದನ್ನು ನಂಬಲು ಕಷ್ಟವಾಗುತ್ತದೆ ; ಆದರೆ ದೇವರಲ್ಲಿ ಬಾಳಲು, ವಿಶ್ವಾಸವೊಂದೇ ಮಾರ್ಗ. ಅದಕ್ಕೇ ತರ್ತುಲಿಯನ್ ಬರೆದದ್ದು : 'ಯೋಚನೆ ಕೆಟ್ಟದು ?'

*    *    *    *

ಇವರು ಬೋಧಿಸುವುದು ಯಾವಾಗಲೂ ಒಂದೇ ಆದರೂ, ಇವರ ಮಾತಿನಲ್ಲಿ ಎಂಥ ಅನಂತ ವೈವಿಧ್ಯವಿದೆ ! ಈ ಹೊತ್ತು ಉದ್ಯಾನದಲ್ಲಿ ಹಾಸ್ಪ್ರಿಯ ಮುಲ್ಲಾನ ಜೊತೆಯಲ್ಲಿ ಮಾತನಾಡುವಾಗ ಕೊನೆ ದಿನಗಳ ಬಗ್ಗೆ ಯೋಚಿಸಬೇಕಾದ ಕಾಲ ಬಂದ, ಸರಳ ಮನಸಿನ ರೈತನ ಹಾಗೆ ಮಾತಾಡಿದರು. ಟಾಲ್‌ಸ್ಟಾಯರ ಆಕಾರ ಕುಳ್ಳು; ಅದರಲ್ಲೂ ಬಾಡಿ ಬಡವಾದ ದೇಹ. ಬೊಜ್ಜು ಬೆಳೆದ ತಾರ್ತರನ ಇದಿರು ಅವರು, ಇಷ್ಟು ಆತ್ಮದಲ್ಲಿ ಹುಗಿದಿದ್ದುದು ಈಗ ಎಚ್ಚತ್ತಂತೆಯೂ, ಆ ಎಚ್ಚರದಿಂದ ಬರಬಹುದಾದ ಪ್ರಶ್ನೆಗಳಿಗೆ ಹೆದರುವವನ ಹಾಗೂ ಕಂಡರು ಟಾಲ್‌ಸ್ಟಾಯ್.

ದಟ್ಟವಾಗಿ ಬೆಳೆದ ಹುಬ್ಬನ್ನು ಅಚ್ಚರಿಯಿಂದ ಮೇಲೆತ್ತಿ, ಕೂರಾದ ಸಣ್ಣ ಕಣ್ಣುಗಳಿಂದ ಅದರೊಳಗಿನ ಅಸಹ್ಯ ತೀವ್ರಜ್ವಾಲೆಯನ್ನು ಕರಗಿಸಿ– ನಾಚಿದವರಂತೆ ನೋಡಿದರು. ಅವರ 'ಎಲ್ಲವನ್ನೂ ಕಾಣಬಲ್ಲ' ಕಣ್ಣು ಮುಲ್ಲಾನ ಅಗಲವಾದ ಮುಖದಲ್ಲಿ ನಾಟಿತ್ತು. ಆದರೆ ಆ ಕಣ್ಣುಗಳಲ್ಲಿ ಎಷ್ಟೋ ಜನರಿಗೆ ದಿಕ್ಕು ತಪ್ಪಿಸುವಂತೆ ಮಾಡಿದ ಆ ತೀಕ್ಷ್ಣತೆ ಇರಲಿಲ್ಲ.

ಮುಲ್ಲಾನನ್ನು ಅವರು ಜೀವನದ ಅರ್ಥವೇನು? ಆತ್ಮ, ದೇವರು ಎಲ್ಲದರ ಬಗ್ಗೆ ಕೇಳಿದರು. ಮುಲ್ಲಾ ಹೇಳಿದ ಕೊರಾನಿನ ಪದ್ಯಗಳಿಗೆ ತಕ್ಕ ಬೈಬಲಿನ ವಾಕ್ಯಗಳನ್ನು ಕೂಡಲೆ ಹೇಳುತ್ತಾ ಹಸುಮಗುವಿನ ಹಾಗೆ ಪ್ರಶ್ನೆ ಕೇಳಿದರು. ಅದೆಂಥ ಚುರುಕು ಬುದ್ಧಿ! ದೊಡ್ಡ ಕಲಾವಿದ, ಮಹರ್ಷಿಗೆ ಮಾತ್ರ ಅವರ ರೀತಿ ಸಾಧ್ಯ.

ಈಗ ನಾಲ್ಕಾರು ದಿನಗಳ ಕೆಳಗೆ ಟಾನೆಜಿವ್ ಸ್ಯೂಲರ್ ಜೊತೆಗೆ ಸಂಗೀತದ ವಿಚಾರ ಮಾತಾಡುತಾ ಇದ್ದರು. ಸಂಗೀತವೆಂದರೆ ಎಷ್ಟು ಉತ್ಸಾಹ! ಮಾತಿನಲ್ಲಿ ನ್ಯೈಯನ್ನೆ ಮರೆತುಬಿಟ್ಟರು. ಅವರ ಉತ್ಸಾಹ, ಅಲ್ಲ ಉತ್ಸಾಹಶಕ್ತಿ – ಅವರಿಗೇ ಮೆಚ್ಚಿಗೆಯಾದಂತಿತ್ತು. ಸಂಗೀತದ ಬಗ್ಗೆ ಸೋಫೆನ್ ಹೌಡ್ ಎಲ್ಲರಿಗಿಂತ ಚೆನ್ನಾಗಿ ಬರೆದಿದಾನೆ. ಅವನ ಬರಹದಲ್ಲಿ ಜಾಣ್ಮೆಯಿದೆ, ಆಳವಿದೆ ಎಂದರು; ಇದಕ್ಕೆ ಪ್ರತಿಯಾಗಿ ಫೆಟ್ ಬಗ್ಗೆ ಒಂದು ತಮಾಷೆಯಾದ ಕಥೆ ಹೇಳಿದರು: 'ಸಂಗೀತ ಆತ್ಮದ ಮೂಕ ಪ್ರಾರ್ಥನೆ' ಎಂದು ವಿವರಿಸಿದರು.

'ಮೂಕವೇಕೆ?' ಎಂದ ಸ್ಯೂಲರ್.

'ಏಕೆಂದರೆ ಅಲ್ಲಿ ಮಾತಿನ ಬಳಕೆಯಿಲ್ಲ. ಯೋಚನೆಗಿಂತ ನಾದದಲ್ಲಿ ಹೆಚ್ಚು ಆತ್ಮವಿದೆ. ಯೋಚನೆ ಚೀಲವಿದ್ದ ಹಾಗೆ– ಅದರಲ್ಲಿ ಚಿಕ್ಕಾಸು, ಕವಡೆ ಏನು ಬೇಕಾದರೂ ಇರಬಹುದು. ಆದರೆ ನಾದ ಹಾಗಲ್ಲ; ಅಸ್ಪರ್ಶಿತ ಪವಿತ್ರತೆ ಅದು.'

ಸ್ಪಷ್ಟವಾದ ಸಂತೋಷದಿಂದ, ಮನಸೆಳೆವ ಹಾಗೆ, ಸಣ್ಣ ಮಾತುಗಳಲ್ಲಿ ತಮ್ಮ ಭಾವಗಳಲ್ಲಿ ಅತ್ಯಂತ ಮೃದುಮಧುರ ವಾದ್ಯವನ್ನು ಆರಿಸಿ ವಿವರಿಸಿದರು.

ಈ ಗುಣ ಅವರಿಗೇ ಸರಿ. ಇದ್ದಕ್ಕಿದ್ದಹಾಗೇ ನಕ್ಕು, ಮೃದುವಾದ ಧ್ವನಿಯಲ್ಲಿ ಹೇಳಿದರು :

'ಸಂಗೀತಗಾರರೆಲ್ಲಾ ಮುರ್ಖ್ಖಾಳರು. ಸಂಗೀತಗಾರನಿಗೆ ದೈವದತ್ತ ಪ್ರತಿಭೆ ಎಷ್ಟೆಷ್ಟು ಹೆಚ್ಚೋ, ಅವನಲ್ಲಿಯ ಆಳ, ಅಷ್ಟಷ್ಟು ಕಡಮೆ. ಆದರೆ ಎಂಥ ದೈವಭಕ್ತಿ .......'

* * * *

ಚೆಕಾಫನ ಕೈಲಿ ಟೆಲಿಫೋನಿನಲ್ಲಿ ಮಾತಾಡುತ್ತಾ ಒಂದು ಸಲ ಹೇಳಿದರು :

'ನನಗಂತೂ ಇದು ತುಂಬಾ ಒಳ್ಳೆ ದಿವಸ ; ನನ್ನ ಆತ್ಮದಲ್ಲಿ ಆನಂದ ತುಂಬಿ ಹೊರಸೂಸುತಿದೆ. ಎಷ್ಟು ಆನಂದವಾಗಿದೆಯೆಂದರೆ, ನೀನೂ ಸಂತೋಷವಾಗಿರಬೇಕು ಈ ದಿನ; ನೀನು ಮಾತ್ರ. ನೀನು ತುಂಬಾ ಒಳ್ಳೆ ಮನುಷ್ಯ, ತುಂಬಾ ಒಳ್ಳೆಯವನು.'

* * * *

ಟಾಲ್‌ಸ್ಟಾಯ್ ಹತ್ತಿರ ಯಾರಾದರೂ ಅವರಿಗೆ ಉಪಯೋಗವಿಲ್ಲದ ಮಾತಾಡಿದರೆ, ಅವರು ಅದು ತಮಗೆ ಸಂಬಂಧವಿಲ್ಲದಂತೆ, ಅರ್ಥವಾಗದಿದ್ದ ಹಾಗೆ ಇದ್ದುಬಿಡುತ್ತಾರೆ. ನಿಜವಾಗಿಯೂ ಅವರು ಏನನ್ನೂ ಕೇಳುವುದೇ ಇಲ್ಲ - ಸುಮ್ಮನೆ ವಿಚಾರಿಸುತ್ತಾರೆ. ಅಷ್ಟೆ. ಅಮೂಲ್ಯಬೆಲೆಯ ವಿಚಿತ್ರವಸ್ತು ಸಂಗ್ರಾಹಕನಂತೆ ಟಾಲ್‌ಸ್ಟಾಯ್, ತಮಗಾವುದು ಬೇಕೋ, ಯಾವುದು ಅವಶ್ಯಕವೋ ಅದನ್ನೇ ಆರಿಸಿಕೊಳ್ಳುತ್ತಾರೆ.

* * * *

ಒಂದು ದಿನ ಟಾಲ್‌ಸ್ಟಾಯ್ ತಮಗೆ ಬಂದ ಕಾಗದಗಳನ್ನೆಲ್ಲ ಆರಿಸಿ ಜೋಡಿಸಿಡುತ್ತಾ ಹೇಳಿದರು :

'ನಾನೆಂದರೆ ಎಷ್ಟು ಗದ್ದಲ ಮಾಡುತ್ತಾರೆ ಇವರೆಲ್ಲಾ. ಕಾಗದ ಬರೆಯುತ್ತಾರೆ. ಇನ್ನೂ ಏನೇನೋ ಮಾಡುತ್ತಾರೆ. ಕಡೆಗೆ, ನಾನು ಸತ್ತು ಒಂದೆರಡು ವರ್ಷದ ಮೇಲೆ ಯಾರಾದರೂ ನನ್ನ ಹೆಸರು ಎತ್ತಿದರೆ 'ಟಾಲ್‌ಸ್ಟಾಯ್ ! ಆ ಅವನೇ ! ಬೂಡ್ಸ್ ಹೊಲಿಯುತ್ತಿದ್ದ ಶ್ರೀಮಂತ ; ಆಮೇಲೆ

ಅವನಿಗೇನೋ ಆಯಿತು. ಅವನೇ ತಾನೆ ನೀವು ಹೇಳೋದು' ಎಂದು ಬಿಡುತಾರೆ. ನಾ ಬಲ್ಲೆ.'

* * * *

ಎಷ್ಟೋ ಸಲ ನಾನು ಅವರ ಮುಖದಲ್ಲಿ, ನೋಟದಲ್ಲಿ, ಏನನ್ನೋ ಕಳೆದುಕೊಂಡಿದ್ದು, ಅನಿರೀಕ್ಷಿತವಾಗಿ ಸಿಕ್ಕಾಗ ಆಗುವ ತೃಪ್ತಿ, ಸಂತೋಷದ ಛಾಯೆಯನ್ನು ಕಂಡಿದೇನೆ. ಏನನ್ನೋ ಎಲ್ಲೋ ಇಟ್ಟು ಮರೆಯುತ್ತಾರೆ. 'ಎಲ್ಲಿ ಅದು ? ಅದೆಲ್ಲಿದೆ ? ನನಗೆ ಬಹು ಪ್ರಿಯವಾದ ಅದನ್ನು ಎಲ್ಲಿ ಇಟ್ಟು ಬಿಟ್ಟೆ ?' ಎಂದು ದಿನಗಟ್ಟಲೆ ಕುಳಿತು ಗುಪ್ತ ಕಾತುರತೆಯಿಂದ ಯೋಚಿಸುತ್ತಾರೆ. ಸುತ್ತಲ ಜನ ತಮ್ಮ ಕಾತುರತೆಯನ್ನು ಕಂಡು, ಇವರಿಗಾದ ನಷ್ಟವನ್ನು ಅರಿತು, ಏನು ಹೇಗೆ ವಿಚಾರಿಸಿ ಎಲ್ಲಿ ನೋಯಿಸುತ್ತಾರೋ ಎಂದು ಹೆದರುತ್ತಾರೆ. ಇದ್ದಕ್ಕಿದ್ದಹಾಗೇ ಅದನ್ನಿಟ್ಟ ಸ್ಥಳ ನೆನಪಿಗೆ ಬಂದು, ಅದು ಸಿಗುತ್ತದೆ. ಅದಕ್ಕಾಗಿ ಸಂತೋಷಪಟ್ಟು ಬೇರೆಯವರಿಗೆ ತಮ್ಮ ಸಂತೋಷ ತೋರಿಸಲು ಹೆದರದೆ ನಗುತ್ತಾರೆ. 'ಎಲ್ಲಿ ಈಗ ನೋಯಿಸಿ ನನ್ನ' ಎಂಬ ತುಂಟತನ ಆ ನಗೆಯಲ್ಲಿರುತ್ತದೆ.

ಆದರೆ ಅವರಿಗೆ ಏನು ಸಿಕ್ಕಿತೋ, ಎಲ್ಲಿ ಸಿಕ್ಕಿತೋ—ಅದು ಮಾತ್ರ ರಹಸ್ಯ.

ಅವರ ಬಗ್ಗೆ ಊಹಾಪೋಹಕ್ಕೆ ಕೊನೆಯೇ ಇಲ್ಲ. ಅವರ ಬಗ್ಗೆ ಕುಳಿತು ಯೋಚಿಸುವುದೆಂದರೆ ಮತ್ತೆ ಮತ್ತೆ ಅವರನ್ನು ನೋಡಿದ ಹಾಗೆ; ದಣಿವೇ ಆಗುವುದಿಲ್ಲ. ನನ್ನ ಮಟ್ಟಿಗೆ ಹೇಳಬೇಕೆಂದರೆ, ನಾನು ಅವರಿವರ ಮನೆಯಲ್ಲಿ - ಕೋಣೆಯಲ್ಲಿರುವುದಂತೂ ಆಗಲೇ ಆಗದು - ಇರಲೇಲಾರೆ. ಅವರ ಸುತ್ತಮುತ್ತಲ ವಾತಾವರಣ ಸೂರ್ಯಕಿರಣದಿಂದ ದಗ್ಧವಾದ ಮರಳುಗಾಡಿನ ಹಾಗಿರುತ್ತದೆ, ಅಷ್ಟೇ ಅಲ್ಲ: ಆ ಸೂರ್ಯನೂ ಸುಟ್ಟು ಬೂದಿಯಾಗುತ್ತಿದಾನೆ. ಅನಂತರ ಕರಾಳ ಕಾಳರಾತ್ರಿ ಕಣ್ಣುಮುಂದೆ !

## ೯. ಚೆಕಾವ್

ಈಗ ಐದು ದಿನದಿಂದ ಸ್ವಲ್ಪ ಜ್ವರ ಬರುತ್ತಿದೆ. ಹಾಸಿಗೆಯಲ್ಲೇ ಮಲಗಿಕೊಂಡಿರಬೇಕೆಂದರೆ ನನ್ನ ಕೈಲಂತೂ ಆಗದು. ಶುದ್ಧ ಅಸಹ್ಯ !

ಹೊರಗೆ ಸೊಗಸಾದ ಮಳೆ ಬೀಳುತ್ತಿದೆ; ನೆಲಕ್ಕೆಲ್ಲಾ ಒದ್ದೆ ಧೂಳು ಚೆಲ್ಲುತ್ತಿದೆ. ಇಗೋ ಕೋಟೆಯ ಬಳಿ ತೋಫಿನ, ಸಿಡಿಲಿನಂಥ ಸದ್ದು ಕೇಳಿ ಬರುತ್ತಿದೆ - ಶತ್ರು ಅದನ್ನು ಮುತ್ತಿದ್ದಾನೆ. ಸರ್ಚ್‌ಲೈಟಿನ ದೀರ್ಘನಾಲಿಗೆ ಇರುಳಿನ ಮುಗಿಲನ್ನು ತಾಗುತ್ತಿದೆ; ಇವನ್ನು ನೋಡಿದರೆ ಪೈಶಾಚಿಕ ಸೃಷ್ಟಿಯಾದ ಯುದ್ಧ ನೆನಪಿಗೆ ಬಂದು ಎದೆ ನಡುಗುತ್ತದೆ.

ಚೆಕಾವನ ಪುಸ್ತಕ ಓದುತ್ತಿದ್ದೇನೆ. ಚೆಕಾವ್ ಈಗ ಹತ್ತುವರ್ಷದ ಕೆಳಗೆ ಸಾಯದಿದ್ದರೆ, ಈ ಯುದ್ಧ ಅವನನ್ನು ಮೊದಲು ಮಾನವದ್ವೇಷದ ವಿಷವಿಟ್ಟು ಕೊಲ್ಲುತ್ತಿತ್ತು. ಯೋಚನೆ ಬಂದಾಗ ಚೆಕಾವನ ಸ್ಮಶಾನಯಾತ್ರೆ ನೆನಪಿಗೆ ಬಂತು.

ಮಾಸ್ಕೋ ಮೆಚ್ಚಿದ ಈ ಬರಹಗಾರನ ಶವ ಒಂದು ಹಸರುಬಣ್ಣದ ಬಾಡಿಗೆ ಗಾಡಿಯಲ್ಲಿ ಮಾಸ್ಕೋಕ್ಕೆ ಬಂತು. ಗಾಡಿಯ ಒಂದು ಪಕ್ಕದಲ್ಲಿ 'ಚಿಪ್ಪಿನ ಮೀನಿಗೆ' ಎಂದು ದೊಡ್ಡದಾಗಿ ಬರೆದಿತ್ತು. ಜನರೆಲ್ಲ ನಿಲ್ದಾಣದಲ್ಲಿ ಕಾಯುತ್ತಿದ್ದರು. ಅದೇ ಹೊತ್ತಿಗೆ ಮಂಚೂರಿಯದಲ್ಲಿ ಸತ್ತ ಜನರಲ್ ಕೆಲ್ಲರ್‌ನ ಶವವೂ ಮಾಸ್ಕೋಗೆ ತರಲ್ಪಟ್ಟಿತು. ಜನರೆಲ್ಲಾ ಅದೇ ಚೆಕಾವನ ಶವವೆಂದು ಅದನ್ನು ಹಿಂಬಾಲಿಸಿದರು. ಸಂಸ್ಕಾರ ಸಮಯದಲ್ಲೇ ಅವರಿಗೆ ತಮ್ಮ ತಪ್ಪು ಗೊತ್ತಾದದ್ದು. ಸೈನಿಕನ ಮರ್ಯಾದೆಯೊಡನೆ ಸಂಸ್ಕಾರವಾದಾಗ ಇದು ಚೆಕಾವನ ಶವಸಂಸ್ಕಾರವಲ್ಲ ಎಂಬುದು ಗೊತ್ತಾಯಿತು. ಚೆಕಾವನ ಹೆಣವನ್ನು ಹಿಂಬಾಲಿಸಿದವರು ಎಲ್ಲೋ ನೂರು ಜನ ಮಾತ್ರ; ಅಷ್ಟೆ. ಹಾಗೆ ಹಿಂಬಾಲಿಸಿದವರಲ್ಲಿ ಇಬ್ಬರದು ನನಗೆ ಚೆನ್ನಾಗಿ ನೆನಪಿದೆ. ಇಬ್ಬರೂ ನ್ಯಾಯವಾದಿಗಳು. ಹೊಸ ಬೂಡ್ಸ್ ಹಾಕಿದ್ದರು; ಚುಕ್ಕೆ ಚುಕ್ಕೆಯ ನೆಕ್‌ಟೈ ಕಟ್ಟಿದ್ದರು; ಲಗ್ನನಿಶ್ಚಯವಾದವರು. ನಾನು ಅವರ ಹಿಂದೇ ಬರುತ್ತಿದ್ದುದರಿಂದ ಅವರ ಮಾತು ಚೆನ್ನಾಗಿ ಕೇಳಿಸುತ್ತಿತ್ತು. ಇಬ್ಬರ ಪೈಕಿ ಒಬ್ಬನು - ಮಕಾಲಕಾವ್. ನಾಯಿಗಳ ಜಾಣ್ಮೆಯ ವಿಷಯ ಚರ್ಚಿಸುತ್ತಿದ್ದ, ಮತ್ತೊಬ್ಬನು ತನ್ನ ಹಳ್ಳಿಯ ಮನೆ, ಅದರ ಸುತ್ತಲ ಪ್ರಕೃತಿಸೌಂದರ್ಯ ಬಣ್ಣಿಸುತ್ತಿದ್ದ. ಬಿಳಿ ಬಟ್ಟೆ ತೊಟ್ಟು, ಅಂಚು ಹಚ್ಚಿದ ಕೊಡೆಹಿಡಿದ ಹೆಣ್ಣುಮಗಳೊಬ್ಬಳು, ದೊಡ್ಡಕನ್ನಡಕ ಧರಿಸಿದ ಮುದುಕನೊಬ್ಬನಿಗೆ ಚೆಕಾವನ ಸದ್ಗುಣಗಳನ್ನು

ಬಣ್ಣಿಸುತ್ತಿದ್ದಳು. ಎಷ್ಟು ಸೊಗಸಾದ ಮನುಷ್ಯ .... ಎಷ್ಟು ಚುರುಕು.... ! ಮುದುಕ ಅವಳ ಮಾತು ಅರ್ಥವಾಗದವನ ಹಾಗೆ ಕೆಮ್ಮುತ್ತಿದ್ದ.

ಬೇಸಿಗೆಯ ದಿನ ತುಂಬಾ ಧೂಳು. ಶವದ ಮುಂದುಗಡೆ, ದೊಡ್ಡ ಹೊಟ್ಟೆಯ ಬಿಳಿ ಕುದುರೆಯ ಮೇಲೆ, ಬೊಜ್ಜು ಬೆಳೆದ ಪೋಲೀಸಿನವನು. ಎಷ್ಟು ಸಾಧಾರಣ, ಹೊಲಸು. ರಷ್ಯಾದ ಮಹಾಕವಿಗೆ ಎಂಥ ಅಂತ್ಯ ಸಂಸ್ಕಾರ; ಆ ದಿವ್ಯ ಕಲಾವಿದನ ನೆನಪಿಗೆ ಎಂಥ ಕಾಣಿಕೆ !

* * * *

ಎ. ಎಸ್. ಸ್ಯುವೋರಿನ್ * ಗೆ ಬರೆದ ಕಾಗದವೊಂದರಲ್ಲಿ ಚೆಕಾವ್ ಬರೆದಿದ್ದ:

'ಬದುಕಿನ ಹೋರಾಟದಷ್ಟು ಬೇಸರದ ಬರಡುವಿಚಾರ ಮತ್ತೊಂದಿಲ್ಲ. ಬಾಳಿನ ಸವಿಯನ್ನೆಲ್ಲ ಹೀರಿ, ಬದುಕನ್ನೂ ಮರಳುಗಾಡಾಗಿಸುತ್ತದೆ ಅದು.'

ಇದು ಶುದ್ಧ ರಷ್ಯನ್ ಭಾವನೆ; ಆದರೆ ಚೆಕಾವನ ಗುಣ ಇದಿತ್ತೆಂದು ನಾ ಹೇಳಲಾರೆ.

* * * *

ದುಡಿಮೆ ಎಲ್ಲ ಸಂಸ್ಕೃತಿಗೂ ಅಗತ್ಯವೆಂದು ಚೆಕಾವನಷ್ಟು ನಂಬಿದ್ದ ಮತ್ತೊಬ್ಬರನ್ನು ನಾ ಕಾಣೆ; ಎಷ್ಟು ಆಳವಾದ್ದು ಆ ನಂಬಿಕೆ, ಅದಕ್ಕೆ ಕೊಡುತ್ತಿದ್ದ ಕಾರಣಗಳಲ್ಲೆಷ್ಟು ವೈವಿಧ್ಯ. ಈ ಭಾವ ಆತನ ಬಾಳಿನ ಎಲ್ಲ ಮುಖದಲ್ಲೂ ಎದ್ದು ಕಾಣುತ್ತಿತ್ತು. ನಡೆ, ನುಡಿ, ಹವ್ಯಾಸ, ವಶಪಡಿಸಿ ಕೊಳ್ಳುವ ಸ್ವಾರ್ಥದ ಬಯಕೆ ಇಲ್ಲಿದೆ, ಮಾನವನ ಸೃಷ್ಟಿಶಕ್ತಿಯ ಫಲವೆಂದು ಒಳ್ಳೆಯ ವಸ್ತುಗಳನ್ನು ಆದರಿಸುವ ಸ್ವಾರ್ಥರಹಿತ ಅರಿಯುವಿಕೆಯಲ್ಲಿ – ಎಲ್ಲ ದರಲ್ಲೂ. ಮನೆ ಕಟ್ಟುವುದರಲ್ಲಿ, ತೋಟ ಮಾಡುವುದರಲ್ಲಿ, ಭೂಮಿಯನ್ನು ಸಿಂಗಾರ – ಬಂಗಾರ ಮಾಡುವುದನ್ನು ಚೆಕಾವ್ ತುಂಬಾ ಪ್ರೀತಿಸುತ್ತಿದ್ದ; ದುಡಿಮೆಯ ಕಾವ್ಯಾನಂದವನ್ನು ಅನುಭವಿಸುತ್ತಿದ್ದ. ತನ್ನ ತೋಟದಲ್ಲಿ ನಾಟಿದ ಅಲಂಕಾರದ ಗಿಡಬಳ್ಳಿ, ಹಣ್ಣಿನ ಗಿಡಗಳ ಬೆಳವಣಿಗೆಯನ್ನು ಎಷ್ಟು ಆಸಕ್ತಿಯಿಂದ ಗಮನಿಸುತ್ತಿದ್ದ. ಆಟ್ಕಾದಲ್ಲಿ ತನ್ನದೊಂದು ಮನೆ ಕಟ್ಟ

---

* 'ನವೋಜೆವ್ರೆಮ್ಯಾ' ಪತ್ರಿಕೆಯ ಸಂಪಾದಕ.

ಬೇಕೆಂಬ ಆಸೆ ಚೆಕಾವ್‌ಗೆ ತುಂಬಾ ಇತ್ತು. ಹೇಳುತ್ತಿದ್ದ:

'ತನಗೆ ಸೇರಿದ ತುಂಡುಭೂಮಿಯನ್ನು ಪ್ರತಿಯೊಬ್ಬ ಮನುಷ್ಯನೂ ತನಗೆ ಸಾಧ್ಯವಾದಷ್ಟು ಅಲಂಕಾರಮಾಡಿದರೆ ಜಗತ್ತು ಎಂಥ ರಮ್ಯ ಸ್ಥಳವಾದೀತು!' ಎಂದು ಉದ್ಗಾರ ತೆಗೆಯುತ್ತಿದ್ದ.

ನಾನು ಆಗ 'ವಾಸ್ಕಾಕ ಬುಸ್ಲಾಲೇವ್' ಎಂಬ ನಾಟಕ ಬರೆಯುತ್ತಿದ್ದೆ. ಒಂದು ದಿನ ಅದರಲ್ಲಿ ಬರುವ ವಾಸ್ಕಾಕನ ಅಹಂಕಾರದ ಭಾಷಣದ ಭಾಗ ಚೆಕಾವನಿಗೆ ಓದಿ ತೋರಿಸಿದೆ. ಆ ಭಾಷಣ ಹೀಗಿದೆ:

'ಹ! ನನಗೆ ಇನ್ನಷ್ಟು ಅಧಿಕಾರ ಶಕ್ತಿ ಇದ್ದಿದ್ದರೆ, ಬಿಸಿಯುಸಿರು ಬಿಟ್ಟು ಹಿಮವನ್ನು ಕರಗಿಸುತ್ತಿದ್ದೆ! ಭೂಮಿಯನ್ನೆಲ್ಲಾ ಸುತ್ತಿ ಅದನ್ನೆಲ್ಲಾ ಉಳುತ್ತಿದ್ದೆ! ವರ್ಷ ವರ್ಷ ನಡೆ ನಡೆದು ನಗರದ ಮೇಲೆ ನಗರ ಕಟ್ಟುತ್ತಿದ್ದೆ! ಲೆಕ್ಕವಿಲ್ಲದಷ್ಟು ದೇವಾಲಯ ಕಟ್ಟುತ್ತಿದ್ದೆ, ಮಿತಿಯಿಲ್ಲದಷ್ಟು ಉದ್ಯಾನ ಬೆಳೆಸುತ್ತಿದ್ದೆ. ಸುಂದರ ಕನ್ನೆಯಂತೆ ಭೂಮಿಯನ್ನು ಸಿಂಗರಿಸುತ್ತಿದ್ದೆ; ನನ್ನ ವಧುವಿನಂತೆ ಬಿಗಿದು ಆಲಂಗಿಸುತ್ತಿದ್ದೆ. ಎದೆಗೊತ್ತಿಕೊಂಡು ದೇವನ ಬಳಿಗೊಯ್ದು: 'ನೋಡು ಈ ಭೂಮಿಯನ್ನು; ವಸುಂಧರೆಯನ್ನು ವಾಸ್ಕಾ ಎಷ್ಟು ಸುಂದರವಾಗಿ ಸಿಂಗರಿಸಿದಾನೆಂಬುವನ್ನು ನೋಡು! ನೀನದನ್ನು ಕಲ್ಲುಹರಳಿನಂತೆ ಮುಗಿಲಿಗೆ ತೂರಿದೆ; ನಾನದನ್ನು ತಿಕ್ಕಿತೊಳೆದ ಹೊಳೆವ ವಜ್ರವನ್ನಾಗಿ ಮಾಡಿದೇನೆ! ನೋಡು-ನೋಡಿ ಸಂತೋಷಪಡು. ಸೂರ್ಯಕಿರಣದಲ್ಲಿ ಹೇಗೆ ಹೊಳೆಯುತ್ತಿದೆ ನೋಡು. ನಿನಗಿದನ್ನು ನಾನು ಕಾಣಿಕೆಯಾಗಿ ಕೊಡುತ್ತಿದ್ದೆ—ನಿಜವಾಗಲೂ—ಆದರೇನು ಮಾಡಲಿ. ನಾನೇ ಇದನ್ನು ತುಂಬಾ ಪ್ರೀತಿಸುತ್ತೇನೆ!'

ಚೆಕಾವನಿಗೆ ಇದು ತುಂಬಾ ಮೆಚ್ಚಿಗೆಯಾಯಿತು. ಉತ್ಸಾಹದಲ್ಲಿ ಕೆಮ್ಮುತ್ತಾ ಹೇಳಿದ:

'ತುಂಬಾ ಸೊಗಸಾಗಿದೆ! ಎಷ್ಟು ನಿಜ ಇದೆಲ್ಲಾ! ಇದರಲ್ಲಿ ಎಲ್ಲ ವೇದಾಂತದ ಸಾರ ಅಡಗಿದೆ. ಭೂಮಿಯನ್ನು ಮನುಷ್ಯ ವಾಸಕ್ಕರ್ಹವಾದ ಸ್ಥಳವಾಗಿ ಮಾಡಿದಾನೆ. ಆದ್ದರಿಂದ ಇದನ್ನು ಅವನು ತನಗೆ ಸುಖವಾಗಿರುವ ಹಾಗೆ ಮಾಡಿಕೊಳ್ಳಬೇಕು.'

ಹಟ ಹಿಡಿದವನ ಹಾಗೆ ಹೇಳಿದ:

'ಮಾಡಿಯೋ ಮಾಡಿಕೊಳ್ಳುತ್ತಾನೆ.'

ಇನ್ನೊಂದು ಸಲ ಅದನ್ನು ಓದುವ ಹಾಗೆ ಹೇಳಿದ. ಓದಿದೆ. ಕಡೆಯ ವರೆಗೂ ಆಸಕ್ತಿಯಿಂದ ಕೇಳಿ ಆಮೇಲೆ ಹೇಳಿದ:

'ಕಡೆ ಎರಡು ಸಾಲು ಬರೆಯಬೇಕಾಗಿರಲಿಲ್ಲ - ಶುದ್ಧ ತಲಹರಟೆ! ಅದರ ಅಗತ್ಯವೇ ಇರಲಿಲ್ಲ ........'

*　　*　　*　　*

ತನ್ನ ಲೇಖನಗಳ ಬಗ್ಗೆ ಚೆಕಾವ್ ಮಾತಾಡುತ್ತಿದ್ದುದೇ ಕಡಮೆ. ಆಡಿದರೂ ಒಂದೋ ಎರಡೋ; ಅದೂ ಬಲವಂತ ಮಾಘಸ್ನಾನ. ಲಿಯೋ ಟಾಲ್‌ಸ್ಟಾಯರ ಬಗ್ಗೆ ಮಾತನಾಡುವಾಗ ಎಷ್ಟು ಹುಷಾರಾಗಿರುತ್ತಿದ್ದನೋ, ತನ್ನದರ ಬಗ್ಗೆ ಮಾತನಾಡುವಾಗಲೂ ಅಷ್ಟೇ. ಯಾವಾಗಲಾದರೂ, ಅಪ ರೂಪವಾಗಿ ತುಂಬಾ ಸಂತೋಷವಾಗಿದ್ದಾಗ ನಗು ನಗುತ್ತಾ ತನ್ನ ಹೊಸ ಕಥೆಯ ವಿಚಾರ, ಅಥವಾ ಬರೆಯಬೇಕೆಂದಿರುವುದರ ಬಗ್ಗೆ - ಸಾಧಾರಣವಾಗಿ ಯಾವುದಾದರೊಂದು ಹಾಸ್ಯವಿಷಯ - ಹೇಳುತ್ತಿದ್ದ.

'ಈ ಸಲ ಒಬ್ಬ ಶಾಲಾ ಉಪಾಧ್ಯಾಯಿನಿಯ ವಿಷಯ ಬರೀತೀನಿ. ಅವಳು ನಾಸ್ತಿಕಳು. ಡಾರ್ವಿನ್ ಎಂದರೆ ಪ್ರಾಣಬಿಡುತ್ತಾಳೆ ಜನರ ಮೂಢ ನಂಬಿಕೆ, ಅಂಧ ವಿಶ್ವಾಸಗಳನ್ನು ಹೊಡೆದೋಡಿಸುವ ಹಟ ಅವಳದು. ಆದರೂ ವಶೀಕರಣ ಶಕ್ತಿ ಇದೆಯೆಂದು ಹೇಳಿ ಮಧ್ಯರಾತ್ರಿಯಲ್ಲಿ ಕಪ್ಪುಬೆಕ್ಕನ್ನು ಬೇಯಿಸಿ, ಅದರ ಎಲಬು ತೆಗೀತಾಳೆ.'

*　　*　　*　　*

ಸಾಹಿತ್ಯದ ಬಗ್ಗೆ ಚೆಕಾವ್‌ನಿಗೆ ತುಂಬಾ ಆಸಕ್ತಿ. ಅದು ಬೆಳೆಯ ಬೇಕೆಂದು ಎಷ್ಟೋ ಪ್ರಯತ್ನಪಡುತ್ತಿದ್ದ. ಅದ್ಭುತ ಸಹನೆಯಿಂದ 'ಎಳೆ' ಲೇಖಕರು ಬರೆದುದನ್ನು ಓದುತ್ತಿದ್ದ.

ನಮ್ಮಲ್ಲಿಯ ಸಾಹಿತಿಗಳ ಸಂಖ್ಯೆ ಬೆಳೆಯಬೇಕು. ಸಾಹಿತ್ಯಕ್ಕೆ ನಮ್ಮಲ್ಲಿ ಇನ್ನು ಹೊಸ ಪರಿ. ನಾರ್ವೆಯಲ್ಲಿ ಪ್ರತಿ ಇನ್ನೂರು ಇಪ್ಪತ್ತಾರು ಜನಕ್ಕೆ ಒಬ್ಬ ಲೇಖಕನಿದ್ದಾನೆ. ಅದೇ ರಷ್ಯಾದಲ್ಲಿ ಹತ್ತುಲಕ್ಷಕ್ಕೊಬ್ಬ.'

*　　*　　*　　*

ಚೆಕಾವ್ ಸ್ವತಃ ಡಾಕ್ಟರು. ಬೇರೆಯವರಿಗೆ ರೋಗ ಔಷಧ ಕೊಡ ಬಲ್ಲನಾಗಲಿ, ವೈದ್ಯನಿಗೆ ತನಗೇ ಖಾಯಿಲೆಯಾದಲ್ಲಿ ಅನುಭವಿಸುವುದು ಕಷ್ಟ. ರೋಗಿಗೆ ಖಾಯಿಲೆಯ ನೋವು ಮಾತ್ರ ಅನುಭವವಾಗುತ್ತದೆ. ಆದರೆ ವೈದ್ಯ ನಿಗೆ ದೇಹದ ಒಂದೊಂದು ಕೀಲು ಸಡಿಲುತ್ತಿರುವುದೂ ಗೊತ್ತಾಗುತ್ತದೆ. ಅಂಥ ಸಂದರ್ಭದಲ್ಲಿ ಅವನ ವೈದ್ಯಕೀಯ ಜ್ಞಾನವೇ ಅವನ ಸಾವನ್ನು ಹತ್ತಿರ ತಂದಿತೆಂದರೆ ಸುಳ್ಳಾಗದು.

* * * *

ಚೆಕಾವ್‌ನ ಕಣ್ಣುಗಳನ್ನು ಅವನು ನಕ್ಕಾಗ ನೋಡಬೇಕು: ಹೆಣ್ಣಿನ ಕಣ್ಣಿನಷ್ಟು ಮೃದುವಾಗುತ್ತಿದ್ದವು, ಕೋಮಲವಾಗುತ್ತಿದ್ದವು. ಆ ನಗುವೂ ಅಷ್ಟೆ: ಸದ್ದಾಗದ ನಗು. ವೈಮರೆತು ನಗುತ್ತಿದ್ದ; ಅದೊಂದು ಬಗೆಯ-ಹಾಗೆನ್ನಬಹುದಾದರೆ - ದೈವಿಕ ನಗು. ಮತ್ತಾರೂ ಹಾಗೆ ನಗುವುದನ್ನು ನಾ ನೋಡಿಲ್ಲ. ಹೊಲಸು ಕಥೆ ಕೇಳಿ ಚೆಕಾವ್ ಎಂದೂ ನಗುತ್ತಿರಲಿಲ್ಲ.

ತನ್ನ ರಮ್ಯರೀತಿಯಲ್ಲಿ ನಗುತ್ತಾ ಚೆಕಾವ್ ಒಂದು ದಿನ ಹೇಳಿದ:

'ಟಾಲ್‌ಸ್ಟಾಯ್ ಏಕೆ ನಿನ್ನನ್ನು ಕಂಡರೆ ಗಳಿಗೆಗೊಂದು ಸಲ ಬದಲಾಯಿಸುತ್ತಾರೆ ಗೊತ್ತೆ? ಅವರಿಗೆ ಹೊಟ್ಟೆಕಿಚ್ಚು. ಸ್ಯೂಲೆರ್ ಜಿಟ್‌ಸ್ಕಿ ಅವರನ್ನು ಪ್ರೀತಿಸುವುದಕ್ಕಿಂತ ಹೆಚ್ಚಾಗಿ ನಿನ್ನನ್ನು ಪ್ರೀತಿಸುತ್ತಾರೆ; ಅದಕ್ಕೇ ಅವರಿಗೆ ನಿನ್ನನ್ನು ಕಂಡರೆ ಅಸೂಯೆ. ನಿನ್ನೆ ನನಗೆ ಹೇಳಿದರು: 'ಗಾರ್ಕಿಯನ್ನು ನಾನು ಹೃತ್ಪೂರ್ವಕವಾಗಿ ಪ್ರೀತಿಸಲಾರೆ; ಏಕೋ ಏನೋ ನನಗೆ ಗೊತ್ತಿಲ್ಲ. ಆದರೂ ನಾನು ಅವನನ್ನು ಪ್ರೀತಿಸಲಾರೆ. ಸ್ಯೂಲರ್ ಅವನ ಜೊತೆಯಲ್ಲಿರುವುದು ಕೂಡಾ ನನಗೆ ಇಷ್ಟವಿಲ್ಲ. ಅವನಿಗೇ ಅದು ಒಳ್ಳೆಯದಲ್ಲ. ಗಾರ್ಕಿ ಕರುಣೆ ಇಲ್ಲದವನು. ಯಾವುದೋ ಪರದೇಶದಲ್ಲಿ ಒಲ್ಲದ ಮನಸಿನಿಂದ ಇರುವಂತೆ ಇದಾನೆ. ಅವನದು ಗೂಢಚಾರನ ಆತ್ಮ. ಇಲ್ಲಿಯ ಎಲ್ಲವನ್ನು, ಎಲ್ಲರನ್ನು ನೋಡುತ್ತಾನೆ; ತನ್ನ ದೇವರಿಗೆ ಅದನ್ನು ವರದಿ ಮಾಡುತ್ತಾನೆ. ಅವನ ದೇವರು ಒಬ್ಬ ರಾಕ್ಷಸ; ಹಳ್ಳಿಹೆಂಗಸರ ಕಥೆಗಳಲ್ಲಿ ಬರುತ್ತದಲ್ಲ ಅಂಥದು.'

ಕಣ್ಣಲ್ಲಿ ನೀರು ಬರುವಷ್ಟು ನಕ್ಕ; ನನಗೆ ಇದನ್ನು ಹೇಳುವಾಗ ಚೆಕಾವ್ ಕಣ್ಣಿಂದ ಇಳಿಯುತ್ತಿದ್ದ ನೀರನ್ನು ಒರೆಸಿಕೊಳ್ಳುತ್ತಾ ತನ್ನ ಮಾತು ಮುಂದುವರಿಸಿದ:

'ನಾನು ಅವರಿಗೆ 'ಗಾರ್ಕಿ ದಯಾಳು!' ಎಂತ ಹೇಳಿದೆ. ಅದಕ್ಕವರು 'ಉಹು. ಅವನ ವಿಷಯ ಎಲ್ಲ ನನಗೆ ಗೊತ್ತಿದೆ. ಒಳ್ಳೆ ಬಾತಿನಂಥ ಮೂಗು ಅವನದು. ಕ್ರೂರಿಗಳಿಗೆ, ದುಃಖಿಗೆ ಮಾತ್ರವೆ ಅಂಥ ಮೂಗಿರುತ್ತದೆ ಹೆಂಗಸರಿಗೆ ಕೂಡಾ ಅವನ ಮೇಲೆ ಪ್ರೀತಿಯಿಲ್ಲ. ಹೆಂಗಸರು ನಾಯಿಗಳಿದ್ದ ಹಾಗೆ: ಒಳ್ಳೆಯವನ ವಾಸನೆ ಬೇಗ ಹಿಡಿಯುತ್ತಾರೆ. ಸ್ಯೂಲರ್ - ಅವನ ವಿಚಾರವೇ ಬೇರೆ - ಯಾರನ್ನು ಬೇಕಾದರೂ ನಿರಾಸಕ್ತಿಯಿಂದ ಪ್ರೀತಿಸಬಲ್ಲ. ಆ ಸುಗುಣ ಅವನಿಗಿದೆ. ಅದರಲ್ಲಿ ಅವನನ್ನು ಬಿಟ್ಟರೆ ಮತ್ತೊಬ್ಬರಿಲ್ಲ. ಹೇಗೆ ಪ್ರೀತಿಸಬೇಕೆಂಬುದು ಗೊತ್ತಾದರೆ - ಎಲ್ಲಾ ಗೊತ್ತಾದ ಹಾಗೇ.'

ಒಂದು ಗಳಿಗೆ ಸುಮ್ಮನಿದ್ದು ಚೆಕಾವ್ ಮತ್ತೆ ಹೇಳಿದ: 'ನಿಜವಾಗಿಯೂ ಆ ಮುದುಕನಿಗೆ ನಿನ್ನನ್ನು ಕಂಡರೆ ಅಸೂಯೆ ... ಅಬ್ಬಾ' ಎಂಥ ಮುದುಕ!'

* * * *

ಟಾಲ್‌ಸ್ಟಾಯ್ ವಿಚಾರ ಮಾತನಾಡುವಾಗಲೆಲ್ಲಾ ಚೆಕಾವನ ಕಣ್ಣಿನಲ್ಲಿ ಕಾಣಿಸದಷ್ಟು ಕೋಮಲವಾದ ನಗೆ ಕಾಣುತ್ತಿತ್ತು. ಯಾವುದೋ ರಹಸ್ಯ ಕಿನ್ನರ ವಿಷಯ ಮಾತನಾಡುವ ಹಾಗೆ ಮಾತನಾಡುತ್ತಿದ್ದ. ಟಾಲ್‌ಸ್ಟಾಯ್ ಆಡಿದ ಮಾತನ್ನೆಲ್ಲ ಬರೆದುಕೊಳ್ಳುವವರಿಲ್ಲವಲ್ಲಾ ಎಂದು ಪಶ್ಚಾತ್ತಾಪ ಪಡುತ್ತಿದ್ದ. ಆ ಮುದಿ ಮಾಟಗಾರನ ಮಾತುಗಳನ್ನೆಲ್ಲ ಬರೆದುಕೊಂಡರೆ—

'ನೀನೀ ಕೆಲಸ ಮಾಡಬೇಕು' ಒಂದು ಸಲ ಚೆಕಾವ್ ಸ್ಯೂಲೆರ್ ಜಿಟ್ಸ್ಕಿಗೆ ಹೇಳಿದ: 'ಟಾಲ್‌ಸ್ಟಾಯ್‌ಗೆ ನಿನ್ನ ಮೇಲೆ ತುಂಬಾ ಪ್ರೀತಿಯಿದೆ. ನಿನ್ನ ಕೈಲಿ ಅಷ್ಟು ಚೆನ್ನಾಗಿ, ಎಷ್ಟೊಂದು ಮಾತಾಡುತಾರೆ.'

ಸ್ಯೂಲರ್‌ನ ವಿಷಯವಾಗಿ ಒಂದು ಸಲ ಚೆಕಾವ್ ನನಗೆ ಹೇಳಿದ: 'ಜಾಣ ಕೂಸು ಸ್ಯೂಲರ್' ಎಷ್ಟು ನಿಜ ಈ ಮಾತು!

* * * *

ಒಂದು ದಿನ ಟಾಲ್‌ಸ್ಟಾಯ್ ಚೆಕಾವನ ಒಂದು ಕಥೆಯನ್ನು - 'ಡೂಷೆಂಕಾ' ಇರಬೇಕು - ವೈಮರಿತು ಹೊಗಳುತ್ತಿದ್ದರು. "ಅದು ಮದುವೆಯಾಗದ ಕನ್ಯೆ ಹಾಕಿದ ರೇಶಿಮೆ ಅಂಚಿನ ಹಾಗಿದೆ. ಹಿಂದಿನ ಕಾಲದಲ್ಲಿ

ಅಂಥ ಲೇಸು ಅಂಚು ಕಸೂತಿ ಮಾಡುತ್ತಿದ್ದರಂತೆ; ಅದರಲ್ಲಿ ತಮ್ಮ ಬಾಳು, ಸುಖದ ಕನಸು ಎಲ್ಲವನ್ನು ನೇಯುತ್ತಿದ್ದರಂತೆ. ಅದರಲ್ಲೇ ತಮ್ಮ ಕನಸನ್ನು ಕಂಡು, ತಮ್ಮ ಅನಿಶ್ಚಿತ ಒಲವನ್ನು ದಾರದಲ್ಲಿ ರೂಪಿಸುತ್ತಿದ್ದರಂತೆ. ಹಾಗೇ ಇದೆ ಚೆಕಾವನ ಕಥೆ."

ಕಣ್ಣುತುಂಬಾ ನೀರಿಟ್ಟುಕೊಂಡು ಟಾಲ್‌ಸ್ಟಾಯ್ ಈ ಮಾತು ಹೇಳಿದರು. ಅದೇ ದಿನ ಚೆಕಾವ್‌ಗೆ ಸ್ವಲ್ಪ ಜ್ವರ ಬಂದಿತ್ತು. ಜ್ವರದ ಕಾವಿನಿಂದ ಮುಖ ಕೆಂಪಾಗಿತ್ತು. ತಲೆ ಬಗ್ಗಿಸಿಕೊಂಡು, ಕನ್ನಡಕ ಒರೆಸುತ್ತ ಕೂತಿದ್ದ. ಬಹಳ ಹೊತ್ತು ಸುಮ್ಮನಿದ್ದು, ಆಮೇಲೆ ದೀರ್ಘವಾಗಿ ನಿಟ್ಟುಸಿರಿಟ್ಟು, ಮೆತ್ತಗೆ ಹೇಳಿದ:

'ಅಚ್ಚಿನ ತಪ್ಪು ಬೇಕಾದಷ್ಟಿದೆ ಅದರಲ್ಲಿ ........'

* * * *

ಚೆಕಾವನ ವಿಷಯವಾಗಿ ಬೇಕಾದಷ್ಟು ಬರೆಯಬಹುದು. ಆದರೆ ಅದಕ್ಕೆ ಸೂಕ್ಷ್ಮವಾದ ಕುಂಚದ ಕೆಲಸ ಮಾಡಬಲ್ಲ ಶಕ್ತಿ ಬೇಕು; ಆ ಶಕ್ತಿ ನನಗಿಲ್ಲ. ಚೆಕಾವ್ ತನ್ನ ರಷ್ಯನ್ ರೀತಿಯ ದುಃಖಮಿಡಿವ, ಹಗುರಾದ, ವಿಚಿತ್ರ ವಾತಾವರಣದ ಕಥೆ 'ಹುಲ್ಲುಗಾವಲು'ನ ಬಗ್ಗೆ ಹೇಳಿದುದನ್ನೇ ಅವನ ಬಗ್ಗೆ ಹೇಳಬಹುದು. ತನಗಾಗಿ - ಒಂದು ಕಥೆ. ಅಂಥವರನ್ನು ನೆನೆಯುವುದರಿಂದಲೂ ಒಳ್ಳೆಯದಾದೀತು. ಅದರಿಂದ ಬಾಳಿನ ಅರ್ಥ ಸ್ಪಷ್ಟವಾಗುತ್ತದೆ; ಬಾಳಿನಲ್ಲಿ ಹೊಸ ಶಕ್ತಿ ಚಿಮ್ಮುತ್ತದೆ.

(ಮನುಷ್ಯ ಎಷ್ಟೇ ದೋಷವಿದ್ದರೂ, ಎಷ್ಟೇ ಪಾಪಮಾಡಿದರೂ, ಅವನೇ ಜಗದ್ರಥದ ಅಚ್ಚು. ನಮ್ಮ ಸುತ್ತಲವರ ಪ್ರೇಮಕ್ಕಾಗಿ ನಾವೆಲ್ಲಾ ಹಸಿದಿದ್ದೇವೆ. ಹಸಿದವನಿಗೆ ಅರೆಬೆಂದ ರೊಟ್ಟಿಯೇ ಮಿಠಾಯಿ!)

## ೧೦. ಕ್ರಾಂತಿಯ ಕಿರುಚಿತ್ರಗಳು

ಈ ವರ್ಷದ ವಸಂತ ಋತುವಿನಲ್ಲಿ. ಚಳಿಯಡಗಿ ಕಾವು ಮೂಡಿದ ಮೊದಲ ದಿನಗಳಲ್ಲಿ ವಿಚಿತ್ರ ಜನ ಓಡಾಡುತ್ತಿದ್ದರು ಪೆಟ್ರೋಗ್ರಾಡಿನ ರಸ್ತೆಗಳಲ್ಲಿ. ಇಲ್ಲಿಯವರೆಗೂ ಎಲ್ಲಿದ್ದರೋ ಈ ಜನ? ಜಗತ್ತಿನಿಂದ ತುಚ್ಛೀಕರಿಸಲ್ಪಟ್ಟು ಮುರಿದ ಹಳೆ ಒಂಟಿ ಗಾಡಿಖಾನೆಗಳಲ್ಲೆಲ್ಲೋ ಇದ್ದಿರಬೇಕು; ಸಂಶ

ಯುವೇ ಇಲ್ಲ ಇದರಲ್ಲಿ. ಅವರನ್ನು ನೋಡಿದಾಗಲ್ಲೆಲ್ಲ ನನ್ನ ಮನಸ್ಸಿನಲ್ಲೊಂದು ಭಾವ ತಪ್ಪದೆ ಮೂಡುತ್ತಿತ್ತು. ಏನನ್ನೋ ಮರೆತು, ಅದನ್ನು ಹುಡುಕಿಕೊಂಡು ಮೌನವಾಗಿ ಊರಲ್ಲೆಲ್ಲಾ ಅಲೆಯುತ್ತಿದ್ದಾರಿವರು ಅನಿಸುತ್ತಿತ್ತು.

ದಿನಗಳೆದು ಹರಿದು ಚಿಂದಿಯಾದ ಬಟ್ಟೆ ಅವರ ಮೈಮೇಲೆ; ಮೈ ಕೂಡಾ ಬಟ್ಟೆಯಷ್ಟೇ ಕೊಳೆ. ಅವರ ಹಸಿವು ಸ್ಪಷ್ಟವಾಗೇ ಕಾಣುತ್ತಿತ್ತಾಗಲೀ, ಅವರೇನೋ ಭಿಕ್ಷುಕರಲ್ಲ; ತಿರುಪೆಯನ್ನಾರೂ ಬೇಡುತ್ತಲೂ ಇರಲಿಲ್ಲ. ಮಾತನಾಡದೆ ತುಂಬಾ ಹುಷಾರಾಗಿ, ಅಕ್ಕಪಕ್ಕದಲ್ಲಿ ಓಡಾಡುವವರನ್ನು ಸಂಶಯದಿಂದ ನೋಡುತ್ತಾ ನಡೆಯುತ್ತಿದ್ದರು. ಅಂಗಡಿಯ ಕಿಟಕಿಗಳೆದುರು ನಿಂತು ಒಳಗೆ ಪ್ರದರ್ಶಿಸಿದ್ದ ವಸ್ತುಗಳನ್ನು, ಅವು ಯಾವು, ಅದರಿಂದೇನು ಪ್ರಯೋಜನ, ಎಂಬುದನ್ನು ಶೋಧಿಸುತ್ತ, ಇಲ್ಲ ಜ್ಞಾಪಿಸಿಕೊಳ್ಳುತ್ತಾ ನಿಂತು ಬಿಡುತ್ತಿದ್ದರು. ಮೋಟಾರುಗಳನ್ನು ಕಂಡರೆ ಅವರಿಗೆ ಹೆದರಿಕೆ – ಈಗ ಇಪ್ಪತ್ತು ವರ್ಷದ ಕೆಳಗೆ ಹಳ್ಳಿಗಾಡಿನ ಹೆಣ್ಣು ಗಂಡುಗಳು ಅದನ್ನು ಕಂಡು ಹೆದರುತ್ತಿರಲಿಲ್ಲವೇ – ಹಾಗೆ.

* * * *

ಉದ್ದನಾಗಿ, ಕಪ್ಪು ಮೋರೆಯ, ಗುಳಿಬಿದ್ದ ಕಣ್ಣುಗಳ, ಗರುಡಮೂಗಿನ, ಹಸಿರು ಛಾಯೆಯ ಗಡ್ಡದ ಮುದುಕನೊಬ್ಬ ತನ್ನ ತೂತುಬಿದ್ದು ಮುದುರಿಕೊಂಡ ಹ್ಯಾಟನ್ನೆತ್ತಿ, ದೂರ ಸಾಗುತ್ತಿರುವ ಮೋಟಾರಿನ ಕಡೆ ಕೈ ಎತ್ತಿ ತೋರಿಸುತ್ತಾ ಪಕ್ಕದಲ್ಲಿದ್ದ ಹಾದಿಗನನ್ನು

'ಅದು ವಿದ್ಯುಚ್ಛಕ್ತಿ....ಹಾ ...ಥ್ಯಾಂಕ್ ಯು ' ಎನ್ನುತ್ತಾನೆ

ಎದೆ ಮುಂದುಮಾಡಿಕೊಂಡು, ತಲೆ ಎತ್ತಿಕೊಂಡು, ಎದುರಿಗೆ ಬರುತ್ತಿರುವವರಿಗೆ ದಾರಿಬಿಡದೆ, ಅರೆಮುಚ್ಚಿದ ಕಣ್ಣುಗಳಲ್ಲಿ ತಿರಸ್ಕಾರದ ನೋಟದಲ್ಲಿ ನೋಡುತ್ತಾ ನಡಿಯುತ್ತಾನೆ. ಅವನದು ಬರಿಗಾಲು; ನಡೆಯುವಾಗ ರಸ್ತೆಯ ಕಲ್ಲಿನ ಶಕ್ತಿ ಪರೀಕ್ಷಿಸುವಂತೆ, ಬೆರಳಿನಿಂದ ಕಲ್ಲನ್ನೊತ್ತಿ ನಡೆಯುತ್ತಾನೆ. ಇಷ್ಟರಲ್ಲೇ ಒಬ್ಬ ಸೋಮಾರಿ, ಪೋಲಿ, ಮುದುಕನಿಗೆ ಗಂಟುಬಿದ್ದ.

'ನೀನು ಯಾರಜ್ಜ?'

'ನಾನೂ ಒಬ್ಬ ರಷಿಯನ್.'
'ಏನು ಮಾಡುತ್ತಾ ಇದ್ದೆ ?'
'ಸೈನ್ಯದಲ್ಲಿದ್ದೆ.'
ಮುದುಕ ಯುವಕನನ್ನು ಪರೀಕ್ಷಿಸುವಂತೆ ನೋಡುತ್ತಾ,
'ನೀನೇನು ಕ್ರಾಂತಿ ಮಾಡುತ್ತಿದೀಯೋ ?'
'ಮಾಡಿದ್ದೂ ಆಯಿತು, ಮುಗಿಸಿದ್ದೂ ಆಯಿತು.'

ಮುದುಕ ಯುವಕನನ್ನು ಬಿಟ್ಟು ಪಕ್ಕದಲ್ಲಿದ್ದ ಸೆಕೆಂಡ್‌ಹ್ಯಾಂಡ್ ಪುಸ್ತಕಗಳ ಅಂಗಡಿಯ ಕಿಟಕಿಯ ಕಡೆ ಎಡಗೈಯ್ಯಲ್ಲಿ ಗಡ್ಡವನ್ನು ಬಲವಾಗಿ ಹಿಡಿದುಕೊಂಡು ನೋಡುತ್ತಾ ನಿಂತ. ಅಲ್ಲೇ ಸುತ್ತಾಡುತ್ತಿದ್ದ ಪೋಲಿ ಮತ್ತೆ ನನ್ನೋ ಕೇಳಿದ; ಮುದುಕ ಅವನ ಕಡೆ ತಿರುಗಿಕೂಡ ನೋಡದೆ, ಶಾಂತ ವಾದ ಕೆಳದನಿಯಲ್ಲಿ...." ಹೋಗಾಚೆ " ಎಂದ.

* * * *

ಸ್ವೆಮೆನೋವ್‌ಸ್ಕಿ ರಸ್ತೆಯಲ್ಲಿ, ಚರ್ಚಿನ ಬಾಗಿಲಿಗೆ ಒತ್ತಿಕೊಂಡು ನಿಂತಿದ್ದಾಳೆ ನಲ್ವತ್ತು ವರ್ಷದ ಹೆಣ್ಣುಮಗಳೊಬ್ಬಳು. ಕಣ್ಣೇ ಕಾಣಿಸದಷ್ಟು ಅವಳ ಹಳದಿಬಣ್ಣದ ಮುಖ ಊದಿಕೊಂಡಿದೆ; ಏದುತ್ತಿರುವಂತೆ ಬಾಯಿ ತೆರೆದಿದೆ. ಬರಿಗಾಲಿಗೆ ದೊಡ್ಡ ಬೂಡ್ಸುಗಳನ್ನು ಹಾಕಿಕೊಂಡಿದ್ದಾಳೆ. ಅದರ ಮೇಲು ಭಾಗವೆಲ್ಲ ಒಣಗಿದ ಕೆಸರಿನಿಂದ ಮುಚ್ಚಿಹೋಗಿದೆ. ತೆಳುವಾದ ಗಂಡಸಿನ ಗೌನು ಮೈಮುಚ್ಚಿದೆ. ಕೈಕಟ್ಟಿಕೊಂಡಿದ್ದಾಳೆ. ತಲೆ ಮೇಲೊಂದು ಹುಲ್ಲಿನ ಹ್ಯಾಟು. ಅದರ ಮೇಲೆ ಮುದುರಿದ ಎಲೆ, ಒಂದು ಚೆರಿ-ಹೂವು ಹಿಂದೊಂದು ಕಾಲದಲ್ಲಿ ಚೆರಿ ಹೂಗಳದೊಂದು ಗೊಂಚಲೇ ಇತ್ತು ಹ್ಯಾಟಿನ ಮೇಲೆ. ಈಗಲ್ಲಿ ಹೂವೆಲ್ಲಾ ಉದುರಿಹೋಗಿವೆ: ಇದೊಂದನ್ನು ಬಿಟ್ಟರೆ ಉಳಿದವೆಲ್ಲ ಬರೀ ಗಾಜಿನಂತ ಹೊಳೆವ ತೊಟ್ಟುಗಳು ಮಾತ್ರ.

ಟ್ರಾಂ ಕಾರುಗಳಲ್ಲಿ ನುಗ್ಗಾಡುತ್ತಾ, ಪ್ಲಾಟ್‌ಫಾರಂಗಳ ಮೇಲೆ ಧುಮು ಕುತ್ತಾ, ಧುಮುಕಿದೊಡನೆ ಚದುರುತ್ತಿರುವ ಜನರನ್ನು ಸುಂದರವಾದ ಹುಬ್ಬನ್ನು ಗಂಟುಹಾಕಿಕೊಂಡು ನೋಡುತ್ತಿದ್ದಳು. ಜನರನ್ನೆಣಿಸುತ್ತಿದ್ದಂತೆ ತುಟಿ ಅಲ್ಲಾಡುತ್ತಿತ್ತು. ಅಥವಾ ಯಾರನ್ನಾದರೂ ಕಾಯುತ್ತ, ಆ ವ್ಯಕ್ತಿ ಯನ್ನು ಕಂಡೊಡನೆ ಹೇಳಬೇಕಾದ ಮಾತು ಅಭ್ಯಾಸ ಮಾಡುತ್ತಿದ್ದಳೋ

ಏನೋ ! ಊದಿಕೊಂಡ ಕೆಂಪು ಕಣ್ಣಿನ ಕಂಡಿಗಳಿಂದ, ನಿಷ್ಠುರ ಕ್ರೂರ ಇರಿವ ನೋಟ ಮಿಂಚುತ್ತಿತ್ತು. ಸಿಗರೇಟು ಮಾರಲು ಬಂದ ಪೋಲೀ ಹುಡುಗರನ್ನು ತಿರಸ್ಕಾರದಿಂದ ದೂರ್ದೂಡುತ್ತಿದ್ದಳು. ಎಷ್ಟೋ ಸಾರಿ ಕೈಯಿಂದಾಗಲಿ, ಕಾಲಿನಿಂದಾಗಲಿ ದೂರ ದೂಡಿಬಿಟ್ಟಿದ್ದಳು ಅವರನ್ನು. ಕೆಳದನಿಯಲ್ಲಿ ಯಾರೋ ಕೇಳಿದಳು.

"ಏನಾದರೂ ಸಹಾಯ ಬೇಕಿತ್ತೆ!"

"ಕ್ಷಮಿಸಿ....... "

ಅವನ ಪಕ್ಕದಲ್ಲೇ ಗಿಡ್ಡನಾದ ಲೇಸಿನ ಟೋಪಿ ಹಾಕಿಕೊಂಡ ಮುದುಕಿಯೊಬ್ಬಳು ಸಣಬು ಮಣ್ಣಿನಿಂದ ಮಾಡಿದ ಕಜ್ಜಾಯ ಮಾರುತ್ತಿದ್ದಳು. ಈ ವಿಚಿತ್ರ ಹೆಂಗಸು ಆಕೆಯನ್ನು ಕೇಳಿದಳು :

'ನೀನು -- ಶ್ರೀಮಂತಳೇನು ?'

'ಅಲ್ಲ. ವರ್ತಕರಾಕೆ.'

'ಓ ! ಹಾಗೇ. ಈ ಊರಿನಲ್ಲಿ ಎಷ್ಟು ಜನ ಇದ್ದಾರೆ.'

'ನನಗೆ ಗೊತ್ತಿಲ್ಲ, ಬೇಕಾದಷ್ಟು ಜನ ಇದಾರೆ ಇಲ್ಲಿ.'

'ನಿಜ, ನಿಜ, ವಿಪರೀತ ಜನ ಇದ್ದಾರೆ ಇಲ್ಲಿ.'

'ನೀನು ಈ ಊರಿಗೆ ಹೊಸಬಳೇನು ?'

'ಊಹು. ನಾನು ಇದೇ ಊರಿನವಳೆ '

ಮುದುಕಿಯ ಮಾತಿಗೆ ತಲೆಹಾಕಿ ತೂಗಾಡುತ್ತ, ಕೊಳೆ ತುಂಬಿದ ಕಾಲಿನಿಂದ ಜಾರಿ ಬೀಳುತ್ತಿದ್ದ ಆ ಬೂಡ್ಸುಗಳನ್ನು ಎಳೆದುಕೊಳ್ಳುತ್ತಾ ಚೌಕದ ಕಡೆ ಹೊರಟಳು .... ...

ಈಗವಳು ಚೌಕದ ಹಿಂದಿನ ಉದ್ಯಾನದ ಕಲ್ಲುಬೆಂಚಿನ ಮೇಲೆ ಕೂತಿದಾಳೆ; ಅವಳ ಪಕ್ಕದಲ್ಲೇ ಕಟ್ಟಿಗೆ ಊರಿಕೊಂಡು, ಕಲ್ಲಿನಲ್ಲಿ ಕಡಿದಂಥ ಮುಖದ ಮುದುಕಿಯೊಬ್ಬಳು ಕಪ್ಪು ಕನ್ನಡಕ ಹಾಕಿಕೊಂಡು, ಹರಿದು ಚಿಂದಿಯಾದ ರೇಶಿಮೆ ಲಂಗ, ತೂತುಬಿದ್ದು ಬಣ್ಣಗೆಟ್ಟ ತುಪ್ಪಳದ ಕೋಟು ಹಾಕಿಕೊಂಡು ನಿಂತಿದಾಳೆ, ಗಟ್ಟಿಯಾಗಿ ಉಸಿರುಬಿಡುತ್ತಾ.

ಹೋಗ ಹೋಗುತ್ತಾ ಗೊಗ್ಗರ ಧನಿ, ಕತ್ತರಿಸುವಂಥ ಮಾತು ಕೇಳಿಸಿದವು.

'ಕಡೆ ಒಳ್ಳೆ ಮನುಷ್ಯ, ಸಾಭ್ಯಸ್ತ. ಸತ್ತು ಹತ್ತೊಂಭತ್ತು ವರ್ಷ ವಾಯಿತು.'

ಕಿವುಡು ಕಪ್ಪೋತಿ ಮುದುಕಿ ಅರಚಿದಳು :

'ನ್ಯಾಯಾಲಯ ಸುಟ್ಟುಹೋಯಿತು ; ಪೂರಾ ಪೂರಾ ಬೂದಿಯಾಯಿತು. ಬರೀಗೋಡೆ ಮಾತ್ರ ಉಳಿದಿವೆ. ನಾ ಹೋಗಿ ನೋಡಿಕೊಂಡು ಬಂದೆ. ದೇವರ ಶಾಪ ! ಎಂದಾದರೂ ತಪ್ಪೀತೇ ?'

ದೊಗಲೆ ಬೂಡ್ಸು ಹಾಕಿಕೊಂಡ ಹೆಂಗಸು ಅವಳ ಕಡೆ ವಾಲಿ, ಮುದುಕಿಯ ಕಿವಿಯಲ್ಲಿ ಅರಚಿದಳು :

'ನನ್ನವರೆಲ್ಲಾ ಜೈಲಿನಲ್ಲಿದಾರೆ. ಎಲ್ಲಾ.'

ನನಗೇನೋ ಅವಳು ನಗುತ್ತಿರುವ ಹಾಗೇ ಕಾಣಿಸಿತು.

* * * *

ಅವನೊಬ್ಬ ಕುಳ್ಳ ಮನುಷ್ಯ, ತೀರಾ ಕುಳ್ಳ. ಅವನ ಮುಂದೆ, ಬೆಂಚಿನ ಮೇಲೆ ಸೂರ್ಯಕಾಂತಿ ಬೀಜ ಮೆಲ್ಲುತ್ತಾ ನಿಂತಿದ್ದಾರೆ ಮೂರು ಜನ ಸೈನಿಕರು ; ಹೊಟ್ಟನ್ನು ಮಾತನಾಡುತ್ತಿರುವವನ ಮೇಲೆ ಉಗುಳುತ್ತಿದ್ದಾರೆ. ನಾಲ್ಕನೆಯವನೊಬ್ಬ, ಕೆನ್ನೆಯಲ್ಲಿ ಕೆಂಪು ಗಾಯದ ಗುರ್ತು, ಸಿಗರೇಟು ಸೇದುತ್ತಾ ಹೊಗೆ – ಉಂಗುರಗಳನ್ನು ಮಾತನಾಡುವವನ ಮೂಗಿನ ಮೇಲೆ ಬಿಡುವ ಹವ್ಯಾಸದಲ್ಲಿ ತೊಡಗಿದಾನೆ. ಕುಳ್ಳ ಹೇಳಿದ :

'ನಮ್ಮಲ್ಲಿ, ಜನರಲ್ಲಿ, ಉತ್ತಮ ಜೀವನದ ಆಶೆಯನ್ನು ಹುಟ್ಟಿಸುವುದು ಶುದ್ಧ ಅಪ್ರಯೋಜಕ ಎಂದು ನಾನು ಸಾರುತ್ತೇನೆ ; ಇದು ಪಿಶಾಚಿಯಂಥ ಕ್ರೂರತನ ; ನಿಧಾನವಾಗಿ ಉರಿಯುವ ಬೆಂಕಿಯ ಮೇಲೆ ಮನುಷ್ಯರನ್ನು ಹುರಿದಂತೆ ........'

ಸಿಗರೇಟಿನ ತುದಿಯಮೇಲೆ ಉಗುಳಿ, ಬೆರಳುಗಳಿಂದ ಅದನ್ನು ಮೇಲಕ್ಕೆ ಚಿಮ್ಮಿ, ಕಾಲಗಲಿಸಿ ಸೈನಿಕ ಕೇಳಿದ,

'ಯಾರ ಬಾಡಿಗೆ ಆಳು ನೀನು ?'

'ಏನು ? ನಾನೆ ?'

'ಹೌದು. ನೀನೆ. ನೀನು ಯಾರ ಬಾಡಿಗೆ ಆಳು ?

'ಬಾಡಿಗೆ ಆಳು' ಎಂದರೆ ನಿನ್ನ ಅರ್ಥವೇನು?'

'ನಾನು ಹೇಳಿದ್ದೆ ಅದರ ಅರ್ಥ. ಶ್ರೀಮಂತರಿಗೋ ಇಲ್ಲವೇ ಯಹೂದಿಗಳಿಗೋ?'

ಅರ್ಥವಾಗದೆ ತಬ್ಬಿಬ್ಬಾಗಿ, ಮಾತು ನಿಲ್ಲಿಸಿದ ಸೈನಿಕರಲ್ಲೊಬ್ಬ ಕಡೆಯಲ್ಲಿ ಮಾತಾಡಿದವನಿಗೆ ಬೇಜಾರಿನಿಂದ ಹೇಳಿದ.

"ಕೊಡೊ 'ಅವನ ಹೊಟ್ಟೆ ಮೇಲೊಂದೇಟು', 'ಹೇಳ್ಕೊಳ್ಳೊ ಅಂತ ಹೊಟ್ಟೆಯೇ ಇಲ್ಲವಲ್ಲ ಅವನಿಗೆ" ಮತ್ತೊಬ್ಬನ ಉತ್ತರ.

ಸಣ್ಣಮನುಷ್ಯ ಹಿಂದೆ ಸರಿಯುತ್ತಾನೆ; ಕೈಗಳನ್ನು ಜೇಬಿನಲ್ಲಿ ತುರುಕುತ್ತಾನೆ; ಮತ್ತೆ ಆವನ್ನ ಹೊರಗೆಳೆಯುತ್ತಾನೆ; ಅವನ್ನ ಬಲವಾಗಿ ಅದುಮಿಕೊಂಡು ಹೇಳಿದ:

"ನನ್ನಮಟ್ಟಿಗೆ ಮಾತ್ರ ನಾನು ಮಾತಾಡುತ್ತೇನೆ. ನಾನು ಯಾರಿಗೂ ಬಾಡಿಗೆ ಆಳಲ್ಲ. ನಾನೂ ಕೂಡ ಯೋಚಿಸಿದ್ದೇನೆ, ಓದಿದ್ದೇನೆ, ನಂಬಿದ್ದೇನೆ. ಆದರೆ ನನಗೀಗ ತಿಳಿದಿದೆ; ಮನುಷ್ಯ ಮನುಷ್ಯನಾಗಿರುವುದು ಕೆಲ ಕಾಲ ಮಾತ್ರ, ಪ್ರತಿಯೊಂದೂ ಕೊನೆಗಾಣಲೇಬೇಕು, ಅನಂತರ ಅವನು ........"

ಕೆನ್ನೆಯಲ್ಲಿ ಗಾಯವಾಗಿದ್ದ ಸೈನಿಕ ಗಟ್ಟಿಯಾಗಿ ಅರಚಿದ.

'ತೊಲಗಾಚೆ'

ಆ ಕುಳ್ಳ ಮನುಷ್ಯ, ತಿರುಗಿ ಓಡಿದ. ಆ ಫೆಲ್ಟ್ ಬೂಟುಗಳಿಂದ, ಧೂಳು ಮೋಡಗಳು ಏಳುತ್ತಿದ್ದುವು. ಸೈನಿಕ ತನ್ನ ಜೊತೆಗಾರರಿಗೆ ಹೇಳುತ್ತಿದ್ದ.

'ನಮ್ಮನ್ನ ಬೆದರಿಸುವೆನೆಂದು ತಿಳಿದಿದ್ದನೇನೋ ಹೆಗ್ಗಣ! ಅವನು ಹೇಳಿದ್ದು ನಮಗೆ ಅರ್ಥವಾಗಲಿಲ್ಲವೆಂದು ತಿಳಿದನೇನೊ, ನಮಗೆ-ಎಲ್ಲವೂ ಅರ್ಥವಾಗುತ್ತದೆ-ಇಲ್ಲವೆ?'

ಅದೇ ಸಂಜೆ ಆ ಕುಳ್ಳ ಟ್ರಾಟ್‌ಸ್ಕಿ ಸೇತುವೆಯ ಹತ್ತಿರದ ಬೆಂಚಿನ ಮೇಲೆ ಕೂತಿದ್ದ:

'ಅರ್ಥಮಾಡಿಕೊಳ್ಳಿ' ತನ್ನಜೊತೆಯಲ್ಲಿ ಕೂತಿದ್ದವರಿಗೆ ಕುಳ್ಳ ಹೇಳಿದ. 'ಬಹು ಭಾಗದ ಜನ, ಯಾರನ್ನು ನಾವು ಮುಠ್ಠಾಳ ಎಂದುಕೊಂಡಿದ್ದೇವೋ

ಆ ಸರಳ ಮನಸಿನ ಮನುಷ್ಯ ಅವನೇ ನಿಜವಾಗಿಯೂ ಬಾಳನ್ನು ಕಟ್ಟುವ ಶಿಲ್ಪಿ. ಉಳಿದವರೆಲ್ಲಾ ಮುಠ್ಠಾಳರೇ ಸರಿ ........'

ಸಿಡುಬಿನ ಕಲೆ ತುಂಬಿದ ಮುಖದ, ಕೊಚುಗಾಲಿನ ನಾವಿಕ, ಭೀಮ ಕಾಯದ ಸೈನಿಕ, ನೀಲಿಯ ಉಡುಪು ಧರಿಸಿದ ಬೊಜ್ಜು ಬೆಳೆದ ಹೆಂಗಸು, ನರೆ ಗೂದಲಿನ ಮೂವರು ವೃದ್ಧರು,- ಇವರು ಕೂಲಿಗಾರರಿರಬೇಕು, ಕಪ್ಪು ಬಣ್ಣದ ತೊಗಲಿನ ಉಡುಪು ಧರಿಸಿದ ಯಹೂದಿ ಯುವಕನೊಬ್ಬ - ಇಷ್ಟು ಜನ ನಿಂತು ಕುಳ್ಳನಾಡುವ ಮಾತುಗಳನ್ನು ಕೇಳುತ್ತಿದ್ದರು. ಯಹೂದಿ ಉದ್ರೇಕ ಗೊಂಡಿದ್ದ ; ನುಸುಳುವ ರೀತಿಯಲ್ಲಿ ಕೇಳುತ್ತಿದ್ದ:

'ಹಾಗಾದರೆ ಕೂಲಿಯೂ ಮೂಢನೇ ಆಗಿರಬೇಕು ?'

'ತೀರ ಸ್ವಲ್ಪ ಬಯಸುವ ಜನರ ವಿಚಾರ ನಾ ಮಾತಾಡುತ್ತಿರುವುದು – ಅವರು ಗೌರವವಾಗಿ ಜೀವನ ನಡೆಸಲು ಅನುಕೂಲ ಮಾಡಿಕೊಡಬೇಕು.'

'ಅಂದರೆ ಶ್ರೀಮಂತರಿಗೆ ಎಂದೇನು ನಿನ್ನ ಅರ್ಥ ಆ ?'

'ಸ್ವಲ್ಪ ತಡಿ ಟೊವಾರಿಷ್ (ನಾವಿಕ)' ಗೊಗ್ಗರು ಧ್ವನಿಯಲ್ಲಿ ಹೇಳಿದ 'ಅವನು ಮಾತಾಡಲಿ ಬಿಡು ........'

ಭಾಷಣಕಾರ ನಾವಿನ ಕಡೆ ತಲೆದೂಗಿದ.

'ಮನುಷ್ಯ ಮುಠ್ಠಾಳನೆನ್ನುವುದು ತತ್ವದ ದೃಷ್ಟಿಯಿಂದ, ಏಕೆ ಗೊತ್ತೆ? ಅವನು ಪ್ರಕೃತಿ ತನಗೆ ಕೊಟ್ಟಷ್ಟೆ ಬುದ್ಧಿಯಿಂದ ತೃಪ್ತನಾಗಿದಾನೆ. ಅದನ್ನು ಹೇಗೆ ಉಪಯೋಗಿಸಬೇಕೆಂಬುದೂ ಅವನಿಗೆ ಗೊತ್ತು.'

'ಸರಿ, ಮುಂದಕ್ಕೆ ಹೇಳು' ಎಂದ ನಾವಿಕ.

'ಅವನು ಮನುಷ್ಯನಾಗಿರುವುದು ಸ್ವಲ್ಪಕಾಲವೇ. ಒಂದಲ್ಲ ಒಂದು ದಿನ ಸಾಯಬೇಕೆಂಬ ಅರಿವಿನಿಂದ ಅವನಿಗೆ ಏನೂ ಅನಿಸುವುದಿಲ್ಲ ... '

'ಸರಿ. ನಾವೆಲ್ಲಾ ಒಂದಲ್ಲ ಒಂದು ದಿನ ಸತ್ತೇ ಸಾಯಬೇಕು !' ಎಂದು ಪಕ್ಕದಲ್ಲಿದ್ದ ಯಹೂದಿಯ ಕಡೆ ಕಣ್ಣು ಮಿಟುಕಿಸಿ, ತನ್ನ ಅಮೃತತ್ವದ ನಂಬಿಕೆ ಯನ್ನು ಜಗತ್ತಿಗೆಲ್ಲಾ ಸಾರುವನಂತೆ, ಮುಖ ಇಷ್ಟಗಲ ಮಾಡಿಕೊಂಡು ಆ ನಾವಿಕ ಹೇಳಿದ.

ಮಂಗನ ಮೋರೆಯ ಆ ಭಾಷಣಕಾರ ಕೆಳದನಿಯಲ್ಲಿ, ಸುತ್ತಲಿದ್ದವರನ್ನು 'ನನ್ನ ಮಾತನ್ನು ನಂಬಿ' ಎಂದು ಬೇಡುವ ಧನಿಯಿಲ್ಲಿ ತನ್ನ ಮಾತು ಮುಂದುವರಿಸಿದ.

('ಮನುಷ್ಯನಿಗೆ ಆಸೆ ತುಂಬಿದ ಚುರುಕು ಜೀವನ ಬೇಕಾಗಿಲ್ಲ; ಚಿಕ್ಕೆ ತುಂಬಿದ ಮುಗಿಲಿನಡಿಯಲ್ಲಿ ನಿಧಾನವಾಗಿ ಹರಿಯುವ ಶಾಂತ ಜೀವನದಿಂದ) ತೃಪ್ತನಾಗುತ್ತಾನೆ........ ಸುತ್ತಲ ಜನದಲ್ಲಿ ತೀರಿಸಿಕೊಳ್ಳಲಾಗದ ಬಯಕೆಯನ್ನು ಕೆರಳಿಸುವುದು - ಸ್ವಲ್ಪ ಹೊತ್ತಿಗಾದರೂ - ಅವರನ್ನು ದಿಗ್ಭ್ರಾಂತಿಗೊಳಿಸಿದ ಹಾಗೆ; ಬಾಳನ್ನು ಅವರಿಗೆ ಇದ್ದದ್ದೂ ತೊಡಕು ಮಾಡಿದ ಹಾಗೆ. ಇಂಥವರಿಗೆ ಕಮ್ಯೂನಿಸಂ (ಸಂಘ ಸಮತಾವಾದ) ಏನು ತಾನೆ ಕೊಟ್ಟೀತು ?'

"ಹಾ !' ಮೊಳಕಾಲ ಮೇಲೆ ಕೈಯೂರಿ, ಮುಂದಕ್ಕೆ ಬಾಗಿ ಮೇಲೆದ್ದು ನಾವಿಕ ಹೇಳಿದ : 'ಸರಿ ನನ್ನ ಜೊತೆ ಬಾ !'

'ಎಲ್ಲಿಗೆ ?' ಕೂದಲು ತುಂಬಿದ ಮೈಯ ಕುಳ್ಳ ಬೆಚ್ಚಿಬಿದ್ದು, ಹಿಂದಕ್ಕೆ ಸರಿದು ಕೇಳಿದ.

'ಅದೆಲ್ಲಾ ನಿನಗೇಕೆ? ಟೊವಾರಿಷ್. ನಾ ಅಪ್ಪಣೆ ಮಾಡುತ್ತೇನೆ. ನಡಿ ನನ್ನ ಜೊತೆಗೆ........'

'ಛಿ ! ಇರಲಿ ಬಿಡು' ಎಂದ ಯಹೂದಿ ಯುವಕ, ತಿರಸ್ಕಾರವಾಗಿ ಕೈ ಅಲ್ಲಾಡಿಸಿ.

'ಹೊರಡುತೀಯಾ ಇನ್ನು' ಎಂದ ನಾವಿಕ ; ಸಿಡುಬಿನ ಕಲೆ ತುಂಬಿದ ಅವನ ಮುಖ ಸಿಟ್ಟಿನಿಂದ ಕಪ್ಪೇರಿತ್ತು ; ಕಣ್ಣು ಕಿಡಿಗಾರುತ್ತಿತ್ತು.

'ನನಗೇನೂ ಹೆದರಿಕೆಯಿಲ್ಲ' ಎಂದ ಭಾಷಣಕಾರ, ಭುಜ ಕುಣಿಸಿ.

ಹತ್ತಿರ ಹೆಂಗಸು ಶಿಲುಬೆಯ ಗುರುತುಮಾಡಿ ಬೇರೆಕಡೆ ತಿರುಗಿಕೊಂಡು ಹೊರಟು ಹೋದಳು ; ಸೈನಿಕ ಬಂದೂಕವನ್ನು ಕೈಯಿಂದ ಸವರುತ್ತ ಹೊರಟ ; ಉಳಿದವರೆಲ್ಲರೂ ಯಂತ್ರಗಳಂತೆ, ಎಲ್ಲರಿಂದಲೂ ಒಂದೇ ಮನಸಿದ್ದಂತೆ ತಟಕ್ಕನೆ ಒಮ್ಮೆಗೇ ಎದ್ದುನಿಂತರು. ನಾವಿಕನೂ, ಯಹೂದಿ ಯುವಕನೂ ಸೆರೆಯಾಳನ್ನು ಕರೆದುಕೊಂಡು, ಪೀಟರ್ ಮತ್ತು ಪಾಲ್ ಕೋಟೆಯ ಕಡೆ

ಹೊರಟರು. ಆದರೆ ಅವರಿಗಿದಿರಾಗಿ ಬಂದ ದಾರಿಗರಿಬ್ಬರು, ವೇದಾಂತಿಯನ್ನು ಬಿಡುವಂತೆ ಹೇಳಿದರು.

'ಊಹೂ - ಹೂ - ಈ ಕುನ್ನಿಗೆ ಮನುಷ್ಯ ಎಷ್ಟು ಹೊತ್ತು ಬದುಕಿರೋದು ಎಂಬೋದನ್ನ ತೋರಿಸಬೇಕು' ಎಂದ ನಾವಿಕ.

'ನನಗೇನೂ ಹೆದರಿಕೆ ಇಲ್ಲ' ಎಂದಿತು ಕುನ್ನಿ, ಕಾಲ ಕೆಳಗಿನ ನೀರನ್ನು ನೋಡುತ್ತಾ ತಗ್ಗಿದ ದನಿಯಲ್ಲಿ. 'ನಿಮಗೆಷ್ಟು ಅಲ್ಪಜ್ಞಾನ ಎಂಬುದನ್ನು ಕಂಡು ನನಗೆ ಆಶ್ಚರ್ಯವಾಗುತ್ತಾ ಇದೆ.'

ಇದ್ದಕ್ಕಿದ್ದ ಹಾಗೇ ತಿರುಗಿ, ಕುಳ್ಳ ವೇಗವಾಗಿ ಚೌಕದ ಕಡೆ ನಡೆದ.

'ನೋಡು ನೋಡು ತಪ್ಪಿಸಿಕೊಂಡುಬಿಟ್ಟ ಹೆಗ್ಗಣ. ಲೋ! ಎಲ್ಲಿಗೆ ಹೋಗುತೀಯೋ - ಏ ನಾಯೀಮರೀ' ಎಂದು ನಾವಿಕ ಅರಚಿದ.

'ಹೋಗಲಿ ಬಿಡು ಟೊವಾರಿಷ್, ಅವನ ಬುದ್ಧಿ ನೆಟ್ಟಗಿಲ್ಲ.'

'ನಾವಿಕ ಕುಳ್ಳ ಹೋದ ಕಡೆ ಗಟ್ಟಿಯಾಗಿ ಸಿಳ್ಳುಹೊಡೆದು ನಗುತ್ತಾ, ಹಾಳಾಗಿ ಬೆಂಕಿ ಬಿದ್ದು ಹೋಗಲಿ! ಆದರೂ ಎದೆಗಾರ ನಾಯಿ ಮುಂಡೇದು - ಕುಂಯ್, ಕುಂಯ್ ಅನ್ನಲಿಲ್ಲ ನೋಡು .... ಖಂಡಿತ ಅವನ ತಲೆ ಸ್ವಲ್ಪ ಸಡಿಲಾಗಿರಬೇಕು' ಎಂದ.

* * * *

ನಾರ್ದೋನಿಡಾಂನ ಹತ್ತಿರ ಸೇರಿದ ಜನರ ಗುಂಪಿನಲ್ಲಿ ಬಣ್ಣಗೆಟ್ಟ ಟೋಪಿ ಹಾಕಿಕೊಂಡು, ಫರ್‌ಕಾಲರಿನ ನಿಲುವಂಗಿ ಹಾಕಿದವನೊಬ್ಬನು ಅಲ್ಲಿಂದಿಲ್ಲಿಗೆ ಎಗರಾಡುತ್ತಿದ್ದಾನೆ. ಎಲ್ಲೆಲ್ಲಿ ಜನ ಗುಂಪಾಗಿ ನಿಂತಿದ್ದರೆ ಅಲ್ಲಿ, ತಲೆ ಒಂದು ಕಡೆಗೆ ವಾಲಿಸಿಕೊಂಡು, ತನ್ನ ಕರಿಮರದ ಬೆತ್ತವನ್ನು ಬಲವಾಗಿ ನೆಲದ ಮೇಲೂರಿ ನಿಂತು, ಅವರಾಡುವ ಮಾತು ಕೇಳುತ್ತಾ ನಿಲ್ಲುತ್ತಾನೆ. ಕೆಂಪಗೆ ಚಂಡಿನಂಥ ಮುಖ, ಗೂಬೆಯ ಕಣ್ಣಿನಂಥ ದುಂಡಾದ ಕಣ್ಣುಗಳು; ಗಿಣಿ ಮೂಗಿನ ಕೆಳಗೆ ನರೆತ ಮೀಸೆ ನೆಟ್ಟಗೆ ನಿಂತಿದೆ. ಸ್ವಲ್ಪ ಹಳದಿ ಬಣ್ಣದ ಹೋತನ ಗಡ್ಡ, - ಅದನ್ನು ಎಡಗೈಯ ಮೂರು ಬೆರಳಿನಲ್ಲಿ ತಿರುಗಿಸಿ ಬಾಯಲ್ಲಿಟ್ಟು, ತುಟಿಯಿಂದ ಚಪ್ಪರಿಸಿ ಹೊರಕ್ಕೆ 'ಥೂ' ಎಂದು ಉಗಿಯುತ್ತಾನೆ.

ಜನರ ಗುಂಪಿನಲ್ಲಿ ತಲೆಮರೆಸಿಕೊಂಡು ಹೋಗುವನ ಹಾಗೆ ಮೆಲ್ಲಗೆ

ಭುಜದಲ್ಲಿ ದಾರಿ ಮಾಡಿಕೊಂಡು ಹೋಗುತ್ತಾನೆ. ಇದ್ದಕ್ಕಿದ್ದ ಹಾಗೆ ಕಂಚಿನಂಥ ಕಂಡದಲ್ಲಿ ಸವಾಲು ಹಾಕಿದ ಹಾಗೆ ಅವನ ಧ್ವನಿ ಕೇಳುತ್ತದೆ.

'ನಾನು ಬಲ್ಲೆ ಯಾವ ವರ್ಗದ ಜನರಿಂದ ನಮಗೆ ಹೆಚ್ಚು ಅಪಾಯವಾಗುತ್ತಿದೆ........ ಅವರನ್ನು ನಾವು ನಾಶಮಾಡಬೇಕು, ತುಳಿದು ಪುಡಿಪುಡಿ ಮಾಡಬೇಕು. ಅವರ ಎಲುಬನ್ನು ಹಿಟ್ಟುಬೀಸಿ ಬಿಡಬೇಕು........'

ಸುತ್ತನಿಂತ ಆಳುಗಳು, ಸಿಪಾಯಿಗಳು, ಕೂಲಿಗಳು, ಸೂಳೆಯರು, ಅವನಾಡುವ ಮಾತುಗಳನ್ನೆಲ್ಲ ನುಂಗುವವರ ಹಾಗೆ 'ಆ' ಎಂತ ಬಾಯಿ ಬಿಟ್ಟು ಕೊಂಡು ಕೇಳುತ್ತಾ ನಿಂತಿದಾರೆ. ಮಾತನಾಡುನಾಗ ಅವನು ಕೋಲನ್ನು ಎದೆಯ ಮೇಲಿಟ್ಟುಕೊಂಡು, ಪಿಟೀಲು ನುಡಿಸುವ ಹಾಗೆ ಅವರ ಮೇಲೆ ಬೆರಳಾಡಿಸುತ್ತಾನೆ.

'ಈ ಗುಮಾಸ್ತರು ಅಧಿಕಾರಿಗಳು ಇವರೆಲ್ಲಾ ಎಂಥ ಅನಿಷ್ಟ ಪೀಡೆಗಳೆಂಬುದು ನಿಮಗೆಲ್ಲಾ ಚೆನ್ನಾಗಿ ಗೊತ್ತಿದೆ. ಇವರು ಮಾಡುವಷ್ಟು ಅನ್ಯಾಯ, ಇವರಷ್ಟು ಕಳ್ಳಿದೆ ಇನ್ನಾರಲ್ಲಿದೆ ಹೇಳಿ? ಕಛೇರಿ ಅಧಿಕಾರಿಗಳು, ಜೈಲಿನವರು, ಕಂದಾಯದವರು, ಸುಂಕದವರು, ತೆರಿಗೆಯವರು ಎಲ್ಲಾ-ಪಿಶಾಚಿಯ ಮೊಮ್ಮಕ್ಕಳಿ! ಅಹಹಾ! ಎಂಥ ಮಾಟಗಾರರು! ಓಹೋಹೋ! ಎಷ್ಟು ಕೈಚಳಕ ಮಾಡುತಾರೆ. ಇವರನ್ನು ನಾವು ಮೊದಲು ನಾಶಮಾಡಬೇಕು.'

ಆಳುಗೆಲಸದ ಕೆಂಪುಗೂದಲಿನ ಹುಡುಗಿಯೊಬ್ಬಳು ಇವನ ಮಾತು ಕೇಳಿ ಸಿಟ್ಟಾಗಿ ಕೇಳಿದಳು:

'ನೀನು ಯಾರು? ಅದನ್ನು ಮೊದಲು ಹೇಳು. ನೀನೂ ಒಬ್ಬ ಅಧಿಕಾರಿಯೋ! ನಮ್ಮಪ್ಪನಾಣೆ! ನೀನೂ ಅವರೊಳಗೊಬ್ಬನು. ಅಲ್ಲದೆ ಹೋದರೆ ನನ್ನ ಮೂಗು ಕೊಯ್ಯಿಸಿ ಕೊಳ್ಳುತ್ತೀನೆ.'

ಅವನು ಅವಸರವಸರವಾಗಿ, ಸಿಡುಕಿನ ಧ್ವನಿಯಲ್ಲಿ 'ಊಹೂ, ನಾನು ಯಾವ ಅಧಿಕಾರಿಯೂ ಅಲ್ಲ. ನಾನು ಯಾವ ಬಡವರಿಗೂ, ಏನೂ ಅಪಕಾರ ಮಾಡಿಲ್ಲ. ನಾನು ಭವಿಷ್ಯ ಹೇಳುವ ಜೋಯಿಸ. ನಮ್ಮೆಲ್ಲರಿಗೂ ಮುಂದೆ ಏನು ಆಗಲಿದೆ ಎಂಬುದು ನನಗೆ ಗೊತ್ತಿದೆ........'

ಇವನ ಮಾತು ಕೇಳಿದೊಡನೇ ನಿಂತಿದ್ದವರಲ್ಲಿ ನಾಲ್ಕಾರು ಜನ 'ಹಾಗಾದರೆ ಏನಾಗುತ್ತೆ ಹೇಳು' ಎಂದು ಒಟ್ಟಿಗೆ ಕೂಗಿದರು :

'ಹಾಗೆಲ್ಲಾ ಬೀದೀಲಿ ಹೇಳೋದಲ್ಲಾ ಅದು ಭಾರಿ ಗುಟ್ಟು....'

"ನಿನ್ನ ಗುಟ್ಟಿಗಿಷ್ಟು ಬೆಂಕಿ ಹಾಕಿದರು. ಹೇಳು ನಮಗೇನಾಗುತ್ತೆ. 'ಜೋಯಿಸ ನೆಲನೋಡುತ್ತಾ ಹೇಳಿದ."

"ನೀವು ಈಗ ಆರಂಭಿಸಿರೋದನ್ನು, ಬೇಗ, ಕೂಡಲೇ ಮುಗಿಸದೆ ಹೋದರೆ ನಿಮಗೆಲ್ಲಾ ಕೆಟ್ಟದಾಗುತ್ತೆ. ಹುಳುಕು ಹಲ್ಲನ್ನು ಬುಡಮಟ್ಟ ಕೀಳಬೇಕು, ಅಧಿಕಾರಿಗಳನ್ನೆಲ್ಲಾ ಮಟ್ಟ ಹಾಕಿ ಬಿಡಬೇಕು ; ಕಲಿತವರು, ಬುದ್ಧಿವಂತರನ್ನು ನಮ್ಮಿಂದ ರೂಪಾಯಿನ ಕೆಲಸ ತೆಗೆದುಕೊಂಡು, ಆಣೆ ಕೂಲಿ ಕೊಟ್ಟು ನಮ್ಮನ್ನೆಲ್ಲಾ ಜರಿಗಳನ್ನು ಮಾಡಿಬಿಟ್ಟಿದಾರೆ. ಈಗ ನಮಗೆ ಬುದ್ಧಿ ಬಂದಿದೆ. ನಾವು ಹೇಳಿದ ಮಾತು ಅವರು ಕೇಳಬೇಕು ; ಕಾನೂನು ಮಾಡೋರು ನಾವು ! ಅಲ್ಲ 'ನೀರನ್ನು ಕುದಿಸದೆ ಕುಡಿಯಬೇಡಿರಿ' ಎಂದು ಹೇಳುತ್ತಾರೆ. ಇವರಪ್ಪನ ಕಾಲದಿಂದ ವೈದ್ಯ ಮಾಡಿದೋರ ಹಾಗೆ. ಹ-ಹ್ಹ-ಹ್ಹಾ !"

ಅವನೇನು 'ಹ-ಹ್ಹ-ಹ್ಹಾ' ಎಂತ ನಕ್ಕನೋ, ಗಟ್ಟಿಯಾಗಿ ನಿಟ್ಟುಸಿರು ಬಿಟ್ಟಸಿರು ಬಿಟ್ಟನೋ ಯಾವುದೂ ಹೇಳುವುದು ಕಷ್ಟ.

ಗೆದ್ದವನ ಹಾಗೆ ಮುಖ ಹಿಗ್ಗಿಸಿಕೊಂಡು ಹೇಳಿದ :

"ನಾವು ಕುಡಿಯೋದು ಯಾವುದು ? ಕಾಯಿಸಿದ ನೀರೋ, ತಣ್ಣಿರೋ?"

"ತಣ್ಣೀರು"

"ನಾವೆಲ್ಲಾ ತಣ್ಣೀರು ಕುಡಿದರೂ ಬದುಕಿಲ್ಲವೇನು ?"

"ಬದುಕಿದೀವಿ"

"ಅದೇ ನಾ ಹೇಳಿದ್ದು. ಇದನ್ನೇನ್ನೋ ದೊಡ್ಡದಾಗಿ ಶಾಸನ ಮಾಡಿದಾರೆ 'ನೀರನ್ನು ಕಾಯಿಸದೆ ಕುಡಿಯಬೇಡಿ........' ಇವರೆಲ್ಲಾ ಹಾಳಾಗಿ ಹೋಗಬೇಕು...."

ಇಷ್ಟು ಮಾತಾಡಿದವನೆ ತನ್ನ ಕೆಲಸ ಮುಗಿದವನ ಹಾಗೆ ಅವನು ಬೆತ್ತ

ತಿರುಗಿಸುತ್ತಾ ಹೊರಟು ಹೋಗುತ್ತಾನೆ. ಇನ್ನೊಂದು ಗುಂಪು ಕಂಡಕೂಡಲೇ ಮತ್ತೆ ಆರಂಭಿಸುತ್ತಾನೆ:

'ನಮ್ಮನ್ನು ಹಾಳುಮಾಡುವವರು ಇಬ್ಬರು ಅಧಿಕಾರಿಗಳು ಗುಮಾಸ್ತರು ........'

ಇದುವರೆಗೂ ಯಾವ ಕತ್ತಲ ಮೂಲೆಯಲ್ಲಿ, ಬಾಲ ಮುದುರಿಕೊಂಡು, ಹಲ್ಲು ಕಡಿಯುತ್ತಾ, ಪ್ರತೀಕಾರ ತೃಷೆಯಿಂದ ಅವಿತುಕೊಂಡಿದ್ದನೋ! ಅವನೂ ಈಗ ಬಯಲಿಗೆ ಬಂದಿದ್ದಾನೆ.

* * * *

ಬುದ್ಧಿವಂತರ ಮೇಲೆ ಕೆರಳಿದ ಜನ, ಅವರ ವಿರುದ್ಧ ವೈರ ಪ್ರಚಾರ ಮಾಡುವ ಜನ ಕಡಮೆಯೇನಿಲ್ಲ. ಅಂಥವರಲ್ಲಿ ಅಡಿಗೆಭಟ್ಟ, ಪರಿಚಾರಕ, ಊಳಿಗದಾಳು ಇಂಥ ಮನೆಗೆಲಸದ ಚಾಕರರು ಹೆಚ್ಚುಜನ 'ಸರ್ಕ್ಯ ಮಾಡರ್ನೆ' ಯಲ್ಲಿ ಸಭೆಯೊಂದು ಮುಗಿದಮೇಲೆ ಕೆಂಬಣ್ಣದ, ಬೊಜ್ಜು ಮೈಯ ಹೆಂಗಸೊಬ್ಬಳು' ಧಣಿಗಳ ಜೀವನರೀತಿಯ ಬಗ್ಗೆ ಸಿಪಾಯಿಗಳಿಗೆ. ಅವಳು ಹೇಳುತ್ತಿದ್ದ ಕಥೆಗಳೇನೋ ತಮಾಷೆಯಾಗೆ ಇದ್ದವಾಗಲಿ, ಅವಳು ಆ ಕಥೆ ಹೇಳಲು ಉಪಯೋಗಿಸುತ್ತಿದ್ದ ಮಾತುಗಳಲ್ಲಿ, ಹತ್ತರಲ್ಲಿ ಒಂದನ್ನು ಕೂಡಾ ಬರೆಯುವಂಥದಲ್ಲ, ಅವಳು ಹೇಳುತ್ತಿದ್ದ ಕಥೆಗಳೂ ಅಂಥವೇ: ಹೆಂಗಸರ ವ್ಯಾಧಿಯಲ್ಲಿ ನಿಪುಣನಾದ ವೈದ್ಯ, ಯಹೂದೀ ಸ್ತ್ರೀ ದಂತವೈದ್ಯಳು, ನಟನೊಬ್ಬನು ತನ್ನ ಸ್ತ್ರೀಶಿಷ್ಯರಿಗೆ ಶಿಕ್ಷಣಕೊಡುತ್ತಿದ್ದ ಬಗೆ, ಇದೇ ಅವಳು ಹೇಳುತ್ತಿದ್ದ ಕಥೆಗಳು. ಸಿಪಾಯಿಗಳು ಗಟ್ಟಿಯಾಗಿ ನಗುತ್ತಾ, ಉಗುಳುತ್ತಾ ಕಥೆ ಕೇಳುತ್ತಿದ್ದರು.

'ಈ ಕುನ್ನಿಗಳನ್ನೆಲ್ಲ ಬಲಿಹಾಕಬೇಕು' ಕತ್ತಿಗೆ ಕರವಸ್ತ್ರ ಕಟ್ಟಿಕೊಂಡಿದ್ದ ಕಪ್ಪುಬಣ್ಣದ ಸಿಪಾಯಿಯೊಬ್ಬನು ಹೇಳಿದ 'ಒಂದು ಪಿಳ್ಳೆಯನ್ನೂ ಉಳಿಸಬಾರದು.'

ಇನ್ನೊಂದು ಗುಂಪಿನಲ್ಲಿ ಷಂಡರಂತೆ ಒಂದೂ ಕೂದಲಿಲ್ಲದ ಕುಂಟನೊಬ್ಬನು ಕಿರಿಚುತ್ತಿದ್ದ:

'ಅವರು ಸುಂದರವಾದ ಮನೆಗಳಲ್ಲಿ ಮೆತ್ತನೆ ಸೋಪಾಗಳ ಮೇಲೆ ಮಲಗಿಕೊಂಡು, ತೊಡೆಯ ಮೇಲೆ ನಾಯಿಗಳನ್ನು ಆಟವಾಡುತ್ತಿರುವಾಗ,

ನಾನು ಲಾಯದಲ್ಲಿ, ಕುದುರೆಗಳ ನಡುವೆ, ಗೊಬ್ಬರದ ಗುಂಡಿಯಲ್ಲಿ ಬಿದ್ದು ಒದ್ದಾಡುತ್ತಾ ನನ್ನ ಜೀವಮಾನದಲ್ಲಿ ಕಳೆದಿದೇನೆ. ಈಗ ನಾನು ಮಲಗಿ ಕೊಂಡು ಮಜಾ ಮಾಡುತೇನೆ ; ಅವರು ಬೇಕಾದರೆ ಹೋಗಿ ಸಗಣಿ ಗಂಜಲಿ ನಲ್ಲಿ ಹೊರಳಾಡಲಿ.

ವಿಟ್ರಿಯಾಲ್ ದ್ರಾವಕದಿಂದ ಮುಖವೆಲ್ಲಾ ಸುಟ್ಟುಹೋದ, ಏಕಾಕ್ಷಿ ಯುವತಿಯೊಬ್ಬಳು, ನಿಷ್ಕರುಣೆ ತುಂಬಿ ಸೂಸುವ ಮಾತಿನ ಕಿಡಿಗರೆಯು ತ್ತಿದ್ದಳು :

'ಬೈಬಲ್ ನೋಡಿ–ಬೈಬಲ್‌ನಲ್ಲಿ ಧಣಿಗಳಿದಾರೇನು? ಊಹೂ–ಇಲ್ಲ. ಅಲ್ಲಿ ನ್ಯಾಯವಾದಿಗಳಿದಾರೆ, ಪ್ರವಾದಿಗಳಿದಾರೆ ; ಆದರೆ ಈ ಧಣಿಗಳಿಲ್ಲ. ಧಣಿಗಳಿಲ್ಲದ ಕುಲವನ್ನು, ದೇವರೇ ಹೆಂಗಸರು ಮಕ್ಕಳು, ಗುಲಾಮರು ಒಬ್ಬೊಬ್ಬರನ್ನು ತಲೆ ತಲೆ ಎಣಿಸಿ ನಾಶಮಾಡುತಾನೆ. ಗುಲಾಮರಿನ್ನೇನು ? ಅವರೂ 'ಧಣಿ'ಗಳ ಗಾಳಿ ಕುಡಿದೋರೆ – ಅವರೂ ತಮ್ಮ ಧಣಿಗಳ ಹಾಗೇ ಪಶುಗಳಾಗಿ ಹೋಗಿರುತಾರೆ !'

'ಎಲ್ಲಾದರೂ ಹೋಗಿ ನೇಣು ಹಾಕಿಕೊಳ್ಳೇ' ಎಂದು ಗುಂಪಿನಿಂದ ಯಾರೋ ಕೂಗಿದರು.

ಆದರೆ ಅವಳು ಕೈಕಟ್ಟಿಕೊಂಡು ಅರಚುತ್ತಲೇ ಇದ್ದಳು. 'ನಾನು ಹನ್ನೊಂದು ವರ್ಷ ಒಬ್ಬ ಶ್ರೀಮಂತ ಹೆಂಗಸಿನ ಹತ್ತಿರ ದಾಸಿಯಾಗಿದ್ದೆ.... ನಾನೆಷ್ಟೋ ವಿಷಯ ನೋಡಿದೇನೆ ....'

ನಿಜ. ಅವಳಿಗೆ ಬೇಕಾದಷ್ಟು ಗೊತ್ತಿತ್ತು: ಅವಳು ನಿಜ ಹೇಳಿದರೆ, ಜನ ಸಮಾಧಾನವಾಗಿ ಕೇಳಿದರೆ. ಅವಳು ಉದ್ರೇಕಗೊಂಡು ಸೋಜಿಗದ ಹಾಗೆ ಮುಖಮಾಡಿಕೊಂಡು ಬೆವರಿಡುತ್ತಾ ಹೋದಮೇಲೆ ಮೊಂಡ ಮೂಗಿನ ಕುಳ್ಳ ಸಿಪಾಯಿಯೊಬ್ಬ ಹೇಳಿದ :

'ಹೀಗೆ ಮಾತಾಡುತಾಳೇಂತಲೇ ಅವಳ ಮುಖಕ್ಕೆ ಬೆಂಕಿ ಹಚ್ಚಿ, ಒಕ್ಕಣ್ಣು ಮಾಡಿರೋದು' ಎಂದ.

ಗಾಯಗೊಂಡ ಮನುಷ್ಯ, ಸೇಡು ತೀರಿಸಿಕೊಳ್ಳಲು ತನಗೆ ಅಧಿಕಾರ ವಿದೆ ಎಂಬುದನ್ನರಿತುಕೊಂಡಾಗ, ಹಾಗೆ ಸೇಡು ತೀರಿಸಿಕೊಳ್ಳಲು ಅವನಿಗೆ

ಸ್ವಾತಂತ್ರ್ಯ ಬಂದಾಗ, ಅವನು ನಿಜವಾಗಿಯೂ ಭಯಂಕರನಾಗುತ್ತಾನೆ; ಬೋನಿನಲ್ಲಿಟ್ಟು ಹಿಂಸಿಸಿ ಕೆರಳಿಸಿ ಹೊರಬಿಟ್ಟ ಹುಲಿಯಾಗುತ್ತಾನೆ; ಕೆಣಕಿದ ಕಾಳಿಂಗಸರ್ಪವಾಗುತ್ತಾನೆ. ನಮ್ಮ ಇಂದಿನ ಸಮಾಜ ಸುಧಾರಕರಿಗೆ ಇಂಥ ಜಾತಿಯ ಜನರು 'ಹಾಳಾಗಬೇಕಾದವರ ಗುಂಪಿನಲ್ಲಿ ಮೊದಲ ತಂಡ'ಕ್ಕೆ ಸೇರಬೇಕಾದವರು. ಇವರ ನಾಶದಿಂದ ಸಮಾಜಕ್ಕೆ ಎಷ್ಟೋ ಉಪಕಾರವಾದೀತು ಎನಿಸಿದರೆ ತಪ್ಪೇನಿಲ್ಲ.

———:———

# ಲೆನಿನನೊಂದಿಗೆ ಕೆಲವು ದಿನಗಳು *

**ಅನುವಾದಕ : ಎಸ್. ಅನಂತನಾರಾಯಣ**

**ಮೊದಲಿನ ಮಾತು**

[ವಿಶ್ವಸಾಹಿತಿ ಮ್ಯಾಕ್ಸಿಂ ಗಾರ್ಕಿಯವರ ಅಮೂಲ್ಯ ಲೇಖನಗಳಲ್ಲಿ "Days with Lenin" ಕೂಡ ಒಂದು. ಪ್ರಪಂಚದ ಸುಮಾರು ಐದನೇ ಒಂದು ಭಾಗದ ಚರಿತ್ರೆಯನ್ನೇ ಬದಲಾಯಿಸಿ ಬಡತನ, ದುಃಖ, ಸಂಕಟಗಳ ನಾಡಿನಲ್ಲಿ ಸಮತೆ, ಸುಖ, ಸಂತಸಗಳ ಬೀಜ ಬಿತ್ತಿದ ಜಗತ್ತಿನ ಕಾರಣಪುರುಷ ಲೆನಿನನೊಂದಿಗೆ ಮಹಾ ಸಾಹಿತಿ ಗಾರ್ಕಿ ಒಡನಾಡಿದಾಗ ಅವರಿಬ್ಬರ ಮಾತುಕತೆಗಳು, ಒಬ್ಬರೊಬ್ಬರ ಮೇಲಿನ ಪ್ರಭಾವಗಳನ್ನು ಗಾರ್ಕಿ ನಮ್ಮ ಮುಂದೆ "Days with Lenin" ಲೇಖನದಲ್ಲಿ ಚಿತ್ರಿಸಿದ್ದಾರೆ. ಲೆನಿನನ ವ್ಯಕ್ತಿತ್ವವನ್ನು ಇಸಿತಾದರೂ ಬಿಡದೆ, ವಿವಿಧ ರೂಪದಲ್ಲಿ, ವಿವಿಧ ಬಣ್ಣದಲ್ಲಿ, ವಿವಿಧ ಕಾಲದಲ್ಲಿ ಆ ವ್ಯಕ್ತಿತ್ವ ಹೇಗೆ ತನ್ನ ಪ್ರಭಾವ ಬೀರುತ್ತಿತ್ತೆಂಬುದನ್ನು ಕೌಶಲ್ಯದಿಂದ ಗ್ರಹಿಸಿ ನಮಗೆ ಕೊಟ್ಟಿದ್ದಾರೆ ಗಾರ್ಕಿ. ಈ ಲೇಖನವನ್ನೋದಿದವರಿಗೆ ಗಾರ್ಕಿಯ ಅನುಭವದ ಆಳ, ಗುಣ ಕಂಡೊಡನೆಯೇ ಅದನ್ನರಿತುಕೊಳ್ಳುವ ಸೂಕ್ಷ್ಮಮನೋಭಾವ, ಅವರ ಶೈಲಿಯ ಸರಳತೆ, ಕೈಚಳಕ ಮತ್ತು ಲಾಲಿತ್ಯ ಚೆನ್ನಾಗಿ ತಿಳಿಯುಬರುತ್ತದೆ. "Days with Lenin" ಲೇಖನದಲ್ಲಿ ಬಹಳ ಭಾಗದ ಅನುವಾದ ಇಲ್ಲಿ ಕೊಟ್ಟಿದೆ. ಬಿಟ್ಟಿರುವುದು ಸ್ವಲ್ಪ ಮಾತ್ರ. ಆದರೆ ಕೊಟ್ಟಿರುವುದರಿಂದಲೇ ಲೆನಿನ್ ಮತ್ತು ಗಾರ್ಕಿಗಳ ಮಹಾ ವ್ಯಕ್ತಿತ್ವದ ಅರಿವಾಗುವುದೆಂದು ಹಾರೈಕೆ.]

ವ್ಲಾಡಿಮಿರ್ ಲೆನಿನ್ ಕಾಲವಶನಾಗಿದ್ದಾನೆ. ಅವನ ಸಾವಿನಿಂದ ಜಗತ್ತಿನ ಮಹಾ ವಿಭೂತಿಗಳಲ್ಲಿ ಅತ್ಯಂತ ಹಿರಿಮೆಯುಳ್ಳವನ ನಷ್ಟವಾಗಿದೆ. ಇದನ್ನು ಅವನ ಶತ್ರುಗಳು ಕೂಡ ಒಪ್ಪಲು ಹಿಂದೆಗೆದಿಲ್ಲ. ಜರ್ಮನ್ ಮಧ್ಯವರ್ಗದ "ಪ್ರೇಗರ್ ಟೀಗ್‌ಬ್ಲಾಟ್" ಪತ್ರಿಕೆಯಲ್ಲಿ ಲೆನಿನನ ವಿಚಾರವಾಗಿ ಬಂದ ಲೇಖನದ ಕೊನೆಯ ಮಾತುಗಳೇ ಸಾಕ್ಷಿಯಾಗಿವೆ. "ಸಾವಿನಲ್ಲಿ ಕೂಡ ಪ್ರಚಂಡ ಹಿರಿಮೆಯುಳ್ಳ ಮತ್ತು ಅರಿವಿಗೆ ನಿಲುಕದವನಾಗಿದ್ದಾನೆ. ಲೆನಿನ್." ಈ ಲೇಖನದ ಹಿಂದಿರುವ ಭಾವನೆ ಬರಿಯ ಹೊಗಳಿಕೆಯದಲ್ಲ. "ಸತ್ತ ಮೇಲೆ ಶತ್ರುವಿನ ಶವ ಸುಗಂಧಯುತ" ಎಂಬ ನಿರಸನ

---

* Days with Lenin.

ವಾದದ್ದೂ ಅಲ್ಲ ; ಅಥವಾ ಒಂದು ಹಿರಿಮೆಯುಳ್ಳ ಕಾತುರ ಜೀವದ ಅವಸಾನದಲ್ಲಿ ಬಿಟ್ಟ ನಿಟ್ಟುಸಿರು ಕೂಡ ಅಲ್ಲ ! ಪ್ರತಿಭಾವಂತ ವಿಭೂತಿಯಲ್ಲಿ ಪ್ರಪಂಚ ತೋರುವ ಹಿಗ್ಗೇ ಇದಕ್ಕೆ ಕಾರಣ.

ಈ ಮಧ್ಯವರ್ಗದ ಜರ್ಮನ್ ಪತ್ರಿಕೆಯು ನಿರ್ಭಯ ವಿಚಾರ ಮತ್ತು ಜೀವನದ ದೃಢತೆಯ ಪ್ರಚಂಡ ಪುರುಷನ ಮಹಾ ವ್ಯಕ್ತಿತ್ವವನ್ನು ಗೌರವಿಸಿದಂತೆ ಗೌರವಿಸಲು ರಷ್ಯದಿಂದ ಓಡಿಹೋದ ರಷ್ಯನ್ ಪತ್ರಿಕೆಗಳಿಗೆ ಆತ್ಮ ಬಲವಾಗಲೀ ಇಲ್ಲ ಸ್ವಗೌರವವಾಗಲೀ ಇಲ್ಲದೆ ಹೋಯಿತು.

ಲೆನಿನನ ಚಿತ್ರ ಚಿತ್ರಿಸುವುದು ಸ್ವಲ್ಪ ಕಷ್ಟವೇ ಆದೀತು. ಮೀನಿಗೆ ಪಕ್ಕದ ರೆಕ್ಕೆಗಳ ಹಾಗೆಯೇ ಲೆನಿನನ ಮಾತುಗಳೂ ಅವನ ವ್ಯಕ್ತಿತ್ವದ ಅಂಗವಾಗಿದ್ದವು. ನೇರವಾಗಿ ಮತ್ತು ಸರಳವಾಗಿದ್ದ ಅವನ ಮಾತುಗಳು ಅವನ ಸಹಜ ಗುಣದ ಭಾಗ ಮಾತ್ರ. ಅವನು ಕೈಗೊಂಡು ವಿಜಯಿಯಾದ ಅಮೋಘ ಕಾರ್ಯಗಳ ಸುತ್ತ ಹೊಳೆಯುವ ಅಂಚು ಕಾಣಬರದು. ಅವನ ವೀರತ್ವ ರಷ್ಯನರಿಗೆಲ್ಲರಿಗೂ ಚೆನ್ನಾಗಿ ತಿಳಿದಿದೆ—ಜಗತ್ತಿನ ಜನರ ಸುಖಕ್ಕೋಸ್ಕರ ಎಲ್ಲ ಭೋಗಗಳನ್ನೂ ತ್ಯಾಗಮಾಡಿ ಜಗತ್ತಿನಲ್ಲಿ ಸಮಾಜನ್ಯಾಯ ಸಾಧ್ಯವೆಂದು ದೃಢವಾಗಿನಂಬಿದ ವಿಚಾರಶೀಲ ರಷ್ಯನ್ ಕ್ರಾಂತಿಕಾರನ ವೀರತ್ವ ಅದು.

ಅವನು ಸತ್ತಾಗ ನಾನು ಬರೆದ ಲೇಖನ ದುಃಖದ ಭರದಲ್ಲಿ ಮತ್ತು ಅವಸರವಸರವಾಗಿ ಬರೆದುದರಿಂದ ಸಾಲದೆಂದು ಕಾಣುತ್ತದೆ. ಆಗಿನ ಸಂದರ್ಭದಲ್ಲಿ ಕೆಲವು ವಿಷಯಗಳನ್ನು ಎಲ್ಲರ ಮುಂದೆ ಬಿಚ್ಚಿಡುವುದು ಸರಿಯೆಂದು ತೋರದಿದ್ದುದರಿಂದ ಅವುಗಳನ್ನು ಬರೆಯದೆ ಬಚ್ಚಿಡಬೇಕಾಯಿತು. ಲೆನಿನ್ ಅತಿ ಸೂಕ್ಷ್ಮದೃಷ್ಟಿಯುಳ್ಳ ಮತ್ತು ಅತಿ ತಿಳಿದವನು—"ಬಹಳ ತಿಳಿವಿನಲ್ಲಿ ಬಹಳ ಅಳಲು ಕೂಡ ಇದೆ."

ಲೆನಿನ್ ಅತಿ ದೂರದರ್ಶಿ. ೧೯೧೯ ರಿಂದ ೧೯೨೧ ರ ವರೆಗಿನ ಜನರ ಜೀವನ ವಿಮರ್ಶಿಸುತ್ತ ಕೆಲವು ವರ್ಷಗಳ ನಂತರ ಹೇಗಾಗಬಹುದೆಂದು ತನ್ನ ಅಭಿಪ್ರಾಯ ಸೂಚಿಸುತ್ತಿದ್ದ. ಆಗ ಅವನು ಹೇಳುತ್ತಿದ್ದ ಭವಿಷ್ಯ ಅಷ್ಟಾಗಿ ಹಿತಕರವಾಗಿರಲಿಲ್ಲ. ಅದನ್ನು ನಂಬಲು ಮನಸ್ಸು ಒಪ್ಪುತ್ತಲೂ ಇರಲಿಲ್ಲ. ಆದರೆ ಎಷ್ಟೋ ವಿಚಾರಗಳಲ್ಲಿ ಅವನು ನುಡಿದಿದ್ದ ಮಾರ್ಮಿಕ ಭವಿಷ್ಯ ನಿಜವಾಗಿ ಹೋಗಿದೆ. ನಾನು ಮೊದಲು ಬರೆದ ನೆನಪುಗಳು ಕೆಲವು ಅಸಂಬದ್ಧತೆ

ಯಿಂದಲೂ, ಕೆಲಕೆಲವು ವಿಷಯ ಬಿಟ್ಟುಹೋದುದರಿಂದಲೂ ಅಪೂರ್ಣ ವಾಗಿವೆ. ನ್ಯಾಯವಾಗಿ ನಾನು ಮೊದಲ ಬಾರಿ ಸಂದೇಹ, ಅಸಂತುಷ್ಟಿ, ವಿರೋಧ ಮತ್ತು ದ್ವೇಷಗಳ ವಾತಾವರಣದಲ್ಲಿ, ಹಿನ್ನೆಲೆಯೊಂದಿಗೆ ವ್ಲಾಡಿ ಮಿರ್ ಇಲ್ಯಿಚನ ವ್ಯಕ್ತಿತ್ವ ತನ್ನ ಅಮೋಘ ಪ್ರಭಾವ ಬೀರಿದ ಲಂಡನ್ ಸಮ್ಮೇಳನದಿಂದ ಪ್ರಾರಂಭಿಸಬೇಕಾಗಿತ್ತು.

## ಮೊದಲ ಸಂದರ್ಶನ

ಲಂಡನ್ನಿನ ಒಂದು ಕೊಂಪೆಯಲ್ಲಿ ಒಂದು ಚಿಕ್ಕ ಪಾಠಶಾಲೆಯ ಕೊಠಡಿ ಯಂತಿದ್ದ ಆ ಅನಲಂಕೃತ ಮಠದ ಚರ್ಚು ನನ್ನ ಮನಸ್ಸಿನಲ್ಲಿ ಇನ್ನೂ ಅಚ್ಚಳಿ ಯದಂತೆ ಕಾಣುತ್ತಿದೆ. ಹೊರಗಿನಿಂದ ನೋಡುವಾಗ ಮಾತ್ರ ಅದು ಚರ್ಚಿ ನಂತೆ ಕಾಣುತ್ತಿತ್ತು. ಒಳಹೊಕ್ಕೊಡನೆಯೇ ಧಾರ್ಮಿಕ ವಾತಾವರಣವೇನೂ ಕಾಣುತ್ತಿರಲಿಲ್ಲ. ಚಿಕ್ಕವೇದಿಕೆ ಕೂಡ ಮಂದಿರದ ಒಂದು ಕೊನೆಗಿರದೆ ಹೊರ ಬಾಗಿಲಿನ ಬಳಿ ಎರಡು ಕದಗಳ ನಡುವೆ ಇದ್ದಿತು.

ಇದಕ್ಕೆ ಮೊದಲು ನಾನು ಲೆನಿನನ್ನು ಸಂಧಿಸಿರಲೂ ಇಲ್ಲ, ಅವನ ಲೇಖನಗಳನ್ನು ಸಾಕಷ್ಟು ಓದಿಯೂ ಇರಲಿಲ್ಲ. ಆದರೆ ನಾನು ಓದಿದ್ದುದೂ, ಮತ್ತು ಅವನ ಸ್ನೇಹಿತರ ಒಳ್ಳೆಯ ಅಭಿಪ್ರಾಯಗಳೂ ನನ್ನನ್ನು ಅವನ ಕಡೆಗೆ ಸೆಳೆದಿದ್ದವು. ನಮ್ಮನ್ನು ಒಬ್ಬರಿಗೊಬ್ಬರಿಗೆ ಪರಿಚಯ ಮಾಡಿ ಕೊಟ್ಟಾಗ, ಆತ ಪ್ರತ್ಯೂರ್ವಕವಾಗಿ ನನ್ನ ಕೈಕುಲುಕಿ ತನ್ನ ತೀಕ್ಷ್ಣ ಕಣ್ಣುಗ ಳಿಂದ ನನ್ನನ್ನು ಪರೀಕ್ಷಿಸಿ ಹಳೆಯ ಗೆಳೆಯನಂತೆ ನಗೆಯಾಡುತ್ತಾ "ನೀನು ಬಂದುದು ಬಲು ಸಂತೋಷ. ನಿನಗೆ ಕೋಲಾಹಲವೆಂದರೆ ಇಷ್ಟವಿರ ಬಹುದು. ಇಲ್ಲೊಂದು ಪುಟ್ಟ ಕದನವಾಗುತ್ತದೆ ಈ ದಿನ" ಎಂದು ಹೇಳಿದ.

ಲೆನಿನ್ ಹಾಗಿರುವನೆಂದಿರಲಿಲ್ಲ ನಾನು. ನನಗೆ ಅವನಲ್ಲಿ ಏನೋ ಒಂದು ಕೊರತೆ ಕಂಡುಬಂದಿತು. ಅವನು "ರ" ಕಾರವನ್ನು ಉಚ್ಚರಿಸುವಾಗ ಅದನ್ನು ತಿರುವಿ ಉಚ್ಚರಿಸುತ್ತಿದ್ದ. ನಿಲ್ಲುವಾಗ ಕೈಗಳನ್ನು ಕಂಕುಳ ಸಂದಿನಲ್ಲಿ ತುರುಕಿ ವಿಚಿತ್ರವಾಗಿ ನಿಲ್ಲುತ್ತಿದ್ದ. ಅಂತೂ ನಾಯಕನಂತೆ ತೋರದೆ ಸಾಧಾ ರಣ ಪುರುಷನ ಹಾಗೆ ಅವನು ಕಾಣುತ್ತಿದ್ದ. ಸಾಹಿತಿಯಾದುದರಿಂದ ನಾನು ಇದನ್ನೆಲ್ಲಾ ಗುರುತಿಸಿಕೊಳ್ಳಬೇಕಾಗಿದೆ; ಈ ಅನಿವಾರ್ಯ ಅಭ್ಯಾಸ

ವಾಗಿ ಹೋಗಿದೆ. ಕೆಲ ಬಾರಿ ಅದರಿಂದ ಬೋಸಿ ಕೂಡ ಹೋಗುತ್ತದೆ ಮನಸ್ಸು. ನಮ್ಮ ಮೊದಲ ಭೇಟಿಯ ಕಾಲದಲ್ಲಿ ಜಿ. ವಿ. ಪ್ಲೆಕನವ್ ಕೈ ಕಟ್ಟಿ ಕೊಂಡು ತನ್ನ ಕೈಲಾಗುವುದಕ್ಕಿಂತ ಹೆಚ್ಚು ದುಡಿದ ಉಪಾಧ್ಯಾಯ ಹೆಚ್ಚಾಗಿ ಬಂದ ಶಿಷ್ಯನ ಕಡೆ ನೋಡುವಂತೆ ನನ್ನ ಕಡೆಗೆ ಬೇಸರಿಕೆಯಿಂದ ದುರುಗುಟ್ಟಿ ನೋಡುತ್ತಿದ್ದ. ಆತ ಹೇಳಿದ ಮಾತುಗಳಲ್ಲಿ "ನಿನ್ನ ಸಾಹಿತ್ಯ ಮೆಚ್ಚಿದವರಲ್ಲಿ ನಾನೂ ಒಬ್ಬ" ಎಂದು ಗಡುಸಾಗಿ ಅವನಂದುದಲ್ಲದೆ ಮತ್ತೆ ಯಾವುದೂ ನನಗೆ ನೆನಪಿಲ್ಲ. ಸಮ್ಮೇಳನದ ಕಾಲದಲ್ಲಿ ಮತ್ತೆ ಹೃತ್ಪೂರ್ವಕ ಮಾತನಾಡ ಬೇಕೆಂಬ ಇಚ್ಛೆ ನಮ್ಮಿಬ್ಬರಲ್ಲಿ ಯಾರಿಗೂ ಇರಲಿಲ್ಲ.

ತನ್ನ ಒಂದು ಕೈಯಲ್ಲಿ ನನ್ನ ಕೈಹಿಡಿದು, ಮತ್ತೊಂದರಿಂದ ಸಾಕ್ರೆಟೀಸನ ಹಣೆಯಂತಹ ಹಣೆಯನ್ನು ಒರೆಸಿಕೊಳ್ಳುತ್ತಾ ತನ್ನ ಅತಿಮಾನುಷ ಹೊಳಪಿನ ಕಣ್ಣುಗಳಿಂದ ನನ್ನನ್ನೇ ವಿಶ್ವಾಸದಿಂದ ನೋಡುತ್ತಾ ನನ್ನ ಮುಂದೆ ಆಗ ಒಬ್ಬ ಬಟ್ಟತಲೆಯ ದೃಢಕಾಯವ್ಯಕ್ತಿ ನಿಂತಿದ್ದ. ತಕ್ಷಣವೇ ನನ್ನ "ತಾಯಿ" (Mother) ಕಾದಂಬರಿಯ ಕುಂದುಕೊರತೆಗಳ ವಿಚಾರ ಮಾತ ನಾಡಲಾರಂಭಿಸಿದ. ಅಂದರೆ ಅದು ಎಸ್ ಪಿ. ಲಾಡಿಸ್ಲಿಕೋವನ ಬಳಿಯಲ್ಲಿದ್ದ ನನ್ನ ಹಸ್ತಪ್ರತಿಯನ್ನು ಓದಿಯೇ ಇರಬೇಕು. ಅದನ್ನು ಬೇಗನೆ ಪೂರ್ಣಗೊಳಿಸುತ್ತಿದ್ದೇನೆಂದು ಹೇಳಿದೆನಾದರೂ ಕಾರಣ ಹೇಳಲು ನನಗೆ ಸಾಧ್ಯವಾಗಲಿಲ್ಲ. ಒಪ್ಪಿಗೆಯೊಡನೆ ತಲೆದೂಗುತ್ತಾ ಲೆನಿನ್ ತಾನೇ ಹೇಳಿದ– "ನಿಜ; ಅದನ್ನು ಶೀಘ್ರವಾಗಿಯೇ ಮುಗಿಸಬೇಕು. ಅಂತಹ ಪುಸ್ತಕ ಈಗ ಬಹಳ ಅವಶ್ಯಕವಾಗಿದೆ. ಕೂಲಿಗಾರರು ತಿಳಿವಿಲ್ಲದೆಯೋ ಹದನರಿಯದೆಯೋ ಕ್ರಾಂತಿಕಾರಕ ಚಳುವಳಿಯಲ್ಲಿ ಭಾಗವಹಿಸುತ್ತಾರೆ. ಅಂತಹವರಿಗೆ "ತಾಯಿ" ಕಾದಂಬರಿಯನ್ನೋದುವುದರಿಂದ ಬಹಳ ಉಪಯೋಗವಾಗುವುದು. ಕಾಲಕ್ಕೆ ತಕ್ಕ ಪುಸ್ತಕ". ಇದೊಂದೇ ಲೆನಿನ್ ನನಗೆ ಕೊಟ್ಟ ಮೆಚ್ಚಿಕೆ. ನನಗದೇ ಬಲು ಬೆಲೆಯದಾಗಿತ್ತು.

ಆ ಮೇಲೆ ಅದು ಅನುವಾದಿತವಾಗಿಯೇ ರಷ್ಯನ್ ಮತ್ತು ಅಮೆರಿಕನ್ ಸೆನ್ಸಾರಿನಿಂದ (censor) ಬಹಳ ಕಳೆಗೆಟ್ಟಿದೆಯೇ ಎಂದೆಲ್ಲ ವಿಚಾರಿಸಿದ. ಆ ಪುಸ್ತಕದ ಲೇಖಕನನ್ನು ನಿರ್ಬಂಧದಲ್ಲಿಡಬಹುದೆಂದು ನಾನೆನ್ನಲು ಮೊದಲು ಕೋಪದಲ್ಲಿ ಬಿಸಿಯುಸಿರು ಬಿಟ್ಟು ತಕ್ಷಣವೇ ತಲೆಯನ್ನು ಹಿಂದಕ್ಕೆ ಒರಗಿಸಿ

ಕಣ್ಣುಮಚ್ಚಿ ವಿಚಿತ್ರ ನಗೆ ನಕ್ಕ. ಆ ನಗು ಅಲ್ಲಿದ್ದ ಕೂಲಿಗಾರರ ಗಮನ ಸೆಳೆಯಿತು. ಎಫ್. ಉರಾಲ್ಸ್ಕಿಯೂ ಮತ್ತೆ ಮೂರು ಜನರೂ ಹತ್ತಿರ ಬಂದರು.

ನಾನು ಆ ದಿನ ಬಹಳ ಸಂತೋಷಗೊಂಡಿದ್ದೆ. ಸುಸಂಘಟಿತರಾದ ೧೫೦,೦೦೦ ಕೂಲಿಗಾರರ ಪ್ರತಿನಿಧಿಗಳಾದ ೩೦೦ ಮಂದಿ ಆಯ್ದ ಪಾರ್ಟಿಯ ಸದಸ್ಯರ ನಡುವೆ ನಾನು ಅಂದು ಸೇರಿದ್ದೆ. ನನ್ನ ಮುಂದೆ ಪಾರ್ಟಿಯ ಎಲ್ಲಾ ನಾಯಕರೂ ಇದ್ದರು—ಹಳೆಯ ಕ್ರಾಂತಿಕಾರರಾದ ಪ್ಲೆಕನೊವ್, ಅಕ್ಸೆಲ್ರಾಡ್ ಮತ್ತು ಡೋಟನ್ಸ್ಕ. ನನ್ನ ಸ್ವದೇಶದಿಂದ ಹೊರಗಿದ್ದ ಎರಡು ವರ್ಷಗಳ ಕಾಲವೂ ನನ್ನ ಮನಸ್ಸು ಸ್ವಲ್ಪ ಇಳಿಮುಖವಾಗಿಯೇ ಇದ್ದುದರಿಂದ ಆಗ ನಾನು ಹರ್ಷವಾಗಿದ್ದುದು ಆಶ್ಚರ್ಯವಲ್ಲ. ನನ್ನ ಮನೋಭಾವ ಜರ್ಮನಿಯ ಸೋಷಿಯಲ್ ಡೆಮೋಕ್ರಾಟರನ್ನು ಸಂದರ್ಶಿಸಿ ಬರ್ಲಿನ್ನಿನಲ್ಲಿ ಆಗಸ್ಟೇಬಲನ ಭೋಜನಕೂಟದಲ್ಲಿ ಭಾಗ ವಹಿಸಿದಾಗಿನಿಂದಲೇ ಪ್ರಾರಂಭವಾಗಿದ್ದುದು. ಆ ಭೋಜನಕೂಟದಲ್ಲಿ ಬಹಳ ದಪ್ಪಗಿದ್ದ ಸಿಂಗರ್ ನನ್ನ ಪಕ್ಕದಲ್ಲಿ ಕುಳಿತಿದ್ದ. ಉಳಿದ ನಾಯಕರೆಲ್ಲರೂ ಸುತ್ತಮುತ್ತ ಕುಳಿತಿದ್ದರು.

### ಜರ್ಮನ್ ಸೋಷಿಯಲ್ ಡೆಮೋಕ್ರಾಟರೊಂದಿಗೆ

ನಮ್ಮ ಹಗಲೂಟ ಒಂದು ವಿಶಾಲ ಮತ್ತು ಹಿತವಾಗಿದ್ದ ಕೊಠಡಿಯಲ್ಲಿ. ಚಿತ್ತಾರ ಹಾಕಿದ ಬಟ್ಟೆಗಳನ್ನು ಕ್ಯಾನರಿಗಳ ಪಂಜರದ ಮೇಲೂ, ನಮ್ಮ ತಲೆಯ ಕೊಳೆಯಿಂದ ಕುರ್ಚಿಗಳು ಮಾಸದಂತೆ ನೋಡಿಕೊಳ್ಳಲು ಕುರ್ಚಿಗಳ ಮೇಲೂ ಹೊದಿಸಿದ್ದರು. ಊಟ ಕೂಡ ಚೆನ್ನಾಗಿಯೇ ಇತ್ತು. ಎಲ್ಲರೂ ಗಂಭೀರವಾಗಿ ಊಟಮಾಡುತ್ತಾ ಒಬ್ಬರಿಗೊಬ್ಬರಿಗೆ "ಮಾಲ್‌ಸೇಟ್" "Malzeit"] ಎಂದು ಗಂಭೀರವಾಗಿ ಪಿಸುಮಾತಿನಲ್ಲಿ ಹೇಳುತ್ತಿದ್ದರು. ನನಗೆ ಆ ಪದ ಹೊಸದು. ಫ್ರೆಂಚ್ ಭಾಷೆಯಲ್ಲಿ 'ಮಾಲ್' ಎಂದರೆ "ಕೆಟ್ಟ" ಎಂದೂ ಜರ್ಮನ್ ಭಾಷೆಯಲ್ಲಿ "ಸೇಟ್" ಎಂದರೆ "ಕಾಲ" ಎಂದೂ ಅರ್ಥ. ಒಟ್ಟಿನಲ್ಲಿ ಕಾಲ ಕೆಟ್ಟಿದೆ !

ಸಿಂಗರ್ ಕಾಟ್ಸ್ಕಿಯನ್ನು ಒಂದೆರಡು ಬಾರಿ "ನಮ್ಮ ಶೃಂಗಾರಯೋಗಿ (Romanticist)" ಎಂದು ಕರೆದ. ಗರುಡ ಮೂಗಿನ ಬೇಬಲ್ ಆತ್ಮತೃಪ್ತನಂತೆ ಕುಳಿತಿದ್ದ. ನಾವೆಲ್ಲ ರೀನ್ ಮದ್ಯವನ್ನೂ ಬೀರನ್ನೂ ಕುಡಿದೆವು.

ಮದ್ಯ ಉಗುರು ಬೆಚ್ಚಗೆ, ಹುಳಿಯಾಗಿ ಇತ್ತು. ಬೀರ್ ಮಾತ್ರ ಬಹಳ ಸೊಗಸಾಗಿತ್ತು. ಸೋಷಿಯಲ್ ಡೆಮೋಕ್ರಾಟರು ರಷ್ಯ ಕ್ರಾಂತಿ ಮತ್ತು ಪಾರ್ಟಿಯ ವಿಷಯವಾಗಿ ಹಿರಿಯರು, ಮಕ್ಕಳ ವಿಷಯದಲ್ಲಿ ಮಾತ ನಾಡುವಂತೆ ಮಾತನಾಡಿದರು. ಆದರೆ ಜರ್ಮನ್ ಪಾರ್ಟಿ! ಓಹ್! ಅದು ಎಲ್ಲ ವಿಷಯದಲ್ಲೂ ಅತ್ಯುತ್ತಮ! ಸುತ್ತೆಲ್ಲ ಆತ್ಮತೃಪ್ತಿಯ ವಾತಾವರಣ ತುಂಬಿತ್ತು. ಆ ಹಿರಿಯ ನಾಯಕರ ಭಾರ ಹೊತ್ತ ಕುರ್ಚಿಗಳು ಕೂಡ ಆ ಆನಂದದಲ್ಲಿ ತೃಪ್ತಿಗೊಂಡಂತೆ ಕಾಣುತ್ತಿತ್ತು.

ಜರ್ಮನ್ ಪಾರ್ಟಿಯೊಂದಿಗೆ ನನಗಿದ್ದ ಸಂಬಂಧ ಸ್ವಲ್ಪ ಸೂಕ್ಷ್ಮ. ಅದರ ಪ್ರಮುಖ ವ್ಯಕ್ತಿಗಳಲ್ಲೊಬ್ಬ ಸುಪ್ರಸಿದ್ಧ ಪಾರ್ವಸ್ ಬಾಲ್ಶೆವಿಕ್ ಪ್ರಕಟ ನಾಲಯವಾದ ಸ್ನೇನೀ [Znanie] ಯಿಂದ "ಪಪಾತ" [Lower Depths] ನಾಟಕದಿಂದ ಲೇಖಕನಿಗೆ ಬರಬೇಕಾದ ಹಣ ವಸೂಲುಮಾಡುವ ಆಜ್ಞಾ ಪತ್ರ ತೆಗೆದುಕೊಂಡಿದ್ದ. ಆ ಪತ್ರವನ್ನು ಅವನು ಗೂಢವಾಗಿ ಸೆವಾಸ್ಟಪೋಲಿಗೆ ೧೯೦೨ರಲ್ಲಿ ಬಂದಿದ್ದಾಗ ಪ್ರಕಟನಾಲಯದವರು ಕೊಟ್ಟಿದ್ದರು. ವಸೂಲಾದ ಹಣದ ಹಂಚಿಕೆ ಹೀಗಾಗಬೇಕಾಗಿತ್ತು. ೨೦% ಅವನಿಗೆ. ಉಳಿದ ಹಣದಲ್ಲಿ ಕಾಲುಭಾಗ ನನಗೆ ಮುಕ್ಕಾಲು ಭಾಗ ಸೋಷಿಯಲ್ ಡೆಮೋಕ್ರಾಟಿಕ್ ಪಾರ್ಟಿಗೆ. ಪಾರ್ವಸನಿಗೆ ಈ ನಿಯಮ ತಿಳಿದಿದ್ದಿತು. ಅವನ ಒಪ್ಪಿಗೆ ಕೂಡ ಇದ್ದಿತು. ೪ ವರ್ಷಗಳಿಂದ ಆ ನಾಟಕ ಜರ್ಮನಿಯ ಎಲ್ಲ ನಾಟಕ ಮಂದಿರ ಗಳಲ್ಲೂ ಪ್ರದರ್ಶಿತವಾಗುತ್ತಿತ್ತು. ಬರ್ಲಿನ್ನೊಂದರಲ್ಲಿಯೇ ೫೦೦ ಬಾರಿ ಪ್ರದರ್ಶನವಾಗಿತ್ತು. ಪಾರ್ವಸ್ ಏಸಿಲ್ಲೆಂದರೂ ಒಂದು ಲಕ್ಷ ಮಾರ್ಕ್ (ಜರ್ಮನ್ ಹಣ) ಗಳನ್ನು ವಸೂಲು ಮಾಡಿದ್ದನು. 'ಸ್ನೇನಿ' ಗೆ ಹಣ ಕಳುಹಿಸುವ ಬದಲು, ತಾನು ಎಲ್ಲ ಹಣವನ್ನು ಒಬ್ಬ ಸುಂದರ ಯುವತಿ ಯೊಂದಿಗೆ ಇಟಲಿ ಯಾತ್ರೆಯಲ್ಲಿ ಖರ್ಚುಮಾಡಿ ಬಿಟ್ಟನೆಂದು ಕೆ. ಪಿ. ಪ್ಯಾಟ್ನಿ ಟ್ಸಿಗೆ ಪತ್ರಬರೆದು ಬಿಟ್ಟ. ಈ ಸೊಗಸಿನ ಯಾತ್ರೆಯ ಖರ್ಚಿನಲ್ಲಿ ನನ್ನದು ಕೇವಲ ಸ್ವಲ್ಪ ಭಾಗ ಮಾತ್ರ ಇದ್ದುದರಿಂದ ನಾನು ಉಳಿದ ಹಣದ ವಿಚಾರ ವಾಗಿ ಜರ್ಮನ್ ಪಾರ್ಟಿಯ ಕೇಂದ್ರ ಸಭೆಗೆ ಜಿ. ಪಿ. ಲಾಡಿಸ್ನಿಕೋವನ ಮೂಲಕ ಹೇಳಿ ಕಳುಹಿಸಿದೆ. ಆದರೆ ಕೇಂದ್ರ ಸಮಿತಿ ಪಾರ್ವಸನ ಈ ಯಾತ್ರೆಯನ್ನು ಹಂಚಿಕೊಳ್ಳಲಿಲ್ಲ. ಕೊಂಚ ಕಾಲಾನಂತರ ಪಾರ್ವಸನ

ಅಧಿಕಾರ ತಗ್ಗಿಸಿದ್ದಾರೆಂದು ನನಗೆ ತಿಳಿಯಬಂತು. ನಿಜವಾಗಿ ಹೇಳಬೇಕಾದರೆ ಅವನ ಕಿವಿ ಹಿಂಡಿದ್ದರೆ ನನಗೆ ತೃಪ್ತಿಯಾಗುತ್ತಿತ್ತು. ಕೆಲವು ದಿನಗಳ ನಂತರ ನಾನು ಪ್ಯಾರಿಸ್ಸಿನಲ್ಲಿದ್ದಾಗ ಒಬ್ಬ ಅತಿ ಸುಂದರ ಯುವತಿಯನ್ನು ಪಾರ್ವಸನ ಇಟಲಿ ಯಾತ್ರೆಯ ಗೆಳತಿಯೆಂದು ತೋರಿಸಿದರು. " ಬಹಳ ಸೊಗಸುಗಾತಿ " ಎಂದುಕೊಂಡೆ ನಾನು ಮನಸ್ಸಿನಲ್ಲಿಯೇ. ನಾನು ಬರ್ಲಿನ್ನಿನಲ್ಲಿದ್ದಾಗ ಬಹಳ ಮಂದಿ ಕಲಾವಿದರು, ಲೇಖಕರು, ಕಲಾಪೋಷಕರು ಎಲ್ಲರನ್ನು ಕಂಡಿದ್ದೆ. ಆದರೆ ಒಬ್ಬರಿಗೊಬ್ಬರಿಗಿದ್ದ ಅಂತರ ಆತ್ಮತೃಪ್ತಿಯ , ಆತ್ಮಪ್ರಶಂಸೆಯ ಪ್ರಮಾಣದಲ್ಲಿ ಮಾತ್ರ !

## ಅಮೇರಿಕೆ ಯಾತ್ರೆ

ನಾನು ಅಮೇರಿಕದಲ್ಲಿದ್ದಾಗ ನ್ಯೂಯಾರ್ಕಿನ ಗರ್ವರ್ ಇಲ್ಲಿ ಅಧ್ಯಕ್ಷನಾಗಬೇಕೆಂದು ಯತ್ನಿಸುತ್ತಿದ್ದ, ಮಾರಿಸ್ ಹಿಲ್‌ಕ್ವಿಟನನ್ನೂ ಆಗ ತಾನೇ ಸೆರೆಯಿಂದ ಹೊರಬಂದು ಎಲ್ಲರನ್ನೂ ಎಲ್ಲವನ್ನೂ ತೆಗಳುತ್ತಿದ್ದ ಮುದುಕ ಡೆಬ್ಸನನ್ನು ಅನೇಕ ಸಾರಿ ಕಂಡಿದ್ದೆ. ಅವರೊಂದಿಗೆ ಬಹಳ ಓಡಾಡಿದ್ದೆ ಕೂಡ. ನಾನು ಬಹಳ ಕಡೆಗಳಲ್ಲಿ ತಿರುಗಿ ಬಹಳ ಜನರನ್ನು ಕಂಡಿದ್ದೆ. ಆದರೆ ರಷ್ಯ ಕ್ರಾಂತಿಯ ನಿಜ ತತ್ವವನ್ನು ಅರ್ಥಮಾಡಿಕೊಂಡ ಒಬ್ಬನೇ ಒಬ್ಬನನ್ನು ಕೂಡ ಕಾಣಲಿಲ್ಲ. ಎಲ್ಲರೂ "ಯೂರೋಪಿನ ಜೀವನದಲ್ಲಿ ಅದೂ ಒಂದು ಪುಟ್ಟಘಟನೆ" ಎಂದೋ ಇಲ್ಲವೇ 'ಸಾಮ್ಯವಾದೀ ವಿಶ್ವಾಸಿ' ಸುಂದರ ತರುಣಿ ಹೇಳಿದಂತೆ " ಕಾಳಗವೋ ಕ್ರಾಂತಿಯೋ ಇರುವ ದೇಶದಲ್ಲಿ " ಒಂದು ಸಾಮಾನ್ಯ ಸಂಗತಿಯೆಂದೋ ಎನ್ನುತ್ತಿದ್ದರು.

ಬ್ಯಾಲ್ಷೆವಿಕ್ ಪಾರ್ಟಿಗಾಗಿ ಅಮೇರಿಕಾ ಯಾತ್ರೆ ಮಾಡಿ ಹಣ ಎತ್ತಬೇಕೆಂಬ ಸೂಚನೆ ಎಲ್. ಬಿ. ಕ್ರಾಸಿನ್ನನಿಂದ ಬಂದುದು. ನನಗೆ ಕಾರ್ಯದರ್ಶಿಯಾಗಿ ಪೋರೋಸ್ಪಿ ಬರಬೇಕಾಗಿತ್ತು. ಅವನೇ ಸಭೆಗಳನ್ನು ಸಮ್ಮೇಳನಗಳನ್ನು ಏರ್ಪಡಿಸುವ ಸಂಚಾಲಕನ ಕೆಲಸವನ್ನು ನೋಡಿಕೊಳ್ಳಬೇಕಾಗಿತ್ತು. ಅವನಿಗೆ ಇಂಗ್ಲೀಷ್ ಚೆನ್ನಾಗಿ ಬರುತ್ತಿತ್ತು. ಆದರೆ ಪಾರ್ಟಿ ಅವನಿಗೆ ಬೇರೆ ಕೆಲಸ ಕೊಟ್ಟುದರಿಂದ ಅವನಿಗೆ ಬದಲಾಗಿ ಇಂಗ್ಲಿಷ್ ಚೆನ್ನಾಗಿ ಬರದಿದ್ದ ಎನ್. ಇ. ಬರ್ನೆನ್ ನನ್ನೊಂದಿಗೆ ಬಂದ. ಅಮೇರಿಕಕ್ಕೆ ಹೋಗುವ ಹಾದಿಯಲ್ಲಿ ಅವನು ಇಂಗ್ಲಿಷ್ ಕಲಿಯುತ್ತಿದ್ದ. ನನ್ನ ಪ್ರಯಾಣ ತಿಳಿದ ಸಮಾಜ

್ರಾಂತಿಕಾರರು [Social Revolutionaries] ಮಕ್ಕಳಂತೆ ಬಹಳ ಆಸಕ್ತಿ
ೋರಿಸಿದರು. ನಾನಿನ್ನೂ ಫಿನ್ಲೆಂಡಿನಲ್ಲಿದ್ದಾಗಲೇ ಚೆಕೊವ್ಸಿ ಮತ್ತು ಸಿಟ್ಲೊ
್ರಗಳು ನನ್ನ ಬಳಿಬಂದು ಬಾಲ್ಶೆವಿಕರಿಗೆ ಮಾತ್ರ ಹಣವೆತ್ತುವ ಬದಲು
ರ್ವತ್ರ ಕ್ರಾಂತಿಗಾಗಿ ಎತ್ತೋಣ ಎಂದು ಸೂಚಿಸಿದರು. ನಾನು ಅದಕ್ಕೊಪ್ಪ
ರಲು ಅವರು ಅಮೇರಿಕಕ್ಕೆ "ಬಾಬುಷ್ಕ" ಳನ್ನು ಕಳುಹಿಸಿದರು.
ಂದರೆ ಅಮೇರಿಕದಲ್ಲಿ ಇಬ್ಬರು ವ್ಯಕ್ತಿಗಳು, ಒಬ್ಬರಿಗೊಬ್ಬರ ಸಂಪರ್ಕವಿಲ್ಲದೆ
ಂದೇ ಕಾಲದಲ್ಲಿ ಎರಡು ಬೇರೆ ಬೇರೆ ಕ್ರಾಂತಿಗಳಿಗಾಗಿ ಹಣವೆತ್ತುತ್ತಿರುವ
ಂದಾಯಿತು. ಅಮೇರಿಕನರಂತೂ ಯಾವುದು ಸರಿ ಯಾವುದು ತಪ್ಪು
ಂದು ಯೋಚಿಸಲು ಇಚ್ಛಿಸುತ್ತಲೂ ಇರಲಿಲ್ಲ ; ಅವರಿಗೆ ಅದಕ್ಕೆ ವಿರಾಮ
ೂಡ ಇರಲಿಲ್ಲ. ಇದೂ ಅಲ್ಲದೆ ಅವರಿಗೆ "ಬಾಬುಷ್ಕ" ಮೊದಲಿನಿಂದಲೇ
ಳಿದಿದ್ದವಳು. ಆವಳ ಅಮೇರಿಕನ್ ಸ್ನೇಹಿತರಾಗಲೇ ಅವಳ ವಿಚಾರ
್ರಚಾರಮಾಡಿ ಅವಳ ದಾರಿಯನ್ನು ಸುಗಮ ಮಾಡಿದ್ದರು. ಇದರ ಜತೆಗೆ
ಶ್ಯನ್ ಸರ್ಕಾರದ ವಿದೇಶಾಂಗ ಕಛೇರಿಯವರು ನನ್ನ ಮೇಲೆ ಬೇಕಾದಷ್ಟು
ಸಪ್ರಚಾರ ಮಾಡಿದರು. ನನ್ನ ಅಮೇರಿಕನ್ ಗೆಳೆಯರು ಕೂಡ ರಷ್ಯ
್ರಾಂತಿ ಬರಿಯ "ಸ್ಥಳೀಯ" ಎಂದುಕೊಂಡು ನಾವೆತ್ತಿದ ಹಣವನ್ನು ಅಷ್ಟು
ಚಕ್ಷಣೆಯಿಂದ ನೋಡಿಕೊಳ್ಳ ಲಿಲ್ಲ. ಅಂತೂ ನಾನು ಅಮೇರಿಕದಲ್ಲಿ ಬಲು
ಸ್ವಲ್ಪ ಹಣಮಾತ್ರ – ಎಂದರೆ ಸುಮಾರು ೧೦,೦೦೦ ಡಾಲರುಗಳಿಗೂ ಕೊಂಚ
ಡಿಮೆಯೇ ವಸೂಲು ಮಾಡಲು ಸಾಧ್ಯವಾಯಿತು. ಪತ್ರಿಕೆಗಳಿಗೆ ಬರೆ
ಾದರೂ ಸ್ವಲ್ಪ ಹಣ ಗಳಿಸೋಣವೆಂದಿದ್ದೆ. ಆದರೆ ಸಾರ್ವಸನಂತಹವನು
ುತ್ತೊಬ್ಬ ಅಲ್ಲಿಯೂ ಗಂಟುಬಿದ್ದ. ಒಟ್ಟಿನಲ್ಲಿ ನನ್ನ ಅಮೇರಿಕನ್ ಯಾತ್ರೆ
ಲಕಾರಿಯಾಗಲಿಲ್ಲ. ಆದರೆ ನಾನು ನನ್ನ "ತಾಯಿ (Mother)" ಕಾದಂ
ರಿಯನ್ನು ಅಲ್ಲಿಯೇ ಬರೆದುದು.

ಇದಾದ ಮೇಲೆ ನಾನು ಇಟಲಿಯ ಕ್ಯಾಪ್ರಿಗೆ ಹೋಗಿ ಅಲ್ಲಿ ರಷ್ಯ
ುಸ್ತಕಗಳನ್ನು ಪತ್ರಿಕೆಗಳನ್ನು ಓದುವುದರಲ್ಲಿ ಮಗ್ನನಾದೆ. ಇದರಿಂದ ನನ್ನ
ುನೋಭಾರ ಹೆಚ್ಚಾಯಿತು. ಬಿದ್ದು ಹೋದ ಹಲ್ಲಿಗೆ ಭಾವಾನುಭವಶಕ್ತಿ
ದ್ದಿದ್ದರೆ ಅದು ನನ್ನಂತೆಯೇ ಒಬ್ಬೊಂಟಿತನದ ಬೇಸರ ಅನುಭವಿಸುತ್ತಿತ್ತೋ
ನೊ. ಪ್ರಸಿದ್ಧ ವ್ಯಕ್ತಿಗಳು ಒಂದು ರಾಜಕೀಯ ಗುಂಪಿನಿಂದ ಮತ್ತೊಂದಕ್ಕೆ

ನೆಗೆದಾಡುವ ಚಮತ್ಕಾರ ಮತ್ತು ವೇಗವನ್ನು ಕಂಡು ನನಗೆ ಬಹಳ ಆಶ್ಚರ್ಯ ವಾಗುತ್ತಿತ್ತು.

ರಷ್ಯದಲ್ಲಿ ದಬ್ಬಾಳಿಕೆಗೆ ಸಿಕ್ಕಿ, ಬೆದರಿ, ತಮ್ಮನ್ನು "ನಿಷ್ಪ್ರಯೋಜಕ ಕಾರ್ಯದಲ್ಲಿ" ನಿಯೋಜಿಸಿದವರನ್ನು ದೂಷಿಸುತ್ತ ನೊಂದ ಕ್ರಾಂತಿಕಾರರು ಗುಟ್ಟಾಗಿ ಅಲ್ಲಿಗೆ ಬರುತ್ತಿದ್ದರು. "ಸರ್ವನಾಶ! ಎಲ್ಲ ನಿರ್ನಾಮವಾಗಿ ಹೋಯಿತು! ಎಲ್ಲರನ್ನೂ ಸೆರೆ ಹಾಕಿಬಿಟ್ಟರು, ಗಡೀಪಾರು ಮಾಡಿಬಿಟ್ಟರು" ಎಂಬುದೇ ಅವರ ಗೋಳು.

ಇದರಲ್ಲಿ ಬಲು ಭಾಗ ಅರ್ಥವಿಲ್ಲದ ಕೂಗು; ಆಸೆಯ ಕಿರಣ ಶೂನ್ಯ. ರಷ್ಯದ ಒಬ್ಬ ಪ್ರತಿಭಾವಂತ ಲೇಖಕ ನನ್ನನ್ನು "ಪಪಾತ" ನಾಟಕದ ಲ್ಯಾಕನೆಂದು ಕೂಡ ದೂಷಿಸಿದ – ಒಳ್ಳೆಯ ಮಾತುಗಳಿಂದ ಎಳೆ ಹುಡುಗರನ್ನು ಒಲಿಸಿಕೊಂಡು ಅವರನ್ನು ಪೆಟ್ಟು ತಿನ್ನಲು ಬಿಟ್ಟು ಓಡಿಹೋಗಿ ದ್ದೇನೆ ಎಂದು. ಮತ್ತೊಬ್ಬ ನನ್ನನ್ನು "ಸಂಪ್ರದಾಯ" ನುಂಗಿದೆಯೆಂದೂ, ನನ್ನ "ಕಾಲ ಮುಗಿಯಿತು" ಎಂದೂ, ಆ ನೃತ್ಯ [ಪಪಾತ ನಾಟಕದಲ್ಲಿ] ಸಾಮ್ರಾಜ್ಯಶಾಹಿ ನೃತ್ಯವಾದುದರಿಂದ ಅರ್ಥವಿಲ್ಲದುದೆಂದೂ ಕೂಗಾಡಿದ. ಅಂತೂ ಒಟ್ಟಿನಲ್ಲಿ ಅರ್ಥವಿಲ್ಲದ ಮತ್ತು ಮೌಢ್ಯದ ಕಲವು ಮಾತುಗಳನ್ನು ಅವರೆಲ್ಲರೂ ಅಂದರು. ಒಂದೊಂದು ವೇಳೆ ರಷ್ಯದಿಂದ ಹೊಡೆತದ ಬಿರುಗಾಳಿ ಬೀಸುತ್ತಿದೆ ಎಂದುಕೊಳ್ಳುತ್ತಿದ್ದೆ.

ಆಗ, ಇದ್ದಕ್ಕಿದ್ದಂತೆ, ರಷ್ಯನ್ ಸೋಷಿಯಲ್ ಡೆಮೋಕ್ರಾಟಿಕ್ ಪಾರ್ಟಿಯ ಸಮ್ಮೇಳನಕ್ಕೆ ಬಂದೆ. ಅದೊಂದು ಮಹಾ ದಿನ ನನಗೆ!

## ಲಂಡನ್ ಸಮ್ಮೇಳನದಲ್ಲಿ

ನನ್ನ ಹರ್ಷ ನನ್ನಲ್ಲಿ ಉಳಿದಿದ್ದುದು ಮೊದಲನೆಯ ದಿನದ ಸಭೆಯ ವರೆಗೆ ಮಾತ್ರ. ಮೊದಲ ದಿನದ ಸಭೆಯಲ್ಲಿ ನಡೆದ ಅಂದಿನ ನೀತಿಯ ಮೇಲಿನ ಚರ್ಚೆಗಳ ಕಾವು ನನ್ನ ಉತ್ಸಾಹವನ್ನು ತಣ್ಣಗೆ ಮಾಡಿಬಿಟ್ಟಿತು. ಅದಕ್ಕೆ ಕಾರಣ – ಪಾರ್ಟಿಯಲ್ಲಿ ಕ್ರಾಂತಿಕಾರಿ ಮತ್ತು ಸುಧಾರಣಾವಾದಿ ಗಳೆಂದು ಎರಡು ಪಂಗಡಗಳಾದುದಲ್ಲ. ಇದು ನನಗೆ ೧೯೦೩ರಲ್ಲಿಯೇ ತಿಳಿದಿತ್ತು, ಆದರೆ ಈ ಸುಧಾರಣಾವಾದಿಗಳು ಲೆನಿನನಲ್ಲಿ ತೋರುತ್ತಿದ್ದ

ದ್ವೇಷದಿಂದ, ಬಿರುಕು ಬಿಟ್ಟ ಹಳೆಯ ನಲ್ಲಿಯಿಂದ ನೀರು ಹೊರಚಿಮ್ಮುವಂತೆ ಅವರ ಭಾಷಣಗಳಲ್ಲಿ ದ್ವೇಷ ಚಿಮ್ಮುತ್ತಿತ್ತು.

ಯಾವಾಗಲೂ ಹೇಳುವ ಮಾತುಗಳಷ್ಟೇ ಅಲ್ಲ ಹೇಳುವ ರೀತಿ ಮುಖ್ಯ. ಪ್ಲೆಕನಸ್ ಪ್ರಾಟೆಸ್ಟೆಂಟ್ ಪಾದ್ರಿಯಂತೆ ಗುಂಡಿಹಾಕಿದ ಪುಟ್ಟಂಗಿಯೊಂದನ್ನು ತೊಟ್ಟು ಸಮ್ಮೇಳನದ ಪ್ರಾರಂಭೋತ್ಸವ ನಡೆಸಿದಾಗ, ಚರ್ಚಿನ ಪಾದ್ರಿಯಂತೆ ತನ್ನ ಭಾಷಣದಲ್ಲಿ ಪ್ರತಿಯೊಂದು ಮಾತೂ, ಪ್ರತಿಯೊಂದು ವಿರಾಮವೂ ಬಲು ಬೆಲೆಯವೆಂದು ತಿಳಿದು ಮಾತನಾಡಿದ. ಪ್ರತಿನಿಧಿಗಳಿಗಿಂತ ಸ್ವಲ್ಪ ಮೇಲೆ ನಿಂತು ಬಹಳ ಚಾಕಚಕ್ಯತೆಯಿಂದ ಅವನು ಪದಪ್ರಯೋಗ ನಡೆಸುತ್ತಿದ್ದ. ಬಾಲ್ಷೆವಿಕರ ಗುಂಪಿನಲ್ಲಿ ಸ್ವಲ್ಪ ಸದ್ದಾದರೂ ಸರಿ, ಯಾರಾದರೂ ಮತ್ತೊಬ್ಬ ಗೆಳೆಯನೊಡನೆ ಪಿಸುಗುಟ್ಟಿದರೂ ಸರಿ ಆ ಕಡೆಗೆ ಸೂಜಿಯ ಮೊನೆಯಂತೆ ತೀಕ್ಷ್ಣದೃಷ್ಟಿಯಿಂದ ದುರುಗುಟ್ಟಿ ನೋಡಿ, ಸ್ವಲ್ಪ ವೇಳೆ ಮೌನವಾಗಿರುತ್ತಿದ್ದ. ಅವನ ಪುಟ್ಟಂಗಿಯ ಗುಂಡಿಗಳಲ್ಲಿ ಒಂದು ಗುಂಡಿ ಅವನಿಗೆ ಬಹಳ ಪ್ರಿಯವಾಗಿತ್ತು, ಅದನ್ನೇ ಬಹಳ ಆದರದಿಂದ ಸವರುತ್ತಿದ್ದ—ಮಾತಿನ ನಡುನಡುವೆ ಮೌನದಲ್ಲಿ ಅದನ್ನು ವಿದ್ಯುದ್ಘಂಟೆಯ ಗುಂಡಿಯನ್ನೊತ್ತುವಂತೆ ಬಲವಾಗಿ ಒತ್ತುತ್ತಿದ್ದ. ಈ ಒತ್ತಡದಿಂದ ಅವನ ಭಾಷಣದ ವಿದ್ಯುತ್ಸ್ಫೂರ್ತಿ ನಿಲ್ಲುತ್ತಿತ್ತೋ ಏನೋ ! ಒಂದು ಸಾರಿ ಯಾವದೋ ಸಭೆಯಲ್ಲಿ ಒಬ್ಬರ ಪ್ರಶ್ನೆಗಳಿಗೆ ಉತ್ತರ ಕೊಡುತಿದ್ದು ನಿಂತು ಪ್ಲೆಕನವ್ ತನ್ನ ಕೈಕಟ್ಟಿಕೊಂಡು ಜೋರಾಗಿ ತಿರಸ್ಕಾರದಿಂದ "ಹೋ!" ಎಂದು ಬಿಟ್ಟ. ಕೂಡಲೇ ಬಾಲ್ಷೆವಿಕ್ ಗುಂಪಿನಕೂಲಿಗಾರರು ನಕ್ಕುಬಿಟ್ಟರು. ಪ್ಲೆಕನವ್ ಹುಬ್ಬುಗಂಟಿಕ್ಕಿದ ಮತ್ತು ಅವನ ಕೆನ್ನೆ ವಿವರ್ಣವಾಯಿತು—ಕೆನ್ನೆಯೆಂದೆ-ನಾನು ವೇದಿಕೆಯ ಒಂದು ಪಕ್ಕದಲ್ಲಿ ಕುಳಿತಿದ್ದುದರಿಂದ ಅವನ ಮುಖದ ಒಂದು ಪಾರ್ಶ್ವವನ್ನು ಚೆನ್ನಾಗಿ ನೋಡಬಹುದಿತ್ತು.

ಮೊದಲನೆಯ ದಿನದ ಸಭೆಯಲ್ಲಿ ಪ್ಲೆಕನವ್ ಭಾಷಣ ಮಾಡುತ್ತಿದ್ದಾಗ ಬಾಲ್ಷೆವಿಕ್ ಗುಂಪಿನಲ್ಲಿ ಬಹಳ ಒದ್ದಾಡುತ್ತಿದ್ದವನೆಂದರೆ ಲೆನಿನ್. ಒಂದು ಸಾರಿ ಚಳಿ ಹಿಡಿದವನಂತೆ ಮುದುರಿಕೊಳ್ಳುವನು. ತಕ್ಷಣವೇ ಬಿಸಿತಾಗಿದವನಂತೆ ಒದ್ದಾಡುವನು. ತನ್ನ ಕೈಬೆರಳುಗಳನ್ನು ಕಂಕುಳ ಸಂದಿನಲ್ಲಿಟ್ಟು, ಮತ್ತೆ ಗಲ್ಲತುರಿಸಿಕೊಂಡು, ತಲೆದೂಗಿ ಎಂ. ಪಿ. ಟೊಂಸ್ಕಿಗೆ ಏನೋ ಹೇಳಿದ, ಪ್ಲೆಕನಸ್ ಭಾಷಣಮಾಡುತ್ತಾ ಪುನರ್ವಿಮರ್ಶಕವಾದಿಗಳು[Revisionists]

ಪಾರ್ಟಿಯಲ್ಲಿ ಯಾರೂ ಇಲ್ಲವೆನ್ನಲು ಲೆನಿನ್ ತಲೆಬಾಗಿಸಿದ. ಅವನ ತಲೆಯಲ್ಲಿನ ಬಟ್ಟಪ್ರದೇಶ ಬಲು ಕೆಂಪಾಯಿತು ಮತ್ತು ಅವನ ಭುಜಗಳು ನಿಶ್ಯಬ್ದ ನಗುವಿನಿಂದ ಅಲ್ಲಾಡಿದುವು. ಅವನ ಅಕ್ಕಪಕ್ಕದಲ್ಲಿದ್ದರೂ ಮತ್ತು ಹಿಂದೆ ಕುಳಿತಿದ್ದ ಕೂಲಿಗಾರರೂ ನಿಶ್ಯಬ್ದವಾಗಿ ನಸುನಕ್ಕರು. ಮಂದಿರದ ಹಿಂಭಾಗದಲ್ಲಿನ ಬೆಂಚಿನಿಂದ ಯಾರೋ ಜೋರಾಗಿ "ಅಲ್ಲಿ ಕುಳಿತಿರುವವರ ವಿಚಾರವೇನು ?" ಎಂದು ಗಡುಸಾಗಿ ಕೂಗಿದರು.

ಥಿಯೋಡೊರ್ ಡಾನ್ [Theodore Dan] ತನ್ನ ಸತ್ಯದ ಸಂಬಂಧ ತಂದೆ ಮಗಳ ಸಂಬಂಧವೆಂಬಂತೆಯೂ, ಇದುವರೆಗೂ ಸತ್ಯಕನ್ಯೆಯನ್ನು ತಾನೇ ಪಾಲಿಸುತ್ತಿರುವಂತೆ ಮುಂದೆ ಪಾಲಿಸುವವನಂತೆ ಆತ್ಮತೃಪ್ತಿಯಿಂದ, ಗರ್ವದಿಂದ ಮಾತನಾಡಿದ. ತಾನೆಂದರೆ ಕಾರ್ಲ್‌ಮಾರ್ಕ್ಸ್‌ನ ಪುನರವತಾರ-ಬಾಲ್ಶೆವಿಕರೆಂದರೆ ಅರೆಕಲಿತ ನಡವಳಿಕೆಯರಿಯದ ಬಾಲಕರು, ಇದು ಅವನ ಭಾವನೆ. ಏಕೆಂದರೆ "ಹಿರಿಯ ಮಾರ್ಕ್ಸ್‌ವಾದಿಗಳೆಲ್ಲರೂ" ಇರುವ ಮೆನ್ಶೆವಿಕರೊಂದಿಗೆ ಇವರ ನಡವಳಿಕೆಯಿಂದಲೇ ಇದು ವ್ಯಕ್ತವಾಗುತ್ತದೆ. "ನೀವು ಮಾರ್ಕ್ಸ್‌ನ ಅನುಯಾಯಿಗಳಲ್ಲ. ನೀವು ಮಾರ್ಕ್ಸ್‌ನ ಅನುಯಾಯಿಗಳಲ್ಲ" ತನ್ನ ಹಳದಿ ಬಣ್ಣದ ತೋಳನ್ನು ಮುಂದೆ ಚಾಚುತ್ತಾ ಅವನು ಕೂಗಿದ. ಕೂಲಿಗಾರರಲೊಬ್ಬ ಕೂಡಲೇ ಅವನನ್ನು "ಮಿತವಾದಿ [Liberals] ಗಳೊಂದಿಗೆ ಮತ್ತೆ ಯಾವಾಗ ಚಹಾ ಸೇವನೆಗೆ ಹೋಗುವೆ ?" ಎಂದು ಪ್ರಶ್ನಿಸಿದ.

ಈ ಸಭೆಯಲ್ಲಿ ಮಾರ್ಟೊವ್ ಮಾತನಾಡಿದನೋ ಇಲ್ಲವೋ ಸರಿಯಾಗಿ ಜ್ಞಾಪಕವಿಲ್ಲ. ಈ ಪ್ರಭಾವಶಾಲಿ ಯೌವನದ ಉದ್ರೇಕದೊಂದಿಗೆ ಮಾತನಾಡಿದ. ಅವನಿಗೆ ಪಾರ್ಟಿಯಲ್ಲಿನ ಭೇದ ವಿಭಜನೆಗಳಿಂದ ಬಹಳ ದುಃಖವಾಗಿತ್ತೆಂದು ಚೆನ್ನಾಗಿ ತಿಳಿಯುತ್ತಿತ್ತು. ಅವನ ಮೈ ಅದುರುತ್ತಾ ಹಿಂದೆ ಮುಂದಕ್ಕೂ ಓಲಾಡುತ್ತಿತ್ತು. ಮಾತನಾಡುವಾಗ ಷರಟಿನ ಕಾಲರನ್ನು ಬಿಚ್ಚಿ ಕೈಯನ್ನು ಈ ಕಡೆಯಿಂದ ಆ ಕಡೆ ಬೀಸುತ್ತಿದ್ದ. ಅವನ ಷರಟಿನ ಕಫ ಕೋಟಿನ ತೋಳಿನಿಂದ ಕೆಳಕ್ಕೆ ಬಂದಾಗ ಕೈಮೇಲೆತ್ತಿ ಅದನ್ನು ಸರಿಪಡಿಸಿಕೊಳ್ಳುತ್ತಿದ್ದ. ಮಾರ್ಟೊವನ ಭಾಷಣದಲ್ಲಿ ವಿಚಾರಕ್ಕಿಂತಲೂ ಹೆಚ್ಚಾಗಿ ಒತ್ತಾಯ, ಬೇಡಿಕೆಗಳೇ ಹೆಚ್ಚೆನ್ನಬಹುದು. "ಇಂದು ಪಾರ್ಟಿ ಬಲಯು

ವಾಗಿಲ್ಲ. ನಮ್ಮ ನಮ್ಮಲ್ಲಿನ ವೈಷಮ್ಯ ಕೊನೆಗೊಳ್ಳಬೇಕು. ಎಲ್ಲದಕ್ಕೂ ಮೊದಲು ಸೆರೆಯಲ್ಲಿರುವ ಕೂಲಿಗಾರರ ಬಿಡುಗಡೆಯಾಗಬೇಕು. ಅವರು ನಿರಾಸೆಗೊಳ್ಳದಂತೆ ಎಚ್ಚರಿಕೆಯಿಂದಿರಬೇಕು." ಅವನ ಭಾಷಣದ ಪೂರ್ವಾರ್ಧ ದಲ್ಲಿ ಹುಚ್ಚನಂತಾಡಿಬಿಟ್ಟ. ಪದಪ್ರವಾಹದಿಂದ ಅರ್ಥಕ್ಕೆ ತಡೆಬಂದು ಅರ್ಥ ಅಷ್ಟು ವಿವರವಾಗಿ ತಿಳಿಯಲಿಲ್ಲ. ಅವನೇ ಬಹಳ ಕರುಣಾಜನಕನಾಗಿ ಕಾಣು ತ್ತಿದ್ದ. ಅವನ ಭಾಷಣದ ಕೊನೆಯಲ್ಲಿ ಅದೇ ಉದ್ರೇಕದಿಂದ ಉತ್ಸಾಹಿಗಳ ಗುಂಪನ್ನು ಬಂಡಾಯಕ್ಕಾಗಿ ಕೆಲಸ ನಡೆಸುವವರನ್ನು ಮನಬಂದಂತೆ ನಿಂದಿ ಸಿದ. ನನಗಿನ್ನೂ ಚೆನ್ನಾಗಿ ನೆನಪಿದೆ. ಬಾಲ್ಷೆವಿಕ್ ಗುಂಪಿನಿಂದ ಯಾರೋ ಒಬ್ಬರು "ಹಾಗನ್ನು!" ಎಂದರು. ಇನ್ನು ಯಾರೋ ಒಬ್ಬರು,—ಟ್ರಾಂಸ್ಕಿಯೇ ಇರಬೇಕು – "ಗೆಳೆಯ ಮಾರ್ಟೊವನ ಮನಶ್ಶಾಂತಿಗಾಗಿ ನಾವೆಲ್ಲರೂ ಕೈಕತ್ತ ರಿಸಿಕೊಳ್ಳಬೇಕೇನೋ" ಎಂದರು. ಅದೇ - ಮಾರ್ಟೊವ್ ಈ ಸಭೆಯಲ್ಲಿ ಭಾಷಣಮಾಡಿದನೋ ಇಲ್ಲವೋ ನನಗೆ ಸರಿಯಾಗಿ ನೆನಪಿಲ್ಲ. ಆದರೆ ಅಲ್ಲಿಯ ಭಾಷಣಗಳ ವಿವಿಧತೆ ಹೇಗಿತ್ತೆಂದು ತೋರುವುದಕ್ಕಾಗಿ ಹೇಳಿದೆ ಅಷ್ಟೆ.

ಅವನ ಭಾಷಣವಾದ ಮೇಲೆ ಸಮ್ಮೇಳನ ಮಂದಿರದ ಪಕ್ಕದ ಕೊಠಡಿ ಯಲ್ಲಿ ಕೊಂಚ ನಿರಾಶಾಭರಿತ ವಿಮರ್ಶೆ ನಡೆಸುತ್ತಿದ್ದರು ಕೂಲಿಗಾರರು. "ಹುಂ! ಮಾರ್ಟೋವನನ್ನು ನೋಡಿದಿರಾ? ಅವನೂ 'ಇಸ್ಕ್ರಾ' ಗುಂಪಿ ನಲ್ಲಿದ್ದವನು." "ನಮ್ಮ ಬುದ್ಧಿಜೀವಿ ಗೆಳೆಯರು ಬಣ್ಣ ಬದಲಿಸುತ್ತಿದ್ದಾರೆ."

## ಲೆನಿನನ ಭಾಷಣ

ರೋಸಾ ಲಕ್ಸೆಂಬರ್ಗ್ ಬಹಳ ನಿರರ್ಗಳವಾಗಿ, ಉದ್ರಿಕ್ತಳಾಗಿ ವಿಡಂಬ ಕಾತ್ಮಕ ಭಾಷಣಮಾಡಿದಳು. ಈಗ ವ್ಲಾಡಿಮರ್ ಲೆನಿನ್ ವೇದಿಕೆಯ ಮೇಲೆ ಹತ್ತಿನಿಂತು ಸಾಮಾನ್ಯರಂತೆ "ಗೆಳೆಯರೇ" ಎನ್ನುತ್ತಾನೆ. ನನಗೇನೋ ಅವನು ಚೆನ್ನಾಗಿ ಭಾಷಣಮಾಡುವುದಿಲ್ಲವೆನ್ನಿಸಿತು. ಆದರೆ ಒಂದೆರಡು ನಿಮಿಷಗಳಲ್ಲಿಯೇ ಎಲ್ಲರೂ ಅವನ ಮಾತುಗಳಲ್ಲಿ ಮಗ್ನರಾಗಿ ಹೋದೆವು. ಅಷ್ಟೊಂದು ಸುಲಭವಾಗಿ ಸರಳವಾಗಿ ಕಠಿಣ ರಾಜಕೀಯ ಸಮಸ್ಯೆಗಳನ್ನು ವಿವರಿಸಿ ವಿಮರ್ಶಿಸಿದುದನ್ನು ಕಂಡುದು ನಾನು ಅದೇ ಮೊದಲು. ಪದ ಪ್ರಯೋಗದಲ್ಲಿ ಆಡಂಬರವಿಲ್ಲದೆ ಪ್ರತಿಯೊಂದು ಪದವನ್ನೂ ಚೆನ್ನಾಗಿ ಉಚ್ಚ

ರಿಸುತ್ತಿದ್ದುದರಿಂದ ಎಲ್ಲವೂ ಸುಲಭವಾಗಿ ಅರ್ಥವಾಗುತ್ತಿತ್ತು. ಅವನು ಆ ದಿನ ನಮ್ಮ ಮೇಲೆ ಬೀರಿದ ಪ್ರಭಾವ ವರ್ಣಿಸುವುದು ಬಹಳ ಕಷ್ಟದ ಕೆಲಸ.

ತೋಳನ್ನು ಮುಂಚಾಚಿ ಮೇಲೆತ್ತಿದ್ದ. ಆದರಿಂದಲೇ ತನ್ನ ಪದಗಳನ್ನೆಲ್ಲ ತೂಗಿ, ವಿರುದ್ಧಪಕ್ಷದವರ ವಿಚಾರಗಳನ್ನು ಒತ್ತರಿಸಿ, ಮಿತವಾದಿ ಮಧ್ಯವರ್ಗದವರನ್ನು ಹಿಂಬಾಲಿಸದೆ ತಮ್ಮ ದಾರಿಯಲ್ಲಿ ಸಾಗಲು ಕೂಲಿಗಾರರಿಗಿರುವ ಹಕ್ಕನ್ನು ಪ್ರತಿಪಾದಿಸುವಂತೆ ಕಾಣುತ್ತಿತ್ತು. ಇದೆಲ್ಲ ಅಸಾಮಾನ್ಯ. ಅವನು ತನ್ನ ಬಲದಿಂದಲ್ಲದೆ ಚಾರಿತ್ರಿಕ ಶಕ್ತಿಯಿಂದ ಇದನ್ನೆಲ್ಲ ಆಡುತ್ತಿದ್ದನೆನ್ನುವಂತೆ ತೋರುತ್ತಿತ್ತು. ಅವನ ಭಾಷಣದ ಹಿಡಿತ, ಪೂರ್ಣತೆ ಮತ್ತು ಶಕ್ತಿ ವೇದಿಕೆಯ ಮೇಲಿನ ಅವನ ದೃಶ್ಯ—ಅದೆಲ್ಲ ಪುರಾತನ ಕಲೆಯಂತೆ ಪೂರ್ಣವಾಗಿತ್ತು. ಎಲ್ಲವೂ ಮಿಳಿತವಾಗಿತ್ತು. ಒಂದಾಗಲೀ ಆಡಂಬರವಿರಲಿಲ್ಲ. ಇದ್ದರೂ ಅರಿವಿಗೆ ಬರುತ್ತಿರಲಿಲ್ಲ. ಮುಖಕ್ಕೆರಡು ಕಣ್ಣು, ಕೈಗೈದು ಬೆರಳಿನಂತೆ ಅವುಗಳು ಕೂಡ ಅವನಿಗೆ ಸಹಜವಾಗಿದ್ದಂತೆ ತೋರುತ್ತಿತ್ತು.

ಉಳಿದವರಿಗಿಂತಲೂ ಕಡಿಮೆ ಕಾಲ ಭಾಷಣ ಮಾಡಿದರೂ ಅವನು ಹೆಚ್ಚು ಪ್ರಭಾವ ಬೀರಿದನು. ಹಾಗನ್ನಿಸಿದುದು ನನಗೊಬ್ಬನಿಗೇ ಅಲ್ಲ. ನನ್ನ ಹಿಂದೆ ಯಾರೋ "ಸದ್ಯ! ಅವನಿಗಾದರೂ ಹೇಳಲು ನಿಜವಾಗಿಯೂ ಬಹಳವಿದೆ'' ಎಂದು ಸಿಡುಗುಟ್ಟುತ್ತಿದ್ದರು. ಅದು ನಿಜ. ಅವನ ನಿರ್ಧಾರಗಳು ಅಸಹಜವಾಗಿ ಬರದೆ ಅನಿವಾರ್ಯವಾಗಿ ತಾವಾಗಿಯೇ ಬರುತ್ತಿದ್ದುವು. ಮೆನ್ಷೆವಿಕರು ಲೆನಿನನ ಮೇಲಿದ್ದ ದ್ವೇಷದಂತೆಯೇ ಅವನ ಭಾಷಣದಿಂದಾಗಿದ್ದ ಅಸಮಾಧಾನವನ್ನು ಬಚ್ಚಿಡಲಿಲ್ಲ. ಪಾರ್ಟಿಯು ತನ್ನ ಕಾರ್ಯವನ್ನು ವಿಮರ್ಶಿಸಲು ಒಂದು ಕ್ರಾಂತಿಕಾರಿ ನೀತಿಯ ತತ್ವವನ್ನು ಅನುಸರಿಸಬೇಕಾದುದರ ಅವಶ್ಯಕತೆಯನ್ನು ಒತ್ತಿ ಒತ್ತಿ ಹೇಳಿದಂತೆ ಅವರು ಗಲಭೆ ನಡೆಸಲು ಯತ್ನಿಸಿದರು. 'ಸಮ್ಮೇಳನ ತತ್ವಕ್ಕೆ ಸರಿಯಾದ ಪ್ರದೇಶವಲ್ಲ!' 'ನಾವು ಎಳೆ ಮಕ್ಕಳಲ್ಲ! ಉಪಾಧ್ಯಾಯನಂತೆ ಬೋಧಿಸಲು ಬರಬೇಡ!'

ಅವರಲ್ಲೊಬ್ಬ ಉದ್ದನೆಯ ಗಡ್ಡದ ಆಸಾಮಿ - ವ್ಯಾಪಾರಗಾರನಂತೆ ಕಾಣುತ್ತಿದ್ದ- ಅವನು ಉಳಿದವರಿಗಿಂತ್ಲ ಹೆಚ್ಚು ಗಲಭೆ ಮಾಡುತ್ತಿದ್ದ. ತಾನು ಕುಳಿತ ಜಾಗದಿಂದ ನೆಗೆದು ನಿಂತು "ಪು-ಪು-ಪುಟ್ಟ ತಂತ್ರಗಳೊಂದಿಗೆ ಆಡು

ತ್ತಿದ್ದೀರಿ. ಪು-ಪು-ಪುಟ್ಟ ತಂತ್ರಗಳು! ಬ್ಲಾಂಕ್ವಿಸ್ಟರು'' ಎಂದು ತೊದಲು ಮಾತನಾಡಿದ. ರೋಸಾ ಲಕ್ಸೆಂಬರ್ಗ್ ವಿರುದ್ಧ ಸೂಚಕವಾಗಿ ತಲೆಯಲ್ಲಾಡಿಸಿದಳು. ಆಮೇಲಾದ ಸಭೆಗಳಲ್ಲೊಂದರಲ್ಲಿ ಮೆನ್ಷೆವಿಕರಿಗೆ ಆಕೆ ಬಲವಾದ ಪೆಟ್ಟು ಕೊಟ್ಟಳು. ''ನೀವು ಮಾರ್ಕ್ಸ್‌ನ ತತ್ವದ ಮೇಲೆ ನಿಂತಿಲ್ಲ. ಅದರ ಮೇಲೆ ಕುಳಿತಿದ್ದೀರಿ-ಅದೂ ಅಲ್ಲ-ಅದರ ಮೇಲೆ ಮಲಗಿದ್ದೀರಿ.''

ಮಂದಿರದಲ್ಲೆಲ್ಲಾ ವಿಷಮ, ವಿರುದ್ಧ, ಬೇಸರ ಮತ್ತು ಕುತ್ಸಿತದ್ವೇಷದ ವಾತಾವರಣ ಕಲ್ಪಿತವಾಗಿ ಹೋಯಿತು. ಲೆನಿನನನ್ನು ಪ್ರತಿಬಿಂಬಿಸುತ್ತಿದ್ದ ಕಣ್ಣುಗಳಲ್ಲಿ ನೂರಾರು ಬಗೆಯ ಭಾವಗಳು ಕಾಣುತ್ತಿದ್ದುವು. ಆದರೆ ಈ ವಿರೋಧಪ್ರದರ್ಶನ ಅವನ ಮೇಲೆ ಕಾಣುವಂತಹ ಪರಿಣಾಮವೇನನ್ನೂ ಮಾಡಲಿಲ್ಲ. ಅವನು ಮೊದಲಿನಂತೆಯೇ ಶಾಂತವಾಗಿ, ತೂಕವಾಗಿ ಮತ್ತು ಬಿಸಿಯಿಂದ ಮಾತನಾಡಿದ. ಹೊರಗಿನ ಶಾಂತತೆ ಅವನಿಗೆ ಎಷ್ಟು ಕಷ್ಟ ಕೊಟ್ಟಿತೆಂಬುದು ಕೆಲವು ದಿನಗಳನಂತರ ನನಗೆ ತಿಳಿಯಿತು. ''ಪೂರ್ಣವಾದ ಒಂದು ತತ್ವದಿಂದ ಮಾತ್ರ ಪಾರ್ಟಿಯು ತನ್ನ ಕುಂದುಕೊರತೆಗಳನ್ನು ವಿವೇಚಿಸಿ ನಿವಾರಿಸಲು ಸಾಧ್ಯ'' ಎಂದು ಅವನಂದ ಸತ್ಯವಾಕ್ಯದಿಂದ ಇಷ್ಟೊಂದು ದ್ವೇಷ ಉತ್ಪನ್ನವಾದುದು ನಿಜವಾಗಿಯೂ ಆಶ್ಚರ್ಯದ ಮತ್ತು ದುಃಖದ ವಿಷಯ. ದಿನೇ ದಿನೇ ಲೆನಿನನ ಅಮೋಘಶಕ್ತಿ ಹೆಚ್ಚುಹೆಚ್ಚಾಗಿ ಅವನ ನಿಶ್ಚಯ, ವಿಶ್ವಾಸ ಮತ್ತು ಧೈರ್ಯ ಹೆಚ್ಚಿಸಿತೆಂದು ನನ್ನ ಮನಸ್ಸಿಗೆ ತೋರಿತು. ಒಂದೊಂದು ದಿನಕ್ಕೂ ಅವನ ಭಾಷಣ ಹೆಚ್ಚುಹೆಚ್ಚು ಬಲಯುತವಾಗುತ್ತಿದ್ದಂತೆ ಬಾಲ್ಷೆವಿಕರ ನಿಶ್ಚಯ ಮತ್ತು ಸ್ಥೈರ್ಯ ಹೆಚ್ಚುತ್ತಿತ್ತು. ಇದನ್ನು ಬಿಟ್ಟರೆ ನನ್ನ ಮೇಲೆ ಬಹಳ ಹೆಚ್ಚು ಪರಿಣಾಮ ಉಂಟುಮಾಡಿದುದೆಂದರೆ ರೋಸಾ ಲಕ್ಸೆಂಬರ್ಗಳ ಮೆನ್ಷೆವಿಕ್ ವಿರುದ್ಧಭಾಷಣ ಮತ್ತು ಎಂ. ಪಿ. ಟಾಂಸ್ಕಿಯ ಲೇಬರ್ ಸಮ್ಮೇಳನದ ವಿರುದ್ಧ ಪ್ರಚಂಡ ಸುತ್ತಿಗೆಯ ಹೊಡೆತದಂತಹ ಭಾಷಣ.

## ಲೆನಿನ್ ಮತ್ತು ಕೂಲಿಗಾರರು

ಲೆನಿನ್ ತನ್ನ ವಿರಾಮಕಾಲವನ್ನೆಲ್ಲಾ ಕೂಲಿಗಾರರೊಂದಿಗೆ ಅವರ ಜೀವನದ ಕಷ್ಟಸುಖಗಳನ್ನು ವಿಚಾರಿಸುವುದರಲ್ಲೇ ಕಳೆಯುತ್ತಿದ್ದ. "ಅವರ ಪತ್ನಿಯರ ವಿಷಯವೇನು? ಮನೆಯ ಕೆಲಸದಲ್ಲಿಯೇ ಯಾವಾಗಲೂ ಮುಳು

ಗಿರುತ್ತಾರೆಯೇ ? ಸ್ವಲ್ಪವಾದರೂ ತಿಳಿಯುವುದಕ್ಕಾಗಲಿ ಓದುವುದಕ್ಕಾಗಲಿ ವಿರಾಮವಾಗುತ್ತದೆಯೇ ?''

ಅವನನ್ನು ಸಮ್ಮೇಳನದಲ್ಲಿ ಮೊದಲು ಬಾರಿ ನೋಡಿದ ಕೂಲಿಗಾರರ ಗುಂಪೊಂದು ಒಂದು ಬಾರಿ ಹೈಡ್‌ಪಾರ್ಕಿನಲ್ಲಿ ಅವನ ಚರ್ಯೆಯನ್ನು ಚರ್ಚಿಸುತ್ತಾ ನಿಂತಿದ್ದಾಗ ಅವರಲ್ಲೊಬ್ಬ "ಯುರೋಪಿನಲ್ಲಿ ಕೂಲಿಗಾರರ ಕಡೆ ನೂರಾರು ಮಂದಿ ಅವನಂತಹ ಚಾಣಕ್ಯರಿರಬಹುದು. ಆದರೆ ಕಂಡೊಡನೆಯೇ ಹತ್ತಿರ ಸೆಳೆದುಕೊಳ್ಳುವ ವ್ಯಕ್ತಿ ಮತ್ತೆ ಯಾರೂ ಇರಲಾರರು'' ಎಂದ. ಆಗ ಮತ್ತೊಬ್ಬ ನಸುನಗುತ್ತಾ "ಅವನು ನಿಜವಾಗಿಯೂ ನಮ್ಮಲ್ಲೊಬ್ಬ'' ಎಂದ. "ಪ್ಲೆಕನವನೂ ನಮ್ಮಲ್ಲೊಬ್ಬ" ಮತ್ತೊಬ್ಬ ಹೇಳಿದ. ಕೂಡಲೇ ಯಾರೋ ''ಪ್ಲೆಕನವ್ ಯಾವಾಗಲೂ ಬೋಧಿಸುವ ಗುರುವಿನಂತೆ ಕುತ್ತಿಗೆಯ ಮೇಲೆ ಕುಳಿತುಕೊಳ್ಳುತ್ತಾನೆ. ಲೆನಿನ್ ನಿಜವಾದ ನಾಯಕ ಮತ್ತು ಗೆಳೆಯ" ಎಂದರು. ಅವರಲ್ಲೊಬ್ಬ ಹಾಸ್ಯವಾಗಿ ''ಪ್ಲೆಕನವನ ಪುಟ್ಟಂಗಿ ಅವನಿಗೆ ಬಹಳ ಬಿಗಿಯಾಗಿರಬೇಕು'' ಎಂದ.

ಒಂದು ಸಾರಿ ನಾವೆಲ್ಲರೂ ಉಪಾಹಾರ ಮಂದಿರಕ್ಕೆ ಹೋಗುತ್ತಿದ್ದಾಗ ಒಬ್ಬ ಮೆನ್ಷೆವಿಕ್ ಪಂಗಡದ ಕೂಲಿಗಾರ ಅವನನ್ನು ನಿಲ್ಲಿಸಿ ಏನೋ ಪ್ರಶ್ನಿಸಿದ. ಲೆನಿನ್ ಅವನೊಂದಿಗೇ ಐದು ನಿಮಿಷ ನಿಂತು ಮಾತನಾಡಿ ಆಮೇಲೆ ನಮ್ಮ ಜತೆಗೆ ಬಂದು ಸೇರಿಕೊಂಡ. ಇಂತಹ ಅರಿಯದವರೂ ಪಾರ್ಟಿ ಸಮ್ಮೇಳನಕ್ಕೆ ಬಂದಿರುವುದು ಆಶ್ಚರ್ಯಕರ. 'ಪಾರ್ಟಿಯಲ್ಲಿ ವಿಭಜನೆಯಾಗಲು ನಿಜವಾಗಿ ಕಾರಣವೇನು ?' ಎಂದು ನನ್ನನ್ನು ಕೇಳಿದ. ಅದಕ್ಕೆ ನಾನು 'ನೋಡು, ನಿನ್ನ ಮಿತ್ರರು ಪಾರ್ಲಿಮೆಂಟಿಗೆ ಸೇರಲಿಚ್ಛಿಸುತ್ತಿದ್ದಾರೆ. ನಾವಾದರೋ ಕೂಲಿಗಾರರು ಕ್ರಾಂತಿಗೆ ಸಿದ್ಧರಾಗಬೇಕು ಎನ್ನುತ್ತಿದ್ದೇವೆ. ಇಷ್ಟೇ ಕಾರಣ' ಎಂದು ಹೇಳಿದೆ. ಅವನಿಗೆ ಅದು ಅರ್ಥವಾಗಿರಬೇಕು. ನಾವು ಕೆಲವರು ಒಟ್ಟಿಗೇ ಸೇರಿ ಅಗ್ಗವಾದ ಉಪಾಹಾರ ಮಂದಿರವೊಂದರಲ್ಲಿ ನಮ್ಮ ಭೋಜನ ತೀರಿಸುತ್ತಿದ್ದೆವು. ಲೆನಿನ್ ಬಹಳ ಸ್ವಲ್ಪ ಆಹಾರ ತೆಗೆದುಕೊಳ್ಳುತ್ತಿದ್ದ. ಒಂದೆರಡು ಕರಿದ ಮೊಟ್ಟೆ, ಒಂದು ತುಣುಕು ಮಾಂಸ, ಒಂದು ಲೋಟ ಬೀರ್. ಅಂದರೆ ಅವನು ತನ್ನ ಸ್ವಂತ ವಿಚಾರ ಅಷ್ಟು ಗಮನಕೊಡುತ್ತಿರಲಿಲ್ಲ. ಆದರೆ ಅವನು ಕೂಲಿಗಾರರಲ್ಲಿ ತೋರಿಸುತ್ತಿದ್ದ ಆಸಕ್ತಿ ಎಲ್ಲರಿಗೂ ಆಶ್ಚರ್ಯವನ್ನುಂಟು

ಮಾಡಿತ್ತು.

ಎಂ. ಎಫ್. ಆಂಡ್ರೆಯೇವ ಊಟದ ವಸತಿಯ ಮೇಲ್ವಿಚಾರಕಿಯಾಗಿದ್ದಳು. ಲೆನಿನ್ ಆಗಾಗ ಆಕೆಗೆ "ಕೂಲಿಗಾರರಿಗೆ ಸಾಕಷ್ಟು ತಿನ್ನಲು ಆಹಾರ ಸಿಕ್ಕುತ್ತಿದೆಯೇ? ಬೇಕಿದ್ದರೆ ಇನ್ನಷ್ಟು ರೊಟ್ಟಿ ತರಿಸೋಣ" ಎಂದು ಹೇಳುತ್ತಿದ್ದ. ನಾನು ಇಳಿದುಕೊಂಡಿದ್ದ ಹೋಟಲಿಗೆ ಒಂದು ಬಾರಿ ಬಂದಿದ್ದಾಗ ನನ್ನ ಹಾಸಿಗೆಯನ್ನೇ ನಿಮಗ್ನನಾಗಿ ನೋಡುತ್ತಿದ್ದ. "ಇದೇನು ಮಾಡುತ್ತಿರುವೆ?" ಎಂದು ನಾನು ಕೇಳಿದೆ. "ಏನೂ ಇಲ್ಲ, ಮಗ್ಗುಲುಹಾಸಿಗೆ ಹಿತವಾಗಿದೆಯೋ ಇಲ್ಲವೋ ಎಂದು ನೋಡಿದೆ" ಎಂದ ಲೆನಿನ್. ನನಗೆ ಅವನ ಮಾತು ಅರ್ಥವಾಗಲಿಲ್ಲ. ಲಂಡನ್ನಿನಲ್ಲಿ ಮಗ್ಗುಲು ಹಾಸಿಗೆ ಹೇಗಿದ್ದರೇನು ಎಂದುಕೊಂಡೆ. ಲೆನಿನ್ ನನ್ನ ಮುಖ ನೋಡಿ ತನ್ನ ಮಾತಿನ ಅರ್ಥ ವಿವರಿಸಿದ "ನಾವು ನಮ್ಮ ಆರೋಗ್ಯದ ಮೇಲೆ ಬಹಳ ದೃಷ್ಟಿಯಿಡಬೇಕು."

೧೯೧೮ರ ಶಿಶಿರಋತುವಿನಲ್ಲಿ ಸಾರ್ಮೋವದ ಕೂಲಿಗಾರರಲ್ಲೊಬ್ಬ ಡ್ಮಿಟ್ರಿ ಪಾವ್ಲೊವನನ್ನು ಲೆನಿನನ ವ್ಯಕ್ತಿತ್ವದಲ್ಲಿ ಅತಿ ಮುಖ್ಯವಾದುದೇನೆಂದು ಕೇಳಲು "ಅವನ ಸರಳತೆ – ಅವನು ಸತ್ಯದಂತೆ ಅತಿ ಸರಳ" ಎಂದು ಉತ್ತರ ಕೊಟ್ಟ. ಇದನ್ನು ಅವನು ಬಹಳ ದಿನಗಳಿಂದ ವಿಚಾರಮಾಡಿ ನಿರ್ಧರಿಸಿದವನಂತೆ ತೋರುತ್ತಿತ್ತು ಅವನ ಮಾತುಗಳಿಂದ. ಒಬ್ಬ ವ್ಯಕ್ತಿಯ ಅತ್ಯಂತ ಕಠಿಣ ವಿಮರ್ಶಕರೆಂದರೆ ಅವನ ಹತ್ತಿರ ಕೆಲಸಮಾಡುವವರೆಂಬುದು ಎಲ್ಲರಿಗೂ ತಿಳಿದ ವಿಷಯ. ಲೆನಿನನ ಕಾರು ನಡೆಸುವವ ಗಿಲ್ ಹೀಗೆ ಹೇಳಿದ: "ಲೆನಿನ್ ಅಸಮಾನಪುರುಷ. ಅವನಂತಹವರು ಮತ್ತೆ ಯಾರೂ ಇಲ್ಲ. ಹಿಂದೆ ಒಂದು ಸಾರಿ ಬಹಳ ಜನಸಂದಣಿಯಿದ್ದ ಕಾಲದಲ್ಲಿ ಮೈಸ್ನಿಟ್ಸ್ಕಿ ರಸ್ತೆಯಲ್ಲಿ ಕಾರು ನಡೆಸುತ್ತಿದ್ದೆ. ಕಾರೆಲ್ಲಿ ಚೂರುಚೂರಾದೀತೋ ಎಂದು ಹೆದರಿ ಮುಂದಕ್ಕೆ ಕಾರು ನಡೆಸಲು ನನ್ನಿಂದ ಸಾಧ್ಯವೇ ಆಗಲಿಲ್ಲ. ಸುಮ್ಮನೆ ಹಾರ್ನ್ ಶಬ್ದಮಾಡುತ್ತಿದ್ದೆ. ಆಗ ಲೆನಿನ್ ಬಾಗಿಲು ತೆರೆದು ಕಾರಿನ ಪಕ್ಕದಂಚಿನ ಮೇಲೆ ನಿಂತು ಮುಂದೆ ನಡೆಸಬೇಕೆಂದು ಕೇಳಿದ. 'ಗಾಬರಿಪಡಬೇಡ ಗಿಲ್. ಉಳಿದವನಂತೆಯೇ ನೀನೂ ಮುಂದೆ ನಡೆಸು.' ನಾನು ಬಹಳ ನುರಿತ ಕಾರು ನಡೆಸುವವನು. ನಿಜವಾಗಿಯೂ ಮತ್ತೆ ಯಾರೂ ಲೆನಿನನಂತೆ ಮಾಡುತ್ತಿರಲಿಲ್ಲ."

ಲೆನಿನನ ಮನಸ್ಸಿನ ಯೋಚನೆಗಳೆಲ್ಲಾ ಒಂದೇ ಕಡೆಗೆ ಹರಿಯುತ್ತಿದ್ದ ರೀತಿಯನ್ನು ತಿಳಿಸುವುದು ಕಷ್ಟದ ಕೆಲಸ. ದಿಕ್ಸೂಚಿಯಂತೆ ಅವನ ವಿಚಾರಗಳು ಕೂಲಿಗಾರರ ಹಕ್ಕುಬಾಧ್ಯತೆಗಳ ಕಡೆಗೇ ತಿರುಗುತ್ತಿದ್ದವು. ಒಂದು ಸಂಜೆ ವಿರಾಮವಾಗಿದ್ದಾಗ ನಾವು ಕೆಲವರು ಲಂಡನ್ನಿನಲ್ಲಿ ''ಸಂಗೀತ ಮಂದಿರ'' [ Music Hall ] ವೆಂಬ ನಾಟಕಶಾಲೆಗೆ ಹೋಗಿದ್ದೆವು. ಇಲ್ಯಿಚ್ ಅಲ್ಲಿಯ ವಿನೋದಗಾರರ ವಿನೋದಕ್ಕೆಲ್ಲ ಜೋರಾಗಿ ಸಂತೋಷದಿಂದ ನಗುತ್ತಿದ್ದ. ಆದರೆ ಉಳಿದ ಪಾತ್ರಗಳಲ್ಲಿ ಅಷ್ಟು ಆಸಕ್ತಿ ತೋರಿಸುತ್ತಿರಲಿಲ್ಲ. ಬ್ರಿಟಿಷ್ ಕೊಲಂಬಿಯದಲ್ಲಿ ತೇಗದ ಮರಗಳನ್ನುರುಳಿಸುವ ದೃಶ್ಯದಲ್ಲಿ ಅವನು ಮಗ್ನನಾಗಿ ಹೋದ. ಹಿನ್ನೆಲೆಯಲ್ಲಿ ಒಂದು ಅರಣ್ಯದಲ್ಲಿನ ಬಿಡಾರ. ಮುಂಭಾಗದಲ್ಲಿ ಇಬ್ಬರು ವ್ಯಕ್ತಿಗಳು ಒಂದು ಮೀಟರ್ ದಪ್ಪದ ಮರವೊಂದನ್ನು ಒಂದು ನಿಮಿಷದಲ್ಲಿ ಕತ್ತರಿಸಿ ಹಾಕಿಬಿಟ್ಟರು. "ಅದು ಜನರಿಗಾಗಿ" ಎಂದ ಲೆನಿನ್. "ನಿಜವಾಗಿ ಅವರು ಅಷ್ಟು ಬೇಗ ಕೆಲಸಮಾಡಲು ಸಾಧ್ಯವಿಲ್ಲ. ಅಲ್ಲಿ ಕೂಡ ಕೊಡಲಿಗಳನ್ನುಪಯೋಗಿಸುತ್ತಾರೆಂದು ಕಾಣುತ್ತದೆ. ಇಲ್ಲಿಯ ಹಾಗೆಯೇ ಬೇಕಾದಷ್ಟು ಮರಗಳನ್ನು ಉಪಯೋಗಕ್ಕೆ ಬಾರದ ಚಕ್ಕೆಗಳನ್ನಾಗಿ ಮಾಡುತ್ತಾರೆ. ಇಲ್ಲಿದೆ ನಿಮ್ಮ ಇಂಗ್ಲಿಷ್ ನಾಗರಿಕತೆ!'' ಬಂಡವಾಳಶಾಹಿಗಳು ಉತ್ಪತ್ತಿಯಲ್ಲಿ ತೋರಿಸುವ ಅವಿಚಾರ, ಕಚ್ಚಾಸಾಮಾನುಗಳ ನಷ್ಟಗಳ ವಿಚಾರ ಮಾತನಾಡಲಾರಂಭಿಸಿ ಆ ವಿಚಾರವಾಗಿ ಯಾರೂ ಇನ್ನು ಪುಸ್ತಕ ಬರೆಯಲು ಯೋಚಿಸಿಲ್ಲವಲ್ಲ ಎಂದು ನಿಟ್ಟುಸಿರು ಬಿಟ್ಟ. ಅವನು ಹೇಳಿದುದು ನನಗೆ ಸರಿಯಾಗಿ ತಿಳಿಯದಿದ್ದರೂ ಅವನನ್ನು ನಾನು ಮತ್ತೆ ಪ್ರಶ್ನಿಸಲಿಲ್ಲ. ಈಗಾಗಲೇ ಅವನು ನಾಟಕಕಲೆಯಲ್ಲಿ "ಮೂಕನಾಟಕ"ದ [Pantomime] ಸ್ಥಾನಮಾನದ ಚರ್ಚೆಯನ್ನಾರಂಭಿಸಿದ್ದ. ಇದು ಸಾಮಾನ್ಯ ಆಚಾರ ವಿಚಾರಗಳನ್ನು ತಿರುಗಮುರುಗ ಮಾಡಿ ಸಾಮಾನ್ಯತೆಯ ಅಸಹಜತೆಯನ್ನು ತೋರಿಸುವ ವಿಡಂಬನಾತ್ಮಕ ಪ್ರದರ್ಶನ. ಸ್ವಲ್ಪ ಕಠಿಣವಾದರೂ ಸೊಗಸಾಗಿರುತ್ತದೆ!''

ಎರಡು ವರ್ಷಗಳ ನಂತರ ಕ್ಯಾಪ್ರಿಯಲ್ಲಿ ಎ. ಎ. ಬಾಗ್ದನೊವ್ ಮಾಲಿನೊವ್ಸ್ಕಿಯೊಂದಿಗೆ ಆದರ್ಶವಾದೀ ಕಾದಂಬರಿಯ ವಿಚಾರ ಮಾತನಾಡುತ್ತಾ ''ಈ ಬಂಡವಾಳಶಾಹೀ ಕಳ್ಳರು ಭೂಮಿಯಿಂದ ಎಣ್ಣೆ, ಕಬ್ಬಿಣ, ಮರ ಮತ್ತು

ಕಲ್ಲಿದ್ದಲನ್ನು ಕದ್ದು ಹೇಗೆ ದುರುಪಯೋಗಪಡಿಸುವರೆಂಬುದರ ವಿಷಯ ಕಾದಂಬರಿ ಬರೆದರೆ, ಕೂಲಿಗಾರರಿಗೆ ಅದರಿಂದ ಸ್ವಲ್ಪವಾದರೂ ಉಪಯೋಗ ವಾಗಬಹುದು. ಮ್ಯಾಕಿಸ್ಟ್."

## ಪ್ಯಾರಿಸ್ಸಿನಲ್ಲಿ ಸಂದರ್ಶನ

ಲಂಡನ್ನಿನಲ್ಲಿ ನಾವು ಅಗಲಿದಾಗ ಕ್ಯಾಪ್ರಿಗೆ ವಿಶ್ರಾಂತಿಗೆ ಬರುವುದಾಗಿ ಹೇಳಿದ. ಆದರೆ ಅಷ್ಟರಲ್ಲೇ ನಾನು ಅವನನ್ನು ಪ್ಯಾರಿಸ್ಸಿನಲ್ಲಿ ಒಂದು ವಿದ್ಯಾರ್ಥಿ ಗಳ ವಸತಿಯಂತಿದ್ದ ಚಿಕ್ಕ ಕೊಠಡಿಯಲ್ಲಿ ನೋಡಿದೆ. ನಾಡೆಡ ಕಾಂಸ್ಟಾಂಟಿ ನೊವ್ನ (ಲೆನಿನನ ಹೆಂಡತಿ) ನಮ್ಮಿಬ್ಬರಿಗೂ ಚಹಾ ಕೊಟ್ಟುಹೋದ ಮೇಲೆ ನಾವಿಬ್ಬರೇ ಕುಳಿತೆವು. ಆಗ ತಾನೇ ಸ್ನೇನೀ ಪ್ರಕಟನಾಲಯ ಮುಚ್ಚಿ ಹೋಗಿತ್ತು. ಹೊಸ ಪ್ರಕಟನಾಲಯ ಪ್ರಾರಂಭಿಸುವ ವಿಷಯ ಚರ್ಚಿಸಲು ಬಂದಿದ್ದೆ. ಸಂಪಾದಕೀಯ ಕಚೇರಿ ರಷ್ಯದಿಂದ ಹೊರಗಿರಬೇಕೆಂದು ನನ್ನ ಅಭಿಪ್ರಾಯ. ವೊರೋಸ್ಕಿಯೂ, ರಷ್ಯದಲ್ಲಿ ಸಿ. ಎ. ಡ್ರೈಸ್ನಿಟ್ಸ್, ಸ್ಟ್ರೋಮೆವ್ ಅದರ ಪ್ರತಿನಿಧಿಗಳಾಗಬಹುದೆಂದು ನನ್ನ ಅಭಿಮತ. ಪಾಶ್ಚಿಮಾತ್ಯ ಸಾಹಿತ್ಯ ಮತ್ತು ಪ್ರಪಂಚದ ಮುನ್ನಡೆಯ ವಿಷಯವಾಗಿ ಒಂದು ಪುಸ್ತಕಮಾಲೆ ಹೊರ ಡಿಸಿದರೆ ಕೂಲಿಗಾರರಿಗೆ ಅದರಿಂದ ಬಹಳ ವಿಷಯ ತಿಳಿದು ಅವರ ತಿಳುವಳಿಕೆ ಹೆಚ್ಚಾಗಬಹುದು. ಆದರೆ ಲೆನಿನ್ ಜನಗಳನ್ನು ಸಂಘಟಿಸುವ ಮತ್ತು ಸೆನ್ಸಾ ರಿನ ಕಷ್ಟಗಳನ್ನು ಒತ್ತಿಹೇಳಿ ನನ್ನ ಆ ಯೋಜನೆಯನ್ನು ಮೂಲೆಗೊತ್ತಿಬಿಟ್ಟ. ಪಾರ್ಟಿಯ ಗೆಳೆಯರಲ್ಲಿ ಬಹಳ ಮಂದಿ ಕೆಲಸದಲ್ಲಿ ನಿರತರಾಗಿದ್ದುದರಿಂದ ಅವರಿಗೆ ಬರೆಯಲು ಅವಕಾಶವಿಲ್ಲ. ಈಗ ದೊಡ್ಡ ದೊಡ್ಡ ಪುಸ್ತಕ ಬರೆಯು ವುದರಿಂದ ಪ್ರಯೋಜನವಿಲ್ಲ. ಅವುಗಳನ್ನು ಓದುವವರು ಬರಿಯ ಬುದ್ಧಿ ಜೀವಿಗಳು. ಈಗಾಗಲೇ ಅವರು ಸಾಮ್ಯವಾದ ಬಿಟ್ಟು ಮಿತವಾದದ ಕಡೆ ತಿರುಗಿದ್ದಾರೆ. ಅವರನ್ನು ಹಿಂದಕ್ಕೆ ಕರೆತರುವುದು ನಮ್ಮ ಕೆಲಸವಲ್ಲ. ನಮಗೆ ಬೇಕಾದುದು ಪತ್ರಿಕೆಗಳು ಮತ್ತು ಪ್ರಚಾರ ಪುಸ್ತಕಗಳು. "ಸ್ನೇನಿ" ಪ್ರಕಟ ನಾಲಯವನ್ನು ಪುನಃ ಆರಂಭಿಸುವುದೇನೋ ಒಳ್ಳೆಯದು. ಆದರೆ ರಷ್ಯದ ಸೆನ್ಸಾರಿನಿಂದ ಅದು ಕಷ್ಟವಾಗುತ್ತೆ. ಆದೂ ಅಲ್ಲದೆ ಇಲ್ಲಿಂದ ಅಲ್ಲಿಗೆ ಸಾಗಿಸು ವುದೂ ಬಹಳ ಕಷ್ಟ. ನಾವು ಜನತೆಗೆ ಅದನ್ನು ಲಕ್ಷಾಂತರ ಸಂಖ್ಯೆಯಲ್ಲಿ ಹಂಚಬೇಕು. ಈಗ ಇಷ್ಟು ಸಂಖ್ಯೆಯನ್ನು ಗುಪ್ತವಾಗಿ ತಯಾರಿಸುವುದು

ಸಾಧ್ಯವಿಲ್ಲದ ಮಾತು. ಒಳ್ಳೆಯ ಕಾಲ ಒದಗುವವರೆಗೂ ಪ್ರಕಟನಾಲಯದ ವಿಷಯ ಹಾಗೆಯೇ ಇರಬೇಕು. ಅವನ ಮಾತುಗಳಿಂದ ನಾನೂ ಅದೇ ನಿರ್ಧಾರಕ್ಕೆ ಬಂದೆ.

ತನ್ನ ಸಹಜ ಸರಳತೆಯಿಂದ ಅವನು ಡೂಮ ಮತ್ತು ಕ್ಯಾನ್ಸ್ಟಿಟ್ಯೂಷನಲ್ ಡೆಮೊಕ್ರಾಟಿಕ್ ಪಾರ್ಟಿಯ [ಮಧ್ಯವರ್ಗದ ಮಿತವಾದಿಗಳ ಸಂಗಡ] ವಿಷಯವಾಗಿ ಮಾತನಾಡಲಾರಂಭಿಸಿದ. ಅವರಿಗೆ "ಅಕ್ಟೋಬರಿಸ್ಟ"ರಾಗಲು ಅವಮಾನ. ಆದುದರಿಂದ ಅವರಿಗಿರುವ ಹಾದಿ ಅದೊಂದೇ. ಆಮೇಲೆ ಲೆನಿನ್ ಯುದ್ಧ ಬಹು ಶೀಘ್ರದಲ್ಲೇ ಒದಗಬಹುದೆಂದು ಕಾರಣ ಕೊಡಲಾರಂಭಿಸಿದ. "ಒಂದೇಕೆ- ಒಂದು ಯುದ್ಧಗಳ ಸರಪಳಿಯೇ ಆಗಬಹುದು" ಎಂದು ಹೇಳಿದ. ಅವನ ಈ ಭವಿಷ್ಯ ಬಾಲ್ಕನ್ಸಿನಲ್ಲಿ ನಿಜವಾಯಿತು. ಅದೂ ಬಹಳ ಬೇಗನೆ. ಲೆನಿನ್ ಎದ್ದು ನಿಂತು ಎಂದಿನಂತೆ ತನ್ನ ಹೆಬ್ಬೆಟ್ಟನ್ನು ನಡುವಂಗಿ [Waist Coat] ಯ ಜೇಬಿನಲ್ಲಿಟ್ಟು ಇತ್ತಿಂದತ್ತ ತಿರುಗುತ್ತಾ ಕಣ್ಣುಗಳನ್ನು ಕೊಂಚ ಸಂಕುಚಿಸಿ ಮಾತನಾಡಲಾರಂಭಿಸಿದ. "ಯುದ್ಧ ಹತ್ತಿರಸಾಗುತ್ತಿದೆ. ಅದು ಅನಿವಾರ್ಯ. ಬಂಡವಾಲಶಾಹಿ ಆಗಲೇ ಕೊಳೆತು ನಾರುತ್ತಿದೆ. ಜನರಾಗಲೇ ರಾಷ್ಟ್ರೀಯತೆ ಮತ್ತು ಅತ್ಯುದ್ವಿಗ್ನ ರಾಷ್ಟ್ರೀಯತೆ [Chauvinism] ಗಳಿಗೆ ಜೋಲುತ್ತಿದಾರೆ. ನಾವು ಸಮಗ್ರ ಯೂರೋಪಿನ ಸಂಗ್ರಾಮವನ್ನೇ ಕಾಣಬಹುದೆಂದು ತೋರುತ್ತದೆ. ಜನತೆಯೋ ? ಜನತೆಯಲ್ಲಿ ಈ ಅನಿವಾರ್ಯ ನಿರ್ವಹಿಸುವಷ್ಟು ಶಕ್ತಿ ಇಲ್ಲ. ಅದು ಹೇಗೆ ಸಾಧ್ಯ? ಯೂರೋಪಿನಲ್ಲಿ ಕೂಲಿಗಾರರ ಸಾರ್ವತ್ರಿಕ ಮುಷ್ಕರ? ಅವರಿನ್ನು ಅಷ್ಟು ಸಂಘಟಿತರಾಗಿಯೂ ಇಲ್ಲ. ತಿಳುವುಳ್ಳವರಾಗಿಯೂ ಇಲ್ಲ! ಇಂತಹ ಒಂದು ಮುಷ್ಕರ ಅಂತರ್ಯುದ್ಧಕ್ಕೆ [Civil War] ಕಾರಣವಾಗಬಹುದು ಅಷ್ಟೆ. ಆದರೆ ನಾವು ರಾಜಕೀಯಜ್ಞರು ಅದನ್ನು ಹಾಗೆಣಿಸಲಾಗುವುದಿಲ್ಲ." ಸ್ವಲ್ಪ ಹೊತ್ತು ತನ್ನ ಬೂಡ್ಸಿನ ತುದಿಯನ್ನು ನೆಲದಮೇಲೆ ತೇಯುತ್ತಾ ನಿಂತು ಮನಸ್ಸಿನಲ್ಲಿ ದುಗುಡ ಮುಸುಕಿದಂತೆ ಮತ್ತೆ ಮಾತದಾಡಿದ—"ಜನತೆ ನಿಜವಾಗಿಯೂ ಬಹಳ ಕಷ್ಟ ಅನುಭವಿಸಬೇಕು. ಅದು ಸ್ವಲ್ಪಕಾಲ ಅನಿವಾರ್ಯ. ಆದರೆ ಜನತೆಯ ಶತ್ರುಗಳು ತಮ್ಮ ತಮ್ಮಲ್ಲಿ ಕಚ್ಚಾಡಿ ನಿರ್ಬಲರಾಗುವುದು ಖಂಡಿತ." ನನ್ನ ಹತ್ತಿರ ಬಂದು ಸಣ್ಣದನಿಯಲ್ಲಿ ಆದರೆ ಪ್ರಚಂಡ ಶಕ್ತಿಯುತವಾಗಿ

ಹೇಳಿದ "ಯೋಚಿಸು. ಚೆನ್ನಾಗಿ ಉಂಡು ತಿಂದವರು ಹಸಿದವರನ್ನು ಒಬ್ಬರ ಮೇಲೊಬ್ಬರು ಬೀಳುವಂತೆ ಏಕೆ ಮಾಡಬೇಕು? ಇದಕ್ಕಿಂತ ಅಸಹ್ಯವಾದ ಮತ್ತು ನೀಚಕೃತ್ಯ ಮತ್ತಾವುದಾದರೂ ಉಂಟೇ? ಕೂಲಿಗಾರರು ಬಹಳ ತ್ಯಾಗ ಮಾಡಬೇಕು. ಸಂಕಟಪಡಬೇಕು. ಆದರೆ ಕೊನೆಯಲ್ಲಿ ಅವರಿಗೆ ಅದರಿಂದ ಲಾಭವೇ ಆಗುತ್ತದೆ. ಅದು ಚಾರಿತ್ರಿಕ ಸತ್ಯ." ಲೆನಿನ್ ಆಗಾಗ ಚರಿತ್ರೆಯ ವಿಷಯ ಮಾತಾಡುತ್ತಿದ್ದ. ಆದರೆ ಎಂದೂ ಚರಿತ್ರೆಯ ವಿಷಯ ದಲ್ಲಿ ಅವನು ಅಂಧಶ್ರದ್ಧೆ ತೋರಿಸಿದುದಿಲ್ಲ.

ಅವನು ಮಾತಾಡಿದುದರಿಂದ ಅವನ ಮನಸ್ಸಿನಲ್ಲಿ ಹೊಯ್ದಾಟವಾರಂಭ ವಾಯಿತು. ಕುಳಿತುಕೊಂಡು ಹಣೆಯಮೇಲಿನ ಬೆವರನ್ನೊರಸಿಕೊಂಡು ಒಂದಿಷ್ಟು ತಣ್ಣನೆಯ ಚಹಾ ಕುಡಿದು ಇದ್ದಕ್ಕಿದ್ದಂತೆ ನನ್ನನ್ನು "ನಿನ್ನ ಅಮೇರಿಕ ಯಾತ್ರೆ ಏನಾಯಿತು. ಅದೇತಕ್ಕೆಂಬುದು ಪತ್ರಿಕೆಗಳಿಂದ ನನಗೆ ತಿಳಿಯಿತು. ಅದು ಏನಾಯಿತು?'' ಎಂದು ಕೇಳಿದ. ನಾನು ಸಂಕ್ಷೇಪವಾಗಿ ಎಲ್ಲವನ್ನೂ ತಿಳಿಸಿದೆ. ಲೆನಿನನಂತೆ ನಗುವವರನ್ನು—ಉಳಿದವರಿಗೂ ಅದು ಹತ್ತುವಂತೆ ನಗುವವರನ್ನು ನಾನು ಕಂಡಿಲ್ಲ. ಇಂತಹ ಕಠೋರ ನೈಜವಾದಿ, ಸಾಮಾಜಿಕ ಅನಿವಾರ್ಯವನ್ನು ಕಂಡು ತಿಳಿದವನು, ಬಂಡವಾಳವಾದದಲ್ಲಿ ಹುಟ್ಟಿ ದ್ವೇಷವಿದ್ದವನು, ಎಳೆ ಮಕ್ಕಳಂತೆ ಕಣ್ಣಿನಲ್ಲಿ ನೀರು ತುಂಬುವ ವರೆಗೂ ನಗುವುದನ್ನು ನೋಡಿ ನನಗೆ ಆಶ್ಚರ್ಯವಾಯಿತು. ಆ ರೀತಿ ನಗಬೇಕಾದಲ್ಲಿ ಯಾರಿಗೇ ಆಗಲಿ ಆರೋಗ್ಯ, ದೃಢ ಮನಸ್ಸಿರಬೇಕು. ''ನೀನೊಬ್ಬ ವಿನೋದಿ'' ನಗುವಿನ ನಡುವೆ ಹೇಳಿದ.

"ಇಷ್ಟೊಂದು ವಿಚಿತ್ರ ಸಾಧ್ಯವೆಂದುಕೊಂಡಿರಲಿಲ್ಲ ನಾನು.'' ಕಣ್ಣುಗಳ ನ್ನೊರೆಸಿಕೊಂಡು ಕರುಣಾಪೂರಿತ ನಗುಸೂಸುತ್ತಾ ಹೇಳಿದ. "ಅಪಜಯವನ್ನು ನಗುನಗುತ್ತಾ ಎದುರುಗೊಳ್ಳುವುದೇ ಒಳ್ಳೆಯದು. ಅದೇ ಒಂದು ಅತಿಶಯ ಗುಣ. ನಿಜವಾಗಿ ನೋಡಿದರೆ ಜೀವನದಲ್ಲಿ ಎಷ್ಟು ವಿರಸವಿದೆಯೋ ಅಷ್ಟೇ ವಿನೋದವೂ ಇದೆ." ಮತ್ತೆ ಮಾರನೆಯ ದಿನ ನಾವಿಬ್ಬರೂ ಸಂಧಿಸಬೇಕಾ ಗಿತ್ತು ಆದರೂ ಅದೇ ಸಂಜೆ ಕೆಟ್ಟ ಹವಾಮಾನದಿಂದ ನಾನು ರಕ್ತಕಾರಲಾರಂಭಿ ಸಿದುದರಿಂದ ಅವನನ್ನು ಸಂಧಿಸದೆ ಹಾಗೆಯೇ ಮಾರನೆಯ ದಿನ ಅಲ್ಲಿಂದ ಪ್ರಯಾಣ ಬೆಳಸಿದೆ.

## ಇಟಲಿಯಲ್ಲಿ ಲೆನಿನ್

ನಾವು ಆ ಮೇಲೆ ಮತ್ತೆ ಸಂಧಿಸಿದುದು ಕ್ಯಾಪ್ರಿಯಲ್ಲಿ. ನನಗೆ ಆಗ ಕ್ಯಾಪ್ರಿಯಲ್ಲಿ ಇಲ್ಯಿಚ್ ಇಬ್ಬರು ವ್ಯಕ್ತಿಯಾಗಿ ಎರಡು ವಿವಿಧ ಭಾವಗಳಲ್ಲಿ ಇದ್ದಾನೆಂದು ಅನ್ನಿಸುತ್ತಿತ್ತು. ಒಬ್ಬ ಇಲ್ಯಿಚ್ ನನ್ನನ್ನು ಸಮುದ್ರ ತೀರದ ಮೇಲೆ ಕಂಡಾಗ, ಒಡನೆಯೇ ಆಥ್ಯತೆಯಿಂದ ಕೇಳಿದ. "ನೀನು ನನಗೂ ಮ್ಯಾಕಿಸ್ಟರಿಗೂ ಸಂಧಿಯಾಗಬಹುದೆಂದು ನಂಬಿದ್ದೀಯೆ. ಆದರೆ ಅದರ ಅಸಾಧ್ಯತೆಯನ್ನು ನಿನಗೆ ಪತ್ರದಲ್ಲಿಯೇ ಬರೆದಿದ್ದೇನೆ. ನೀನಿನ್ನು ಆ ಆಲೋಚನೆ ಬಿಟ್ಟುಬಿಡು." ಅವನ ಮಾತಿನ ಧೋರಣೆ ಸಂಪೂರ್ಣವಾಗಿ ಸರಿಯಲ್ಲವೆಂದು ನಮ್ಮ ವಸತಿಯ ದಾರಿಯುದ್ದಕ್ಕೂ ಕೇಳಿಕೊಂಡು ಬಂದೆ. ನನಗೆ ಚೆನ್ನಾಗಿ ಅರ್ಥವಾಗದ ಎರಡು ವಿರುದ್ಧ ತತ್ವಗಳನ್ನು ಒಂದುಗೂಡಿಸಲು ನಾನು ಯತ್ನಿಸಿಯೂ ಇಲ್ಲ. ಯತ್ನಿಸಲಿಚ್ಛಿಸುವುದೂ ಇಲ್ಲ. ಇದೂ ಅಲ್ಲದೆ ನಾನು ಚಿಕ್ಕಂದಿನಿಂದಲೂ ಯಾವ "ತತ್ವ" ದಲ್ಲಿಯೂ ನಂಬಿಕೆಯಿಲ್ಲದವನು. ಅದಕ್ಕೆ ಕಾರಣವಿಷ್ಟೆ. ನನ್ನ ಸ್ವಂತ ಅನುಭವಕ್ಕೂ ತತ್ವಕ್ಕೂ ಇರುವ ಅಸಾಧ್ಯ ಅಂತರ! ನನಗಿನ್ನು ಪ್ರಪಂಚ ಆಗತಾನೇ ಹುಟ್ಟುತ್ತಿದಾಗ, "ತತ್ವ" ಬಂದು ತಲೆಯಮೇಲೆ ಮೊಟಕಿ ಈ ಉದ್ಧೃತ ಪ್ರಶ್ನೆ ಹಾಕಿತು. "ನೀನೆಲ್ಲಿ ಹೋಗುತ್ತಿರುವೆ? ಏತಕ್ಕಾಗಿ? ಚಿಂತೆಯೇಕೆ ಮಾಡುತ್ತೀಯೆ?" ಕೆಲವರು ತಾತ್ವಿಕರಂತೂ ಗಡುಸಾಗಿ "ನಿಲ್ಲಿಸು" ಎಂದು ಅಪ್ಪಣೆಕೊಟ್ಟುಬಿಡುತ್ತಾರೆ. ಇದೂ ಅಲ್ಲದೆ ತತ್ವ ಹೆಂಗುಸಿನಂತೆ ಸಾಧಾರಣವಾಗಿದ್ದರೂ, ಇಲ್ಲ ವಿಕೃತವಾಗಿದ್ದರೂ ಕೂಡ ಸುಂದರ ತೊಡಿಗೆ ತೊಟ್ಟು ಸುಂದರವಾಗಿ ಕಾಣಬಲ್ಲುದೆಂದು ನನಗೆ ಮನವರಿಕೆಯಾಗಿತ್ತು. ಇದನ್ನು ಕೇಳಿ ಇಲ್ಯಿಚ್ ನಕ್ಕ. "ಸರಿ. ಅದು ಹಾಸ್ಯದ ಮಾತಾಯಿತು ಪ್ರಪಂಚವಿನ್ನೂ ಹುಟ್ಟುತ್ತಿದೆ. ಪ್ರಾರಂಭವಾಗುವ ಸ್ಥಿತಿಯಲ್ಲಿದೆ. ಹೂಂ! ಚೆನ್ನಾಗಿ ಯೋಚನೆಮಾಡು. ನೀನು ಆ ವಿಚಾರದಿಂದ ಈಗ ನೀನು ನ್ಯಾಯವಾಗಿ ಯಾವ ವಿಚಾರದಲ್ಲಿರಬೇಕಿತ್ತೋ ಅಲ್ಲಿಗೆ ಬೇಗನೇ ಸೇರುತ್ತೀಯೆ," ಎಂದ. ನಾನು ಆ ಮೇಲೆ ಲೆನಿನನಿಗೆ ನನ್ನ ದೃಷ್ಟಿಯಲ್ಲಿ ಎ. ಎ. ಬಾಗ್ದನೊವ್, ಎ. ಲುನಾಚರ್ಸ್ಕಿ ಮತ್ತು ವಿ. ಎ. ಬಾಸರೊವ್ ಬಹಳ ಬುದ್ಧಿಶಾಲಿಗಳೂ ಪ್ರಮುಖವ್ಯಕ್ತಿಗಳೂ ಅಲ್ಲದೆ ಪಾರ್ಟಿಯಲ್ಲಿ ಅವರ ಸಮಾನರಾದ ವ್ಯಕ್ತಿಗಳು ಮತ್ತಾರೂ ಇಲ್ಲವೆಂದು

ಹೇಳಿದೆ. "ನಿಜ ! ಆದರೆ ?" ಲೆನಿನ್ ಕೇಳಿದ.

"ಅವರಿಗೇ ಧ್ಯೇಯ ಒಂದೇ ಎಂದು ನನ್ನ ಅಭಿಪ್ರಾಯ. ಸರಿಯಾಗಿ ಧ್ಯೇಯವನ್ನರಿತುಕೊಂಡರೆ ಧ್ಯೇಯದ ವೈಷಮ್ಯವನ್ನು ನುಚ್ಚುನೂರಾಗಿಸ ಬಹುದೆಂದು ನನ್ನ ಅಭಿಪ್ರಾಯ" ನಾನು ಹೇಳಿದೆ.

"ಹಾಗೆಂದರೆ ಇನ್ನು ಸಂಧಿಯ ಆಸೆ ಇದೆಯೆಂದಾಯಿತು. ಆದರೆ ತಿರುಳಿಲ್ಲದ ಮಾತು. ನೀನು ನನ್ನ ಆಪ್ತಗೆಳೆಯನೆಂದು ಹೇಳುತ್ತೇನೆ. ನೀನು ಆ ಆಸೆ ಬಿಟ್ಟುಬಿಡು. ನೀನು ಹೇಳುವಂತಾದರೆ ಪ್ಲೆಕನೊವನಿಗೂ ನಮ್ಮ ಧ್ಯೇಯವೇ ಇದೆಯೆಂದಾಯಿತು. ಆದರೆ ನನ್ನ ಅಭಿಪ್ರಾಯದಂತೆ ಪ್ಲೆಕನವ್ ಅನುಭಾವಿ ತಾತ್ವಿಕನಲ್ಲದೆ ನೈಜವಾದಿಯೇ ಆದರೂ ಅವನ ಧ್ಯೇಯ ಮಾತ್ರ ಬೇರೆ."

ನಮ್ಮ ಮಾತುಕತೆ ಮುಗಿಯಿತು. ಆ ದಿನ ನಡೆದುದನ್ನು ಪದಶಃ ಹೇಳದಿದ್ದರೂ ಆದರ ತಿರುಳನ್ನು ಮಾತ್ರ ಸರಿಯಾಗಿ ಹೇಳಿದ್ದೇನೆ.

ಇಲ್ಯಿಚ್ ಲೆನಿನ್ ಲಂಡನ್ ಸಮ್ಮೇಳನದಲ್ಲಿದ್ದುದಕ್ಕಿಂತಲೂ ಹೆಚ್ಚು ದೃಢನಾಗಿದ್ದ. ಆಗ ಲಂಡನ್ನಿನಲ್ಲಿ ಪಾರ್ಟಿಯಲ್ಲುಂಟಾದ ವಿಭಜನೆ ಅವನ ಮನಸ್ಸಿನಲ್ಲಿ ಬಹಳ ಅಸಮಾಧಾನ ಮತ್ತು ನೋವನ್ನುಂಟು ಮಾಡಿತ್ತು. ಆದರೆ ಈಗ ಅವನು ಸಮಾಧಾನಚಿತ್ತನಾಗಿ, ಯಾವ ತತ್ವಕ್ಕೂ ತಲೆಬಾಗದ ಶಕ್ತಿಯಿಂದ ಕೂಡಿ ಯಾವಾಗಲೂ ಕಣ್ತೆರೆದು ಎಲ್ಲವನ್ನು ನೋಡುತ್ತಿದ್ದ. ಲೆನಿನನ್ನು ಬಹಳ ಪ್ರೀತಿಸುತ್ತಿದ್ದ ಬಾಗ್ದನೊವ್, ಕೊಂಚ ಆತ್ಮಪ್ರಶಂಸಿಯೇ ಆದರೂ ಒಳ್ಳೆಯ ಮನುಷ್ಯ. ಲೆನಿನನಿಂದ ಕಠೋರ ಚುಚ್ಚುನುಡಿ ಕೇಳಬೇಕಾಗಿ ಬಂತು. "ಶೋಪೆನ್‌ಹೊ ಒಂದು ಕಡೆ ತಿಳಿಯಾಗಿ ಯೋಚಿಸಿದರೆ ತಿಳಿಯಾಗಿ ಮಾತನಾಡಬಹುದೆಂದು ಹೇಳಿದ್ದಾನೆ. ಅದಕ್ಕಿಂತ ಬೇರೆ ಸತ್ಯದ ಮಾತಿಲ್ಲ. ಗೆಳೆಯ ಬಾಗ್ದನೊವ್, ನೀನು ಹೇಳು ವುದನ್ನು ತಿಳಿಯಾಗಿ ಏಕೆ ಹೇಳುವುದಿಲ್ಲ. ಮಾರ್ಕ್ಸಿಸಮ್ಮಿಗಿಂತ ಮ್ಯಾಕಿ ಸಮ್ಮು ಏಕೆ ಹೆಚ್ಚು ಕ್ರಾಂತಿಕಾರಿಯೆಂಬುದನ್ನು ನಿನ್ನ "ಬದಲು ತತ್ವ" ದಿಂದ ಕೂಲಿಗಾರರಿಗೆ ಏನುಪಯೋಗವೆಂಬುದನ್ನು ಸಂಕ್ಷೇಪವಾಗಿ ಸರಳ ವಾಗಿ ಹೇಳು" ಲೆನಿನ್ ಅಂದ. ಬಾಗ್ದನೋವ್ ವಿವರಿಸಲು ಪ್ರಾರಂಭಿ ಸಿದ. ಆದರೆ ಅವನ ಮಾತು ತಿಳಿಯಾಗಿ ಸರಳವಾಗಿರದೆ ಅಸಂಬದ್ಧ

ವಾಗಿತ್ತು. "ಹೋಗಲಿ ಬಿಡು" ಲೆನಿನ್ ಹೇಳಿದ. ಜೋರೆಸ್ [Jaures] ಇರಬೇಕು, ಒಂದು ಸಾರಿ 'ಮಂತ್ರಿಯಾಗಿ ಬಾಳುವುದಕ್ಕಿಂತ ಸತ್ಯ ಹೇಳುವುದೇ ಮೇಲು' ಎಂದು ಹೇಳಿದ್ದಾನೆ. ನಾನು ಅದಕ್ಕೆ 'ಮ್ಯಾಕಿಸ್ಟನಾಗುವುದಕ್ಕಿಂತ' ಎಂದೂ ಸೇರಿಸುತ್ತೇವೆ" ಲೆನಿನ್ ಹೇಳಿದ. ಕೂಡಲೇ ಬಾಗ್ದನೋವನೊಂದಿಗೆ ಚದುರಂಗದಾಟದಲ್ಲಿ ನಿಮಗ್ನನಾದ. ತಾನು ಸೋತರಂತೂ ಮಕ್ಕಳಂತೆ ಹಟಮಾಡುತ್ತಿದ್ದ. ಆದರೆ ಒಂದು ಅತಿಶಯವೆಂದರೆ ಅವನು ಈ ಬಾಲಭಾವದ ಹಟ ಅವನ ವಿಚಿತ್ರ ನಗೆಯಂತೆಯೇ ಅವನ ವ್ಯಕ್ತಿತ್ವವನ್ನು ಪೂರ್ಣಗೊಳಿಸುತ್ತಿದ್ದಿತೇ ಹೊರತು ಭಿನ್ನಮಾಡುತ್ತಿರಲಿಲ್ಲ.

ಕ್ಯಾಪ್ರಿಯಲ್ಲಿ ಮತ್ತೊಂದು ರೀತಿಯ ಲೆನಿನನ್ನು ಕಾಣಬಹುದಾಗಿತ್ತು. ಒಬ್ಬ ಸುಹೃದಯಿ ಗೆಳೆಯ. ಪ್ರಪಂಚದ ವಿಷಯಕ ಆಸಕ್ತಿ ಮತ್ತು ಉತ್ಸಾಹ ತುಂಬಿದವನು ಮತ್ತು ಮೃದುಸ್ವಭಾವದವನು. ಒಂದು ದಿನ ಸಂಜೆ ಎಲ್ಲರೂ ಗಾಳಿಸಂಚಾರಕ್ಕೆ ಹೋಗಿದ್ದಾಗ ಅವನು ನನಗೂ ಎಂ. ಎಫ್. ಆಂದ್ರೆಯೋವಳಿಗೂ ದುಃಖದ ದನಿಯಲ್ಲಿ ಹೇಳಿದ. "ಇಷ್ಟೊಂದು ವೈಶಿಷ್ಟ್ಯ, ಗುಣಜನ, ಪಾರ್ಟಿಗಾಗಿ ದುಡಿದವರು, ಅವರ ಹತ್ತರಷ್ಟು ದುಡಿಯಬಲ್ಲವರು ನಮ್ಮೆಡೆಗೆ ಬರಲೊಲ್ಲರು. ಅವರಿಗೆ ಅದು ಸಾಧ್ಯವಿಲ್ಲ. ಇಂತಹ ನೂರಾರು ಮಂದಿ ಈ ಕ್ರೂರ ಗುಂಪಿನಿಂದ ಹಾಳಾಗುತ್ತಿದ್ದಾರೆ."

ಮತ್ತೊಮ್ಮೆ ಹೇಳಿದ "ಲುನಾಚರ್ಸ್ಕಿ ಪಾರ್ಟಿಗೆ ಹಿಂತಿರುಗುತ್ತಾನೆ. ಉಳಿದ ಇಬ್ಬರಷ್ಟು ಅವನು ವ್ಯಕ್ತಿವಾದಿಯಲ್ಲ. ನಿಜವಾಗಿಯೂ ಅವನಲ್ಲಿ ಮಹತ್ತಾದ ಗುಣಗಳಿವೆ. ಅವನ ವಿಷಯದಲ್ಲಿ ಮಾತ್ರ ನಾವು ಸ್ವಲ್ಪ "ನಿರ್ಬಲ". ನಿರ್ಬಲ! ಎಂತಹ ಪದ ಅದು; ನಿಜವಾಗಿ ಅವನನ್ನು ಕಂಡರೆ ನನಗೆ ಪ್ರೀತಿ. ಅವನೊಬ್ಬ ಬಹಳ ಒಳ್ಳೆಯ ಗೆಳೆಯ! ಅವನಲ್ಲಿ ಫ್ರೆಂಚ್ ಜನಾಂಗದಲ್ಲಿ ಕಾಣುವ ಪ್ರೌಢಿಮೆ ಇದೆ. ಅವನ ಹಾಸಮಯತೆ ಕೂಡ ಫ್ರೆಂಚರಲ್ಲಿರುವಂತಹದೇ. ಅದು ಅವನ ಭಾವಮಯ ಜೀವನದ ಪರಿಣಾಮವಿರಬಹುದು."

ಕ್ಯಾಪ್ರಿಯ ಬೆಸ್ತರ ಜೀವನ, ಅವರ ದುಡಿತ, ಅವರ ಮೇಲೆ ಅರ್ಚಕರ ಪ್ರಭಾವ, ಅವರ ಪಾಠಶಾಲೆಗಳ ವಿಷಯ ಎಲ್ಲವನ್ನು ಸಾಂಗವಾಗಿ ವಿಚಾರಿಸಿದ. ಅವನ ಆಸಕ್ತಿ ಎಷ್ಟೊಂದು ವಿಚಾರಗಳಲ್ಲಿದೆಯೆಂಬುದು ನನಗೆ

ಶ್ಚರ್ಯವನ್ನುಂಟುಮಾಡಿತು. ಒಬ್ಬ ಬಡರೈತನ ಮಗನಾದ ಅರ್ಚಕನನ್ನು ಅವನಿಗೆ ತೋರಿಸಿದೊಡನೆಯೇ ಅವನ ಬಳಿಗೆ ಹೋಗಿ ಲೆನಿನ್ ರೈತರು ಮಠ Monastry] ಗಳಿಗೆ ಬಹಳ ಬಾರಿ ತಮ್ಮ ಮಕ್ಕಳನ್ನು ಕಳುಹಿಸುತ್ತಾರೆಯೋ, ಮಠದಿಂದ ಆ ಮಕ್ಕಳು ಅರ್ಚಕರಾಗಿ ತಮ್ಮ ಹಳ್ಳಿಗಳಿಗೇ ಬರುತ್ತಾರೆಯೋ ಎಂದೆಲ್ಲ ವಿಚಾರಿಸಿದ.

"ಗೊತ್ತಾಯಿತಲ್ಲ ಈಗ? ಇದೊಂದು ವೈಯಕ್ತಿಕ ಉದಾಹರಣೆಯಲ್ಲ ಎದ್ದರೆ—ಇದು ವ್ಯಾಟಿಕನ್ನಿನ ನೀತಿ, ಬಹಳ ಚಾಲೂಕು ನೀತಿಯೆಂದೇ ಅರ್ಥ!" ಲೆನಿನ್ ಹೇಳಿದ.

ಉಳಿದವರಿಗಿಂತ ಹಿರಿಮೆಯುಳ್ಳ ವ್ಯಕ್ತಿ ಸ್ವಂತ ಸುಖಾಭಿಲಾಷಿಯಾಗದೆ ಸಾಮಾನ್ಯ ಬಡಜನರ ಸುಖದುಃಖದಲ್ಲಿ ಇಷ್ಟು ಆಸಕ್ತಿ ತೋರಿದುದನ್ನು ಲೆನಿನ ನಲ್ಲಲ್ಲದೆ ಮತ್ತಾರಲ್ಲೂ ನಾನು ಕಾಣಲಿಲ್ಲ.

ಕೂಲಿಗಾರರ ಹೃದಯವನ್ನು ಕಂಡೊಡನೆಯೇ ತನ್ನ ಬಳಿಗೆ ಸೆಳೆದು ಕೊಳ್ಳುವ ಶಕ್ತಿ ಇತ್ತು ಲೆನಿನನಲ್ಲಿ. ಅವನಿಗೆ ಇಟಾಲಿಯನ್ ಮಾತು ಬರು ತ್ತಿರಲಿಲ್ಲ. ಆದರೂ ಚಾಲ್ಯಪಿನ್ ಮುಂತಾದವರು ರಷ್ಯನ್ ಮಾತನಾಡು ತ್ತಿದ್ದುದನ್ನು ಕೇಳಿದ್ದ ಬೆಸ್ತರು ತಕ್ಷಣವೇ ಲೆನಿನನ ಹಿರಿಮೆಯನ್ನು ಅರಿತು ಕೊಂಡರು. ಅವನ ನಗೆ ಮೋಹಕವಾಗಿತ್ತು. ಮಾನವರ ಮೌಢ್ಯವನ್ನು ಬುದ್ಧಿವಂತರ ಚಾಲೂಕಿನ ತಂತ್ರಗಳನ್ನು ತಿಳಿದಿದ್ದ ವ್ಯಕ್ತಿ ಸರಳ ಹೃದಯದ ಮಕ್ಕಳಂತೆ ಅರಿವಿಲ್ಲದವರ ಆಚಾರದಲ್ಲಿ ಆಹ್ಲಾದಪಡುವಂತೆ ಇತ್ತು. ಒಬ್ಬ ಮುದುಕ ಕೂಡಲೇ ಹೇಳಿದ "ಸರಳ ಹೃದಯದವರಿಗೆ ಮಾತ್ರ ಅಂತಹ ನಗೆ ಸಾಧ್ಯ."

ನಾವು ಆಗಾಗ ಆಕಾಶದಂತೆ ನೀಲ ಮತ್ತು ತಿಳಿಯಾದ ನೀರಿನಮೇಲೆ ದೋಣಿ ನಡಸಿಕೊಂಡು ಹೋಗುತ್ತಿದ್ದೆವು. ಲೆನಿನ್ ಕೈಬೆರಳಿನಿಂದಲೇ ಮೀನುಹಿಡಿಯುತ್ತಿದ್ದ. ಎಂದರೆ ಬಿದಿರಿನ ಕೊಕ್ಕೆಯಿಲ್ಲದೆ ಬರಿಯ ದಾರದಿಂದ ಮಾತ್ರ. ಬೆಸ್ತರು ದಾರದ ಅದುರುವಿಕೆ ಕೈಗೆ ಅರಿವಾದೊಡನೆ ಮೀನನ್ನು ಮೇಲಕ್ಕೆಳೆದುಕೊಳ್ಳಬೇಕೆಂದು ಹೇಳಿಕೊಟ್ಟರು. "ಕೋಸಿ ಡ್ರಿನ್, ಡ್ರಿನ್, ಕಾಪಿಸೆ?"

ಒಂದು ನಿಮಿಷದನಂತರ ಲೆನಿನ್ ಒಂದು ಮೀನು ಹಿಡಿದು ಮಕ್ಕಳ ಆನಂದ, ಬೇಟೆಗಾರರ ಉದ್ರೇಕದೊಂದಿಗೆ "ಡ್ರಿನ್, ಡ್ರಿನ್" ಎಂದು ಕೂಗಿದ. ಬೆಸ್ತರೆಲ್ಲ ಜೋರಾಗಿ ನಕ್ಕು, ಲೆನಿನನಿಗೆ "ಡ್ರಿನ್ ಡ್ರಿನ್" ಎಂಬ ಉಪನಾಮವಿಟ್ಟರು. ಅವನು ಹೊರಟು ಹೋದ ಮೇಲೆ ಕೂಡ "ನಮ್ಮ ಡ್ರಿನ್ ಡ್ರಿನ್ ಹೇಗಿದ್ದಾರೆ? ಸಾರ್ ಅವರನ್ನಿನ್ನು ಹಿಡಿದಿಲ್ಲವಲ್ಲ?" ಎಂದು ಕೇಳುತ್ತಿದ್ದರು.

ಪ್ಲೆಕನವ್ ಕ್ಯಾಪ್ರಿಗೆ ಬಂದಿದ್ದುದು ಲೆನಿನನಿಗಿಂತ ಮೊದಲೋ ಆಮೇಲೋ ನನಗೆ ಸರಿಯಾಗಿ ನೆನಪಿಲ್ಲ. ಸಾಹಿತಿ ಆಲಿಗರ್, ಸೋಚಿಯಲ್ಲಿ ಬಂಡಾಯವೆಬ್ಬಿಸಿದ್ದಕ್ಕಾಗಿ ಮರಣದಂಡನೆಗೆ ಗುರಿಯಾಗಿದ್ದ. ಲೋರೆನ್ಸ್-ಮೆಟ್ನರ್, ಪಾಲ್ ವಿಗ್ದೋರ್ಚಿಕ್ ಮತ್ತು ಇನ್ನಿತರ ಇಬ್ಬರು ರಷ್ಯದಿಂದ ತಲೆತಪ್ಪಿಸಿಕೊಂಡು ಬಂದಿದ್ದವರು ಪ್ಲೆಕನವನನ್ನು ನೋಡಬೇಕೆಂದಿದ್ದರು. ಆದರೆ ಅವನು ತಿರಸ್ಕರಿಸಿಬಿಟ್ಟ. ಅದೇನೋ ಸರಿ. ಅವನಿಗೆ ಕಾಹಿಲೆಯಾಗಿ ವಿಶ್ರಾಂತಿಗಾಗಿ ಅಲ್ಲಿಗೆ ಬಂದಿದ್ದ. ಆದರೆ ಆಲಿಗರ್ ಮತ್ತು ಲೋರೆನ್ಸ್ ಹೇಳಿದಂತೆ ಅವನು ತಿರಸ್ಕರಿಸಿದ ರೀತಿ ಅವಮಾನಪಡಿಸುವಂತಿತ್ತು. "ಕೆಲಸಕ್ಕೆ ಬಾರದ ಮಾತುಗಾರಿಕೆಯ ಜನರನ್ನು ಕಂಡು ಬೇಸರವಾಗಿದೆ" ಎಂದು ಪ್ಲೆಕನವ್ ಅಂದನೆಂದು ಬಲು ಸುಲಭವಾಗಿ ಉದ್ರೇಕಗೊಳ್ಳುವ ಆಲಿಗರ್ ಸಾಧಿಸಿಯೇಬಿಟ್ಟ. ಪ್ಲೆಕನವ್ ನನ್ನೊಡನೆ ಇದ್ದಾಗ ಸ್ಥಳೀಯ ಗುಂಪಿನಿಂದ ಯಾರನ್ನು ನೋಡಲು ಅವನು ಇಷ್ಟಪಡಲಿಲ್ಲ. ಇಲ್ಯಿಚ್ ಮಾತ್ರ ಅವರೆಲ್ಲರನ್ನು ಕಂಡಿದ್ದ. ಪ್ಲೆಕನವ್ ಯಾವ ವಿಷಯವಾಗಿಯೂ ಏನನ್ನು ವಿಚಾರಿಸದೆ, ತನಗೆಲ್ಲವೂ ತಿಳಿದವನಂತೆ ನಮಗೇ ಹೇಳಿಕೊಡಲು ಬರುತ್ತಿದ್ದ. ರಷ್ಯರ ಸ್ವಾಭಾವಿಕ ಗುಣ ಮತ್ತು ಯೂರೋಪಿಯನ್ ವಿದ್ಯಾಭ್ಯಾಸಗಳ ಪರಿಣಾಮವಾಗಿ ಅವನು ತನ್ನ ಬುದ್ಧಿಮತ್ತೆಯನ್ನು ತೋರಿಸಿಕೊಳ್ಳುವುದಷ್ಟೇ ಅಲ್ಲದೆ ಕ್ರೂರ ಹಾಸ್ಯಕ್ಕಾಗಿ ರಷ್ಯರ ಮತ್ತು ಬೇರೆ ಗೆಳೆಯರ ಕುಂದುಕೊರತೆಗಳನ್ನೇ ಒತ್ತಿ ಒತ್ತಿ ತೋರಿಸುತ್ತಿದ್ದ. ನನಗಂತೂ ಅವನ ಹಾಸ್ಯ ಅಸಂಬದ್ಧವೆಂದು ತೋರುತ್ತಿತ್ತು. ನನ್ನ ನೆನಪಿನಲ್ಲುಳಿದಿರುವುದೆಂದರೆ—"ಅಮಿತಮಿತವಾದಿ ಮೆರ್ಥಿಂಗ್; ಎರಿಕೊಫೆರ್ರಿಯೊಬ್ಬ ಮೋಸಗಾರ. ಅವನಲ್ಲಿ ಕಬ್ಬಿಣವೂ ಇಲ್ಲ, ಚಿನ್ನವೂ ಇಲ್ಲ". 'ಫೆರ್ರಿ' ಎಂದರೆ ಕಬ್ಬಿಣ ಎಂದರ್ಥ. ಅದರಮೇಲೆ ಈ

ವಿನೋದ ನಿರ್ಮಾಣ! ಅವನ ವಿನೋದವೆಲ್ಲವೂ ಇದೇ ರೀತಿಯದು. ಅವನ ಸಾಮಾನ್ಯಗುಣವೆಂದರೆ ಉಳಿದವರೆಲ್ಲರನ್ನೂ ತನ್ನ ಆಳುಗಳಂತೆ ನೋಡುವುದು –ತಾನು ದೈವವೆಂಬಂತೆ. ಅವನ ಪಾರ್ಟಿ, ತತ್ವಪ್ರಚೋದನೆ ಮತ್ತು ಬರೆಹಗಳ ವಿಷಯದಲ್ಲಿ ನನಗೆ ಬಹಳ ಗೌರವವಿತ್ತು. ಆದರೆ ಅವನಲ್ಲಿ "ಮೇಲ್ತರಗತಿಯ" ಮನೋಭಾವ ಅತಿಯಾಗಿತ್ತು. ನನ್ನ ಈ ನಿರ್ಧಾರ ತಪ್ಪಿರಬಹುದು, ನನ ಗೇನೋ ತಪ್ಪು ಮಾಡಲು ಇಷ್ಟವಿಲ್ಲ. ಆದರೆ ಕೆಲವು ವೇಳೆ ತಪ್ಪುಗಳನ್ನು ನಿವಾರಿಸಲು ಸಾಧ್ಯವಾಗುವುದಿಲ್ಲ. ಆದರೆ ಇದು ಮಾತ್ರ ನಿಜ. ಜೆ. ವಿ. ಪ್ಲೆಕನವ್ ಮತ್ತು ವಿ. ಐ. ಲೆನಿನ್‌ರಷ್ಟು ಒಬ್ಬರೊಬ್ಬರಿಗೆ ಅಂತರವಿರುವಂತಹ ವ್ಯಕ್ತಿಗಳನ್ನು ನಾನು ಮತ್ತಾರನ್ನು ಕಂಡಿಲ್ಲ. ಇದಕ್ಕೆ ಕಾರಣವೂ ಬಹಳ ದೂರವಿಲ್ಲ. ಒಬ್ಬ ಹಳೆಯ ವಿಶ್ವದ ವಿನಾಶ ಪೂರ್ಣಗೊಳಿಸುತ್ತಿದ್ದ. ಮತ್ತೊಬ್ಬ ಹೊಸ ವಿಶ್ವದ ನಿರ್ಮಾಣದಲ್ಲಿ ನಿರತನಾಗಿದ್ದ !

ಸಂಕಟದ ಅನಿವಾರ್ಯವನ್ನು, ಸಂಕಟವೇ ಸಂತಸದ ಹಾದಿಯೆಂಬು ದನ್ನು ವೇದವಾಕ್ಯಮಾಡಿಕೊಂಡಿರುವ ರಷ್ಯದಲ್ಲಿ ಸಂಕಟದುಃಖ ಬಡತನ ಗಳನ್ನು ಲೆನಿನನಷ್ಟು ದ್ವೇಷಿಸಿದವರನ್ನು ನಾನು ಕಂಡೇ ಇಲ್ಲ. ಸಂಕಟ ವನ್ನು ಮೇಲೆತ್ತಿ ಅದನ್ನೇ ಆದರ್ಶಗೊಳಿಸಿ ಆರಾಧಿಸಿ ಉಳಿದ ಪುಸ್ತಕಗಳೇ ಹೆಚ್ಚಿರುವ ದೇಶದಲ್ಲಿ ಓದುವುದಕ್ಕಾರಂಭಿಸಿದೊಡನೆಯೆ ೯ ಅತಿ ಪುಟ್ಟ ಯಾಂತ್ರಿಕ ದಿನಚರಿಯ ಘಟನೆಗಳನ್ನು ಹಿಗ್ಗಿಸಿ ಆದರ್ಶಿಸಿ ಬರೆದ ಪುಸ್ತಕಗಳಿಂದ ವಿದ್ಯಾ ಭ್ಯಾಸವಾರಂಭವಾಗುವ ದೇಶದಲ್ಲಿ ಈ ರೀತಿ ಸಂಕಟ ಮತ್ತು ದುಃಖಗಳ ದ್ವೇಷ ಅವನಲ್ಲಿದ್ದುದು ಲೆನಿನನ ಹಿರಿಮೆಯೆಂದೇ ನನ್ನ ಅಭಿಮತ. ಯೂರೋಪಿನ ಸಾಹಿತ್ಯದಲ್ಲೆಲ್ಲಾ ಅತಿ ನಿರಾಶಾವಾದಿಯೆಂದರೆ ರಷ್ಯನ್ ಸಾಹಿತ್ಯ. ನಮ್ಮ ಸಾಹಿತ್ಯವೆಲ್ಲಾ ಒಂದೇ ಕಲ್ಲಿನ ಮೇಲೆ ನಿಂತಿದೆ. ಯೌವನದಲ್ಲಿ ಮತ್ತು ಇಳಿ ವಯಸ್ಸಿನಲ್ಲಿ ನಮ್ಮ ಮೂರ್ಖತೆಯಿಂದ, ವ್ಯಕ್ತಿಸ್ವಾಮಿತ್ವದ (autocracy) ಒತ್ತಾಯದಿಂದ, ಹೆಣ್ಣಿನಿಂದ, ನೆರೆಹೊರೆಯವರ ಪ್ರೀತಿಯಿಂದ, ಪ್ರಪಂಚದ ವಿಚಿತ್ರ ಸೃಷ್ಟಿಯಿಂದ ನಾವು ಹೇಗೆ ಸಂಕಟಕ್ಕೀಡಾಗುತ್ತೇವೆ, ಮುದಿತನದಲ್ಲಿ ಜೀವನದಲ್ಲಿ ಮಾಡಿದ ತಪ್ಪುಗಳ ತಿಳುವಳಿಕೆಯಿಂದ, ಹಲ್ಲಿಲ್ಲದುದರಿಂದ, ಅಜೀರ್ಣದಿಂದ ಮತ್ತು ನಾಡಿನ ಹೆದರಿಕೆಯಿಂದ ಹೇಗೆ ದುಃಖದಲ್ಲಿ ಮುಳುಗು ತ್ತೇವೆ—ಇದೇ ನಮ್ಮ ಸಾಹಿತ್ಯದ ಮೂಲ ವಿಚಾರ. ಯಾವದೋ ರಾಜ

ಕೀಯ ಕಾರಣಕ್ಕಾಗಿ ಒಂದು ತಿಂಗಳ ಕಾಲ ಸೆರೆಯಲ್ಲಿದ್ದರೆ ಸರಿ, ಇಲ್ಲ ಒಂದು ವರ್ಷ ಗಡಿಯಾಚೆ ಜೀವಿಸಿದ್ದರೂ ಸರಿ, ರಷ್ಯ ಜನಾಂಗಕ್ಕೆ ತನ್ನ ಸಂತಾಪ ಸಂಕಟಗಳ ನೆನವುಗಳನ್ನು ಕೊಡುವುದು ತನ್ನ ಧರ್ಮವೆಂದು ಪ್ರತಿಯೊಬ್ಬ ರಷ್ಯನನ ನಂಬಿಕೆ. ಆದರೆ ನಿಜವಾಗಿಯೂ ಸುಖದಲ್ಲಿ ಕಳೆದ ಕಾಲದ ನೆನವು ಗಳನ್ನು ಮಾತ್ರ ಯಾರೂ ಬರೆದಿಲ್ಲ. ರಷ್ಯನರು ತಮ್ಮ ಜೀವನವು ಹೇಗಿರ ಬೇಕೆಂದು ಯೋಚಿದರೂ, ಆ ರೀತಿ ನಡೆಸಲು ಮಾತ್ರ ಶಕ್ತರಲ್ಲದುದರಿಂದ ಈ ರೀತಿಯ ನೆನವುಗಳು ಬಂದರೆ ಅವರಿಗೆ ಅದರಿಂದ ಸುಖಜೀವನದ ದಾರಿ ತೋರಿಬಂದರೂ ಬರಬಹುದು.

ಸಂಕಟಪಡುವುದು ಜೀವನದಲ್ಲಿ ಅನಿವಾರ್ಯವಲ್ಲ, ಆದರೆ ಜನಗಳು ಸುಲಭವಾಗಿಯೇ ನಿವಾರಿಸಬಹುದಾದ ಅಕ್ರಮವೆಂದು ಲೆನಿನನ ದೃಢ ನಿಶ್ಚಯ. ಅವನು ಸಂಕಟ, ದುಃಖ, ತೊಂದರೆಗಳ ವಿಷಯ ತೋರುತ್ತಿದ್ದ ಸ್ಥಿರದ್ವೇಷವೇ ಅವನ ಹಿರಿಮೆಯು ಕಾರಣವೆಂದು ನನಗೆ ತೋರುತ್ತದೆ. ಇದು ಒಬ್ಬ ನೈಜವಾದಿಯ ಹೃದಯದಲ್ಲಿ ಬೆಳಗುತ್ತಿದ್ದ ಅಸಾಧ್ಯ ಭರವಸೆ. ಆಸೆ ಎನ್ನಬಹುದು. ರಷ್ಯನ್ ಜನಾಂಗದಲ್ಲಿ ಈ ಗುಣಕಾಣಬರದು. ಆ ಗುಣವೇ ನನ್ನನ್ನು ಆ ಪ್ರಚಂಡ ವ್ಯಕ್ತಿಯ ಕಡೆಗೆ ಸೆಳೆದದ್ದು.

## ಲೆನಿನನೊಂದಿಗೆ ವ್ಯತ್ಯಾಸಗಳು

೧೯೧೭-೧೮ರಲ್ಲಿ ಲೆನಿನನೊಂದಿಗೆ ನನಗಿದ್ದ ಸಂಬಂಧ ಅಷ್ಟಾಗಿ ಚೆನ್ನಾಗಿರಲಿಲ್ಲ; ಯಾರೂ ಇಚ್ಛಿಸುವಂತಹುದಲ್ಲ. ಆದರೆ ಅದು ಅನಿವಾರ್ಯ ವಾಗಿತ್ತು. ಅವನು ರಾಜಕಾರಣಿ. ರೈತಾಪಿ ಜನರ ಭಾರಹೊತ್ತ ಅತಿ ದೊಡ್ಡ ನಾವೆ. ರಷ್ಯವನ್ನು ಸುಗಮವಾದ ದಾರಿಯಲ್ಲೊಯ್ಯಲು ಬೇಕಾದ ದೂರದೃಷ್ಟಿ ಅವನಲ್ಲಿ ಪೂರ್ಣವಾಗಿತ್ತು. ನನಗೆ ಸ್ವಭಾವವಾಗಿಯೇ ರಾಜ ಕಾರಣ ಸೇರದು. ಜನತೆಯು ಅದರಲ್ಲೂ ರೈತರ ವಿಚಾರಶಕ್ತಿಯಲ್ಲಿ ನನಗೆ ಅಷ್ಟು ನಂಬಿಕೆ ಕೂಡ ಇಲ್ಲ. ಹೊರಗಿನ ಒತ್ತಾಯವಿಲ್ಲದೆ ತಾನಾಗಿಯೇ ಬರುವ ವಿಚಾರಶಕ್ತಿ ಇನ್ನೂ ಸೃಷ್ಟಿ ಕಾರ್ಯದಲ್ಲಿನ ಶಕ್ತಿಯಾಗಿಲ್ಲ. ಜನ ಜಂಗುಳಿಯಲ್ಲಿ ವಿಚಾರದೃಷ್ಟಿ ಬರಬೇಕಾದಲ್ಲಿ ಬೇರೆಬೇರೆ ವ್ಯಕ್ತಿಗಳೆಲ್ಲರ ಅವಶ್ಯ ಕತೆಗಳನ್ನೆಲ್ಲ ಸಂಯುಕ್ತಗೊಳಿಸಬೇಕು.

ಜನಜಂಗುಳಿ ಸಾವಿರಾರು ವರ್ಷಗಳಿಂದ ಸತ್ಯದ ಕಡೆ ಸಾಗಲು ಯತ್ನಿಸಿದೆ. ಈ ಯತ್ನದ ನಡುವೆ ಕೆಲವು ಕ್ರಿಮಿಗಳು ಅವರಿಂದಲೇ ಹೊರಬಿದ್ದು ಅದರ ರಕ್ತವನ್ನೇ ಹೀರಿ ಜನ ರಕ್ತೋಪಜೀವಿಯಾಗಿವೆ. ಎಲ್ಲಿಯವರೆಗೂ ಲೆನಿನ್ ಬೋಧಿಸಿದ ತತ್ವದ ಶಕ್ತಿಯನ್ನು ಜನತೆ ಆಚರಣೆಗೆ ತರುವುದಿಲ್ಲವೋ ಅಲ್ಲಿಯವರೆಗೂ ಹೀಗೆಯೇ ಮುಂದುವರಿಯುವುದು.

೧೯೧೭ರಲ್ಲಿ ಲೆನಿನ್ ರಷ್ಯಕ್ಕೆ ಬಂದೊಡನೆಯೇ ತನ್ನ ಲೇಖನ ಪ್ರಕಟಿಸಿದೊಡನೆ, ನನಗೆ, ಅನ್ಯಾಯವಾಗಿ ನುರಿತ ವೀರಕ್ರಾಂತಿಕಾರ ಕೂಲಿಗಾರರನ್ನೂ ಮಧ್ಯವರ್ಗದ ಕ್ರಾಂತಿವೀರರನ್ನು ರಷ್ಯದ ರೈತರಿಗಾಗಿ ಬಲಿಕೊಡುತ್ತಿರುವನಲ್ಲಾ ಎನ್ನಿಸಿತು. ರಷ್ಯನ್ ಜನಾಂಗದಲ್ಲಿ ಯಾವ ಬದಲಾವಣೆಯನ್ನು ತಾರದೆ ಸುಮ್ಮನೆ ನೀರಿನಲ್ಲಿಸೆದ ಒಂದು ಹಿಡಿ ಉಪ್ಪಿನಂತೆ ಏಕಮಾತ್ರ ಕ್ರಾಂತಿಕಾರರ ಗುಂಪು ಹಳ್ಳಿಯ ಜೀವನದಲ್ಲಿ ಸಿಕ್ಕಿ ಹಾಳಾಗುವುದಲ್ಲಾ ಎಂದು ಸಿಟ್ಟುಸಿರುಬಿಟ್ಟೆ. ಕೆಲಸದಲ್ಲಿರುವ ಬುದ್ಧಿ ಜೀವಿಗಳು ಎಂದರೆ ವಿಜ್ಞಾನಿಗಳು, ಕುಶಲಕೈಗಾರಿಕಾಧ್ಯಾಯಿಗಳು ಇವರೆಲ್ಲರೂ ನನ್ನಭಿಪ್ರಾಯದಲ್ಲಿ ಕ್ರಾಂತಿಕಾರಿಗಳು. ಇವರೂ ಕೂಲಿಗಾರರೂ ರಷ್ಯದ ಅತಿ ಪ್ರಬಲಶಕ್ತಿ. ೧೯೧೭ರಲ್ಲಿ ರಷ್ಯ ಹಳ್ಳಿಗಳನ್ನು ಸುವ್ಯವಸ್ಥಿತಗೊಳಿಸುವುದಕ್ಕಾಗಲೀ ಇವರಲ್ಲದೆ ಬೇರೆ ಯಾರೂ ಶಕ್ತರಲ್ಲವೆಂದು ನನಗೆ ತೋರಿತು. ಆದರೆ ಈ ಅಲ್ಪ ಸಂಖ್ಯಾತ ಆದರೆ ಪ್ರಬಲಶಕ್ತಿ ತನ್ನ ಕೆಲಸ ಸುಗಮವಾಗಿ ನಡೆಸಬೇಕಾಗಿದ್ದಲ್ಲಿ ಪ್ರಚಂಡ ಐಕ್ಯತೆ ಬೇಕಾಗಿತ್ತು. ಅವರ ಮುಂದಿದ್ದ ಕಾರ್ಯವೂ ಅಗಾಧ!—ಹಳ್ಳಿಗಳ ಅನಾಯಕತೆಯನ್ನು ಓಡಿಸಿ ವ್ಯವಸ್ಥೆಗೊಳಿಸುವುದು, ರೈತನ ಮನಸ್ಸನ್ನು ರೂಪುಗೊಳಿಸುವುದು. ಅವನು ವಿಚಾರ ಶೀಲನಾಗಿ ತನ್ನ ಆರ್ಥಿಕ ವ್ಯವಸ್ಥೆಯನ್ನು ಅಂದಗೊಳಿಸಿ ದೇಶದ ಏಳಿಗೆಗೆ ಕಾರಣನಾಗುವಂತೆ ಮಾಡಬೇಕಾಗಿತ್ತು—ಈ ಕಾರ್ಯ ಫಲಕಾರಿಯಾಗಬೇಕಾಗಿದ್ದಲ್ಲಿ ಹಳ್ಳಿಯವರ ಮನೋವಿಚಾರ ನಗರವಾಸಿಗಳ ವಿಚಾರಶೀಲತೆಯ ಕಡೆಗೆ ತಿರುಗುವಂತೆ ಮಾಡಬೇಕು. ರಾಷ್ಟ್ರದ ಕಲೆಯ ಬೆಳವಣಿಗೆಗೆ ಸರಿಯಾದ ವಾತಾವರಣ ಕಲ್ಪಿಸುವುದೇ ಕ್ರಾಂತಿಯ ಮೊದಲನೆಯ ಕರ್ತವ್ಯ. ಇದಕ್ಕಾಗಿ ಕ್ಯಾಪ್ರಿಯಲ್ಲಿ ಕೂಲಿಗಾರರಿಗಾಗಿ ಒಂದು ಶಾಲೆ ತೆರೆಯಲೊಪ್ಪಿದೆ. ೧೯೦೭ ರಿಂದ ೧೯೧೩ರ ವರೆಗಿನ ನಿರಾಸೆ ಮುಸುಕುತ್ತಿದ್ದ ಕಾಲದಲ್ಲಿ ಕೂಲಿಗಾರರನ್ನು ಉತ್ತೇಜಿಸಲು

ನನ್ನಿಂದ ಸಾಧ್ಯವಾದಷ್ಟೂ ಯತ್ನಿಸಿದೆ—ಅವರಲ್ಲಿ ಭರವಸೆ ತುಂಬಿದೆ. ಇದ ಕ್ಕಾಗಿಯೇ ಫೆಬ್ರವರಿ ಕ್ರಾಂತಿಯಾದೊಡನೆಯೇ "ಉಪಯುಕ್ತ ವಿಜ್ಞಾನದ ಬೆಳೆವಣಿಗೆಯ ಸಂಘ" [Free Associatien for the Development of Positive Sciences] ವನ್ನು ಸ್ಥಾಪಿಸಲಾಯಿತು. ಈ ಸಂಘದ ಧ್ಯೇಯ ವೆಂದರೆ ರಷ್ಯದಲ್ಲಿ ವಿಜ್ಞಾನ ಸಂಶೋಧನಾ ಸಂಘಗಳನ್ನು ಸ್ಥಾಪಿಸುವುದೊಂದೇ ಅಲ್ಲದೆ ಕೂಲಿಗಾರರಿಗೆ ವೈಜ್ಞಾನಿಕ ವಿಷಯಗಳನ್ನು ಮನದಟ್ಟಾಗುವಂತೆ ತಿಳಿ ಸುವುದು. ಈ ಸಂಘದಲ್ಲಿನ ಪ್ರಮುಖ ವ್ಯಕ್ತಿಗಳೆಂದರೆ "ವಿಜ್ಞಾನದ ಅಕೆಡಮಿ" [Academy of Sciences] ಹಿರಿಯ ವಿಜ್ಞಾನಿಗಳು—ವಿ. ಎ. ಸ್ಟೆಕ್ಲೊವ್, ಎಲ್. ಎ. ಚುಗಯೆವ್, ಅಕೆಡಮಿಯ ಫರ್ಸ್‌ಮನ್, ಎಸ್. ಪಿ. ಕಾಸ್ಟಿ ಚೆವ್, ಎ. ಎ. ಪೆಟ್ರೊವ್ಸ್ಕಿ ಮುಂತಾದವರು. ಕಾಸ್ಟಿಚೆವ್ ಆಗಲೇ ಪ್ರಾಣಿ ಶಾಸ್ತ್ರ ಮತ್ತು ಸಸ್ಯಶಾಸ್ತ್ರ ಸಂಶೋಧನಾ ವಿಭಾಗಕ್ಕಾಗಿ ಒಂದು ಕಟ್ಟಡ ಹುಡುಕುತ್ತಿದ್ದ. ನನ್ನ ಜೀವನದಲ್ಲಿ ಮೊದಲಿನಿಂದಲೂ ಹಳ್ಳಿಯ ನಿರಕ್ಷರತೆಯ ಫಲವಾಗಿ ನಗರಗಳ ಮೇಲಾಗಿದ್ದ ದುಷ್ಪರಿಣಾಮ, ಹಳ್ಳಿಗರ ಅತಿ ವೈಯಕ್ತಿಕ ಚರ್ಯೆ ಮತ್ತು ಅವರಲ್ಲಿ ಯಾವುದೇ ಸಾಮಾಜಿಕ ಗುಣದ ಅಭಾವ ಇವುಗ ಳಿಂದ ಕೊಂಚ ನಿರಾಸೆ ಮೂಡಿತ್ತು. ಯುದ್ಧದಿಂದ ಅನಾಯಕವಾಗಿದ್ದ ಹಳ್ಳಿ ಗಳ ಜೀವನವನ್ನು ಹದಗೊಳಿಸಲು ನನ್ನ ಅಭಿಪ್ರಾಯದಲ್ಲಿ ಕೂಲಿಗಾರ ಮತ್ತು ಮಧ್ಯವರ್ಗದ ಕ್ರಾಂತಿವೀರರ ಸಮ್ಮಿಳಿತ ಶಕ್ತಿಯ ಸರ್ವಾಧಿಕಾರದಿಂದ ಮಾತ್ರ ಸಾಧ್ಯವಾಗುತ್ತಿತ್ತು. ಕೂಲಿಗಾರರಿಗೂ ಧೈರ್ಯ ತುಂಬಿ, ವೀರ್ಯ ತರಿಸಿ, ಕ್ರಾಂತಿಕಾರಿಗಳಾಗುವಂತೆ ಮಾಡಿದ ಬಾಲ್ಶೆವಿಕರೆಲ್ಲರೂ ಮಧ್ಯ ವರ್ಗದ ಬುದ್ಧಿಜೀವಿಗಳೇ ಆದರೂ, ಅವರಿಗೂ ನನಗೂ ಕ್ರಾಂತಿಯಲ್ಲಿ ಮಧ್ಯವರ್ಗದವರ ಪಾತ್ರ ಮತ್ತು ಬೆಲೆಯ ವಿಷಯದಲ್ಲಿ ಭಿನ್ನಾಭಿಪ್ರಾಯ ಒದಗಿತು. ರಷ್ಯನ್ ಚರಿತ್ರೆಗೆ ಖ್ಯಾತಿ ತರುವವರೆಂದರೆ ಈ ಬುದ್ಧಿಜೀವಿಗಳು ಎಂದು ನನ್ನಭಿಮತ. ಜನತೆ ತನ್ನ ನಡುವೆ ಆದ ಗಲಭೆ, ಪೆಟ್ಟು, ಉತ್ತೇ ಜನಗಳೆಷ್ಟಿದ್ದರೂ ಹೊರಗಿನಿಂದ ನಾಯಕತ್ವ ಇಲ್ಲದಿದ್ದಲ್ಲಿ ಕೆಲಸಮಾಡುವಷ್ಟು ಉತ್ಸಾಹವಾಗಲಿ ಶಕ್ತಿಯಾಗಲಿ ಅದರಲ್ಲಿರಲಿಲ್ಲ.

೧೩ ವರ್ಷಗಳ ಹಿಂದೆ ನಾನು ಹೀಗೆ ಯೋಚಿಸಿದ್ದೆ. ಆದರೆ ಅದು ಎಷ್ಟು ತಪ್ಪಾಗಿತ್ತೆಂಬುದು ಈಗ ತಿಳಿದಿದೆ. ನನ್ನ ನೆನಪುಗಳ ಈ ಪುಟ

ಹರಿದು ಹಾಕಿದರೇ ಒಳ್ಳೆಯದು. ಆದರೆ ಇಲ್ಯಿಚ್ ಆಗಾಗ ಅನ್ನುತ್ತಿದ್ದಂತೆ "ಲೇಖನಿಯಿಂದ ಬರೆದುದನ್ನು ಕೊಡಲಿಯಿಂದ ಕೂಡ ಕತ್ತರಿಸಲು ಸಾಧ್ಯ ವಿಲ್ಲ"—"ನಮ್ಮ ತಪ್ಪುಗಳಿಂದಲೇ ನಾವು ಕಲಿತುಕೊಳ್ಳುತ್ತೇವೆ''. ಓದು ಗನಿಗೆ ನನ್ನ ತಪ್ಪು ತಿಳಿಯಲಿ. ಶೀಘ್ರ ನಿರ್ಧಾರಕ್ಕೆ ಬರುವವರಿಗೆ ಇದೊಂದು ಎಚ್ಚರಿಕೆಯಾಗಿರಲಿ. ವಿಜ್ಞಾನದಲ್ಲಿ ಚೆನ್ನಾಗಿ ಅರಿತು ನುರಿತವರು ಮಾಡಿದ ಅವಿಚಾರ ಕಾರ್ಯಗಳನ್ನು ಕಂಡು ಕಂಡು ಅವರ ವಿಷಯವಾಗಿ ನನ್ನ ಅಭಿಪ್ರಾಯವನ್ನು ಬದಲಾಯಿಸಬೇಕಾಗಿ ಬಂತು. ವಯಸ್ಸಾದ ಮೇಲೆ ಮನಸ್ಸಿನಲ್ಲಾಗುವ ಈ ಬದಲಾವಣೆಗಳು ಬಹಳ ಸುಂಕವನ್ನೆತ್ತುತ್ತವೆ. ಸತ್ಯ ಹೃದಯದ ನಾಯಕರ ಕೆಲಸ ಬಹಳ ಕಠಿನ. ಒಂದು ವಿಷಯದಲ್ಲಿಯೂ ಕ್ರೂರಿಯಾಗದ ನಾಯಕ ದೊರೆಯುವುದು ಅಸಾಧ್ಯ. ಥಾಮಸ್ ಮನ್ಸರ ನಿಂದ ಸತ್ತವರಿಗಿಂತ ಲೆನಿನ ಆಡಳಿತದಲ್ಲಿ ಸತ್ತವರು ಹೆಚ್ಚಿರಬಹುದು. ಆದರೆ ಲೆನಿನ್ ಅಷ್ಟು ಕಠಿಣವಾಗಿರದಿದ್ದರೆ ಕ್ರಾಂತಿವಿರೋಧಿ ಪಂಗಡದವರ ಶಕ್ತಿ ಬಹಳ ಹೆಚ್ಚಾಗುತ್ತಿತ್ತು. ಇದರೊಂದಿಗೆ ನಾವು ಮತ್ತೊಂದು ವಿಚಾರವನ್ನು ಗಮನಿಸಬೇಕು—ನಾಗರೀಕತೆ ಬೆಳೆದಂತೆ ವ್ಯಕ್ತಿಯ ಜೀವದ ಬೆಲೆ ತಗ್ಗುತ್ತಾ ಇದೆಯೆಂಬುದು. ಇದಕ್ಕೆ ಆಧುನಿಕ ಯೂರೋಪಿನಲ್ಲಿ ಜನ ವಿನಾಶಕ ಇಚ್ಛೆ ಮತ್ತು ಸಾಮಗ್ರಿಗಳ ಬೆಳೆವಣಿಗೆಯೇ ಹಿರಿಯ ನಿದರ್ಶನ.

ರಷ್ಯದ ಕ್ರಾಂತಿಯ ರಕ್ತಪ್ರಿಯತೆಯನ್ನು ಖಂಡಿಸಿದ ನೀತಿವಂತರೆನ್ನಿಸಿ ಕೊಂಡವರೇ ಸಮಗ್ರ ಯೂರೋಪಿನ ಸುಪ್ರಸಿದ್ಧ ಸಂಗ್ರಾಮದಲ್ಲಿ ಸತ್ತವರ ವಿಚಾರ ಸಹಾನುಭೂತಿ ಕೂಡ ತೋರಿಸದೆ ''ವಿಜಯಿಾ ಅಂತ್ಯ'' ದ ಕಡೆಗೆ ಸಾಗಲು ಉತ್ತೇಜನಕೊಟ್ಟರೆಂದಮೇಲೆ ಅವರ ಮೇಲ್ತೋರಿಕೆಯ ನೀತಿವಂತಿಕೆ ಯನ್ನು, ಮೋಸಗಾರಿಕೆಯನ್ನು ತಾವು ಒಪ್ಪುವರೆ ಎಂಬುದನ್ನು ಸತ್ಯವಾಗಿ ವಿಮರ್ಶಿಸಿ ಯಾರೇ ಆದರೂ ಹೇಳಲಿ. ಅದೇ ''ನಾಗರಿಕ'' ರಾಷ್ಟ್ರಗಳು ಇಂದು ಮಧ್ಯವರ್ಗದ ಕೀಳ್ತರಗತಿಯವರ ನೀಚತನಕ್ಕೆ ಬಲೆಬಿದ್ದು ಅವನತಿ, ನಿರ್ನಾಮಗಳ ಹಾದಿಯಲ್ಲಿ ಸಾಗಿ ಜನತೆಯನ್ನು ತುಳಿಯುತ್ತಿದ್ದಾರೆ.

ಲೆನಿನನ ಕ್ರೂರತೆಯ ವಿಚಾರವಾಗಿ ನೂರಾರು ಮಂದಿ ಈಗಾಗಲೇ ಬೇಕಾದಷ್ಟಕ್ಕಿಂತ ಹೆಚ್ಚಿಗೆ ಹೇಳಿದ್ದಾರೆ. ಸುಳ್ಳು ಮತ್ತು ಅಪಪ್ರಚಾರಗಳು ಮಧ್ಯವರ್ಗದ ರಾಜಕೀಯದ ಒಂದು ಪ್ರಮುಖ ಅಂಗ—ಶತ್ರುವನ್ನೆದುರಿಸಲು

ಅವರುಪಯೋಗಿಸುವ ಮಹಾಸ್ತ್ರ. ಪ್ರಪಂಚದಲ್ಲಿ ಅಪಪ್ರಚಾರದ ಮಣ್ಣಿ ರಚಿಸಿಕೊಳ್ಳದೆ ಇರುವ ಒಬ್ಬನೇ ಒಬ್ಬನಾಗಲೀ ಮಹಾಪುರುಷನಿಲ್ಲವೆಂಬುದು ಎಲ್ಲರಿಗೂ ಚೆನ್ನಾಗಿ ತಿಳಿದೇ ಇದೆ. ಇದೂ ಅಲ್ಲದೆ ಸಾಮಾನ್ಯ ಜನರಲ್ಲಿ ಮಹಾ ಪುರುಷರನ್ನು ತಮ್ಮಂತಸ್ತಿಗೇ ಎಳೆಯುವುದೂ ಅಲ್ಲದೆ ಅವರನ್ನು "ನಿತ್ಯಜೀವನದ" ಹೊಸಲಿನಲ್ಲಿ ತಮ್ಮ ಕಾಲ್ಕೆಳಗೆ ಹೊರಳಾಡಿಸುವ ಕೀಳ್ಮನೋಭಾವ ಇದ್ದೇ ಇದೆ.

ಈ ಕೆಳಕಂಡ ಘಟನೆ ನನ್ನ ಕಹಿ ನೆನಪುಗಳಲ್ಲೊಂದು. ೧೯೧೯ರಲ್ಲಿ ಪೀಟರ್ಸ್‌ಬರ್ಗಿನಲ್ಲಿ "ಹಳ್ಳಿಯ ಬಡವರ" ಸಮ್ಮೇಳನವೊಂದು ಸೇರಿತ್ತು. ರಷ್ಯದ ಉತ್ತರಭಾಗದ ಹಳ್ಳಿಗಳಿಂದ ಲಕ್ಷಾಂತರಮಂದಿ ರೈತರು ಸಮ್ಮೇಳನಕ್ಕೆ ಬಂದಿದ್ದರು. ಅವರಲ್ಲಿ ಕೆಲವು ನೂರು ಮಂದಿಗೆ ರೋಮನಾಫ್ ರಾಜರ ಛಳಿಗಾಲದ ಅರಮನೆಯಲ್ಲಿ ವಸತಿ ಏರ್ಪಡಿಸಿತ್ತು. ಸಮ್ಮೇಳನ ಮುಗಿದು ಅವರು ಹೊರಟು ಹೋದಮೇಲೆ ನೋಡಲು ಅರಮನೆಯ ಸ್ನಾನಮಂದಿರಗಳೆಲ್ಲವನ್ನೂ ಜತಗೆ ಅಸಂಖ್ಯಾತ ಅಮೂಲ್ಯವಾದ ಸ್ಯಾಕ್ಸನ್, ಸೆವರ್ ಮತ್ತು ಪುರಾತನ ಪಾತ್ರೆಗಳನ್ನು ಮಲವಿಸರ್ಜನೆಗಾಗಿ ಉಪಯೋಗಿಸಿ ಹಾಳುಮಾಡಿದ್ದರೆಂಬುದು ತಿಳಿಯಿತು. ಇದು ಅನಿವಾರ್ಯವಾಗಿ ನಡೆದುದಲ್ಲ. ಏಕೆಂದರೆ ಅಲ್ಲಿಯ ಕಕ್ಕಸುಗಳೆಲ್ಲ ಸರಿಯಾಗಿದ್ದುವು. ಸುಂದರ ವಸ್ತುಗಳನ್ನು ಕುಲಗೆಡಿಸಿ ನಾಶ ಮಾಡುವ ಮನೋಭಾವದ ಫಲ ಅದು! ಎರಡು ಕ್ರಾಂತಿಗಳು (೧೯೦೫ ಮತ್ತು ೧೯೧೭) ಮತ್ತು ಒಂದು ಸಂಗ್ರಾಮದಿಂದ ಸೌಂದರ್ಯವನ್ನು ಕುಲಗೆಡಿಸುವ, ವಿಕಾರಗೊಳಿಸಿ ನಗೆಗೀಡು ಮಾಡುವ ಮನೋಭಾವದ ನೂರಾರು ನಿದರ್ಶನಗಳು ನನ್ನ ಗಮನಕ್ಕೆ ಬಂದಿವೆ. ಹಳ್ಳಿಯ ದಲಿತರ ವಿಚಾರವಾಗಿ ಇಷ್ಟು ಕಠಿನವಾಗಿ ಬರೆಯುತ್ತಿರುವುದು ನನಗೆ ಅವರಲ್ಲಿ ಅಷ್ಟಾಗಿ ಭರವಸೆಯಿಲ್ಲದುದರಿಂದ ಎಂದು ಭಾವಿಸಬೇಡಿ. ಈ ಸೌಂದರ್ಯ ಕೆಡಿಸುವ ವಿಕೃತ ಮನಸ್ಸು ನಮ್ಮ ಬುದ್ಧಿಜೀವಿಗಳಲ್ಲಿ ಕೂಡ ಕೆಲವರಲ್ಲಿ ನಾನು ಕಂಡಿದ್ದೇನೆ. ಇದಕ್ಕೆ ನಿದರ್ಶನ—ಕಷ್ಟದಿಂದ ತಲೆತಪ್ಪಿಕೊಂಡು ಓಡಿ ಹೋಗಿರುವವರು ತಾವು ರಷ್ಯದಲ್ಲಿಲ್ಲದ ಮೇಲೆ ರಷ್ಯದಲ್ಲೇನೂ ಇಲ್ಲವೆಂದು ಸಾರುತ್ತಿರುವುದೇ ಸಾಕು.

ಅಪಾರಸೌಂದರ್ಯವನ್ನು ವಿಕಾರಗೊಳಿಸುವುದೂ ಮಹಾಪುರುಷ

ರನ್ನು ತೆಗಳಿ ಅಪ ಪ್ರಚಾರ ನಡೆಸುವುದೂ ಒಂದೇ ಮನೋಭಾವದ ಕಾರ್ಯ. ಯಾವದೇ ಸಾಮಾನ್ಯವಲ್ಲದ ಹೊಸ ವಸ್ತುವಾದರೂ ಸರಿ ಜನರು ತಮ್ಮ ಸಾಂಪ್ರದಾಯಿಕ ಜೀವನ ನಡೆಸುವುದನ್ನು ತಡೆಯುತ್ತದೆ. ಜನರಿಗೇನಾದರೂ ಇಚ್ಛೆಯಿದ್ದಲ್ಲಿ ಅವರು ತಮ್ಮ ಸಾಂಪ್ರದಾಯಿಕ ಜೀವನದ ಅಭ್ಯಾಸದಲ್ಲಿ ಬದಲಾವಣೆಯನ್ನಿಚ್ಛಿಸುವುದು ಬಿಟ್ಟು ಹೊಸ ಹೊಸ ಚಟಗಳಿಗಾಗಿ ಹಾತೊರೆಯುತ್ತಾರೆ. "ನಮಗೆ ಅಭ್ಯಾಸವಾಗಿರುವ ಜೀವನಕ್ರಮದ ನಡುವೆ ಕೈಹಾಕಬೇಡಿ" ಎಂಬುದೇ ಮುಕ್ಕಾಲು ಮೂರು ವೀಸಪಾಲು ಜನರ ಕೂಗಾಟ. ಆದರೆ ವ್ಲಾಡಿಮಿರ್ ಲೆನಿನನಿಗೆ ಆ ಸಾಂಪ್ರದಾಯಿಕ ಜೀವನ ಕ್ರಮವನ್ನು ಹೇಗೆ ಬದಲಾಯಿಸಬಹುದೆಂಬುದು ಉಳಿದವರಿಗಿಂತ ಚೆನ್ನಾಗಿ ತಿಳಿದಿತ್ತೆನ್ನಬಹುದು. ಪ್ರಪಂಚದ ಮಧ್ಯವರ್ಗಕ್ಕೆ ಲೆನಿನಲ್ಲಿರುವ ದ್ವೇಷ ನಗ್ನವಾಗಿ, ಪ್ಲೇಗ್ ಗಡ್ಡೆಯಂತೆ ಹೊರತೋರುತ್ತಿದೆ. ಆದರೆ ಈ ದ್ವೇಷ ಜಗತ್ತಿನ ಜನತೆಯ ನಾಯಕ ಲೆನಿನ್ ಮಧ್ಯವರ್ಗದವರ ಕಣ್ಣಿಗೆ ಎಂತಹ ಪ್ರಚಂಡ ಮತ್ತು ಹಿರಿಮೆಯ ವ್ಯಕ್ತಿಯಾಗಿ ತೋರಿದನೆಂಬುದನ್ನು ಬಿಂಬಿಸುತ್ತದೆ. ಅವನ ದೇಹ ಈಗಿಲ್ಲ. ಆದರೆ ಅವನ ವಾಣಿ ಜಗತ್ತಿನ ಕೂಲಿಗಾರರೆಲ್ಲರಿಗೂ ಮತ್ತೂ ಜೋರಾಗಿ ಕೇಳಿಸಿ ಅವರೆಲ್ಲರನ್ನು ಕ್ರಾಂತಿಗೆ, ಸರ್ವಜನತಾ ಸಮಾನತೆಯ ನೂತನ ಜಗತ್ತಿನ ನಿರ್ಮಾಣಕ್ಕೆ ಉತ್ತೇಜಿಸುತ್ತಿದೆ. ಈಗ ಹೆಚ್ಚುತ್ತಿರುವ ಧೈರ್ಯ, ಸ್ಥೈರ್ಯ ಮತ್ತು ವಿಶ್ವಾಸಗಳಿಂದ ಅಂದು ಅವನ ಶಿಷ್ಯರಾಗಿ ಇಂದು ಅವನ ಜವಾಬ್ದಾರಿ ಹೊತ್ತಿರುವವರು ಆ ಮಹಾ ಕಾರ್ಯವನ್ನು ನಡೆಸುತ್ತಿದಾರೆ.

ವ್ಲಾಡಿಮಿರ್ – ಲೆನಿನ್ ಜಗತ್ತಿನ ಕಾರಣಪುರುಷ, ಇಂದು – ಕಾಲವಶನಾಗಿದ್ದಾನೆ. ಅವನ ಸಾವು ಅವನ ಮಿತ್ರರಿಗೆ, ಗೆಳೆಯರಿಗೆ ಹೃದಯದ್ರಾವಕ ಪೆಟ್ಟು. ಆದರೆ ಸಾವಿನ ಅಂಧಕಾರ ಪ್ರಪಂಚಕ್ಕೆ ಅವನ ಅಮೂಲ್ಯತೆಯ ಬೆಳಕನ್ನು, ಜಗತ್ತಿನ ದಲಿತವರ್ಗದ ನಾಯಕನ ಹಿರಿಮೆಯನ್ನು ಒತ್ತಿ ತೋರಿಸಿಕೊಡುತ್ತಿದೆ.

ಈಗಿರುವುದಕ್ಕಿಂತಲೂ ಹೆಚ್ಚಿಗೆ ಅಸತ್ಯ ಮತ್ತು ಅಪಪ್ರಚಾರದ ಕಾಲಮೋಡ ಅವನ ಮೇಲೆ ಮುಸುಕಿದರೂ ಚಿಂತೆಯಿಲ್ಲ. ಹುಚ್ಚು ಜಗತ್ತಿನ ಮೃತ್ಯುವಿನ ಅಂಧಕಾರದಲ್ಲಿ ಹೊತ್ತಿಸಿ ಅವನು, ಮೇಲೆತ್ತಿದ ಜ್ವಾಲೆಯನ್ನಾರಿಸುವ ಶಕ್ತಿ

ಪ್ರಪಂಚದಲ್ಲಿಯೇ ಇಲ್ಲ.

ಅವನ ಹಾಗೆ ಜಗತ್ತಿನ ನೆನವಿಗೆ ಯೋಗ್ಯನಾದ ವ್ಯಕ್ತಿ ಮತ್ತೆ ಯಾರೂ ಇಲ್ಲ.

ಲೆನಿನ್ ಇಂದು ಕಾಲವಶನಾಗಿದ್ದಾನೆ. ಆದರೆ ಅವನ ತತ್ವದ ದೀವಿಗೆ ಹೊತ್ತವರು ಇನ್ನೂ ಜೀವಿಸಿದ್ದಾರೆ. ಜಗತ್ತಿನ ಮಾನವನ ಚರಿತ್ರೆಯಲ್ಲೆಲ್ಲಾ ಅತಿ ವಿಜಯಶಾಲಿಯಾದ ಮತ್ತು ಹಿರಿದಾದ ಅವನ ಕಾರ್ಯವನ್ನು ಅವರು ವಿಜಯಶಾಲಿಗಳಾಗಿ ಮುನ್ನಡೆಸುತ್ತಿದ್ದಾರೆ.

## ಟಿಪ್ಪಣಿ

**ಲಂಡನ್ ಸಮ್ಮೇಳನ**—ರಷ್ಯನ್ ಸೋಷಿಯಲ್ ಡೆಮೊಕ್ರಾಟಿಕ್ ಲೇಬರ್ ಪಾರ್ಟಿಯು ಲಂಡನ್ನಿನಲ್ಲಿ ೧೯೦೭ರಲ್ಲಿ ನಡೆಸಿದ ಸಮ್ಮೇಳನ.

**ಬಾಬುಷ್ಕ**—ಕ್ಯಾಥರೀನ್ ಬೆಷ್ಕೋವ್ಸ್ಕಾಯಳನ್ನು ಅವಳ ಅನುಯಾಯಿಗಳು ರಷ್ಯಕ್ರಾಂತಿಯ "ಮಾತಾಮಹಿ" ಎನ್ನುತ್ತಿದ್ದರು. ಸಂಗ್ರಾಮ ಸಮಯದಲ್ಲಿ ಈಕೆ ಸಮಾಜ-ದೇಶಪ್ರೇಮಿಯಾಗಿದ್ದಳು. ಕೆರೆನ್ಸ್ಕಿಗೆ ಬೆಂಬಲಕೊಟ್ಟಳು. ಅಕ್ಟೋಬರ್ ಕ್ರಾಂತಿಯಾದ ಮೇಲೆ ಸೋವಿಯಟ್ ಯೂನಿಯನ್ನಿನ ಪ್ರಬಲ ಶತ್ರುವಾದಳು.

**ಪುನರ್ವಿಮರ್ಶಕವಾದಿಗಳು** [Revisionists]—ಸುಧಾರಕ ಬರ್ನ್‌ಸ್ಟೀನನು ಮಾರ್ಕ್ಸ್‌ನ ತತ್ವವನ್ನು ಪುನರ್ವಿಮರ್ಶಿಸಿ ಸುಧಾರಿಸಲು ಯತ್ನಿಸುತ್ತಿದ್ದನು. ಅವನ ಅನುಯಾಯಿಗಳು.

**ಇಸ್ಕ್ರಾ** [Iskra-ಕಿಡಿ] ೧೯೦೦ರಿಂದ ೧೯೦೩ರವರೆಗೆ ಲೆನಿನನ ನೇತೃತ್ವದಲ್ಲಿ ರಷ್ಯನ್ ಸೋಷಿಯಲ್ ಡೆಮೋಕ್ರಾಟಿಕ್ ಪಾರ್ಟಿಯ ಮುಖಪತ್ರವಾತ್ತು. ೧೯೦೩ರ ನವಂಬರಿನಲ್ಲಿ ಲೆನಿನ್ ರಾಜೀನಾಮೆ ಕೊಟ್ಟಮೇಲೆ ೧೯೦೫ರವರೆಗೂ ಮೆನ್ಷೆವಿಕರ ಮುಖಪತ್ರವಾಗಿದ್ದಿತು.

**ಮ್ಯಾಕಿಸ್ಟ್** [Machist]—ಆಸ್ಟ್ರಿಯಾದ ವಿಜ್ಞಾನಿ. ಅರ್ನೆಸ್ಟ್ ಮ್ಯಾಕನ ಯಂತ್ರವಾದದ ಮೇಲೆ ಬೆಳೆಸಿದ ತಾತ್ವಿಕ ಆದರ್ಶವಾದವನ್ನೂ ಮಾರ್ಕ್ಸ್‌ವಾದವನ್ನು ಬೆರೆಸಲು ಯತ್ನಿಸುತ್ತಿದ್ದವರಿಗೆ ಮ್ಯಾಕಿಸ್ಟ್ ಎಂದು ಹೆಸರು ಬಂದಿದೆ.

**ಅಕ್ಟೋಬರಿಸ್ಟ್**—ಬಂಡವಾಳಿಗರ ಮತ್ತು ಜಮೀನ್ದಾರರ ಸಂಗಡದ ಸದಸ್ಯ.

---

# ಟಾಲ್‌ಸ್ಟಾಯಿಯ ನೆನಪು *

**ಅನುವಾದಕ : ತ. ರಾ. ಸುಬ್ಬರಾಯ**

ಟಾಲ್‌ಸ್ಟಾಯನ್ನು ನೋಡಿದಾಗ ನನಗೆ ಒಮ್ಮೊಮ್ಮೆ, ಸದಾ ಕೈಯಲ್ಲಿ ಕೋಲು ಹಿಡಿದು, ವಿಹಾರದಿಂದ ವಿಹಾರಕ್ಕೆ, ಒಬ್ಬ ಸಂತನ ಸಮಾಧಿಯಿಂದ, ಇನ್ನೊಬ್ಬ ಸಂತನ ಸಮಾಧಿಯತ್ತ, ಸಾವಿರ ಸಾವಿರ ಮೈಲಿ ನಿರಂತರವಾಗಿ ಯಾತ್ರೆ ಮಾಡುತ್ತಲೇ ಇರುವ ಅನಿಕೇತನ ಯಾತ್ರಿಕನ ಜ್ಞಾಪಕ ಬರುತ್ತದೆ. ಈ ಜಗತ್ತು ಅವರದಲ್ಲ; ದೇವರರು ಕೂಡಾ. ಪ್ರಾರ್ಥನೆ ಮಾಡುವುದು ಅಭ್ಯಾಸ ಬಲದಿಂದ; ಎದೆಯ ತುಂಬಾ ಅವನ ಬಗ್ಗೆ ಹಗೆತನ. ಭೂಮಿಯ ಒಂದು ಮೂಲೆಯಿಂದ, ಇನ್ನೊಂದು ಮೂಲೆಗೆ ತಮ್ಮನ್ನೇಕೆ ಅಲೆಸಬೇಕು ? ಏತಕ್ಕಾಗಿ ? ಸುತ್ತಲಿನ ಜನ ದಾರಿಯಲ್ಲಿನ ಕಲ್ಲು, ಮುಳ್ಳು, ತಗ್ಗು ದಿಣ್ಣೆ ; ಎಡವಿಬಿದ್ದು ಕಾಲು ಮುರಿದುಕೊಳ್ಳಬಹುದು; ನೋವೂ ಆಗಬಹುದು. ಅವರಿಲ್ಲದೆಯೇ ಇರಲು ಸಾಧ್ಯ ಆದರೂ, ತನಗೂ ಅವರಿಗೂ ಎಷ್ಟು ಭೇದ ವಿದೆ, ಅವರು ತಾವು ತಮ್ಮ ಬಗ್ಗೆ ತಿಳಿದುಕೊಂಡಿರುವುದಕ್ಕಿಂತ ಎಷ್ಟು ಬೇರೆ ಯಾಗಿದ್ದಾರೆ ಎಂತ ತೋರಿಸುವುದು ಎಷ್ಟೋ ನಲ ಸಂತೋಷ ಕೊಡುತ್ತದೆ.

*         *         *         *

ಖಾಯಿಲೆ ಅವರನ್ನು ತುಂಬಾ ಬಳಲಿಸಿಬಿಟ್ಟಿತು. ಉರಿಗೆ ಸಿಕ್ಕಿ ಬಾಡಿದ ಹೂವಿನ ಹಾಗಾಗಿ ಹೋದರು. ಆದರೆ ಎದೆಯೊಳಗೆ ತುಂಬು ಆನಂದ, ಕಾಂತಿ ಶಾಂತಿ ಇದ್ದಂತಿತ್ತು. ಕಣ್ಣು ತುಂಬಾ ಚುರುಕು ; ನೋಟ ಬಲು ಹರಿತ. ಯಾರಾದರೂ ಮಾತಾಡುವುದನ್ನು ಕೇಳುತ್ತಿದ್ದರೆ, ಏನೋ ಮರೆತ ಮಾತನ್ನು ನೆನೆಸಿಕೊಳ್ಳುತ್ತಿರುವಂತೆ. ಯಾವುದೋ ಹೊಸಸುದ್ದಿ ಕೇಳಲಿರುವರಂತೆ ಕೇಳುತ್ತಾರೆ. ಯಾಸ್‌ನ್ಯಾ ಪೊಲ್ಯಾನಾದಲ್ಲಿ ಅವರನ್ನು ನೋಡಿದಾಗ, ಅವರು ಯಾವುದನ್ನು ಕಲಿಯುವ ಅಗತ್ಯವಿಲ್ಲದ ಸರ್ವಜ್ಞನ ಹಾಗೇ ಕಂಡರು ; ಬಗೆಹರಿಯುವ ಪ್ರಶ್ನೆ ಯಾವುದೂ ಅವರ ಬಾಳಿನಲ್ಲಿ ಇದ್ದ ಹಾಗೇ ಇರಲಿಲ್ಲ.

*         *         *         *

---

* Reminiscences of Leo Tolstoy by Gorki.

ಲಿಯೊ ಟಾಲ್‌ಸ್ಟಾಯ್
ಮತ್ತು ಅವರ ಪತ್ನಿ



ಟಾಲ್ಸ್ಟಾಯ್ ಮೀನಾಗಿದ್ದಿದ್ದರೆ ಸದಾ ಸಾಗರದಲ್ಲೇ ಇರುತ್ತಿದ್ದರು ; ಎಂದೆಂದೂ ಕಿರುತೊರೆ, ಹೊಳೆಯನೀರಿಗೆ ಬರುತ್ತಲೇ ಇರಲಿಲ್ಲ. ಸುತ್ತ ಮುತ್ತ ಸಣ್ಣ ಮೀನುಗಳು, ಅವರಾಡುವ ಮಾತಿನಲ್ಲಿ ಆಸಕ್ತಿಯಿಲ್ಲದೆ, ಅವರ ಮೌನಕ್ಕೆ ಹೆದರದೆ ಆಡುತ್ತಿರುತ್ತಿದ್ದವು. ಆದರೂ ಅವರ ಮೌನ ಪ್ರಭಾವ ಶಾಲಿಯಾದದ್ದು ; ಅದು ಪ್ರಪಂಚ ತ್ಯಾಗ ಮಾಡಿದ ಸನ್ಯಾಸಿಯ ಗಂಭೀರ ಮೌನ. ಆದರೂ ಅವರು ಬೇಕಾದಷ್ಟು ಮಾತಾಡುತ್ತಾರೆ, ಎಷ್ಟೋ ವಿಷಯ ಚರ್ಚಿಸುತ್ತಾರೆ ; ಅದು ತಮ್ಮ ಕೆಲಸ ಎಂಬ ಹಾಗೆ. ಅವರ ಮಾತಿಗಿಂತ ಹೆಚ್ಚಾಗಿ ಮೌನ ಎದೆಯಲ್ಲಿ ಮಿಡಿಯುತ್ತದೆ. ಕೆಲವು ಮಾತಿವೆ. ಅವನ್ನು ಯಾರಿಗೂ ಹೇಳುವುದು ಸಾಧ್ಯವೇ ಇಲ್ಲ. ಟಾಲ್ಸ್ಟಾಯಿಗೂ ಹಾಗೇ ; ಹೇಳಲು ಹೆದರುವ ಯೋಚನೆ ಎಷ್ಟೋ ಇರಬೇಕು.

* * * *

ಟಾಲ್ಸ್ಟಾಯರ ಮಾತಿನ ಅವರ್ಣನೀಯ ಅದ್ಭುತ ಸೌಂದರ್ಯ ಅವರ ಮಾತು ಕೇಳಿದರೇ ಗೊತ್ತಾಗಬೇಕು. ಮಾತಿನಲ್ಲಿ ಅಸಂಬದ್ಧತೆ ಹೆಚ್ಚು. ಹೇಳಿದ ಮಾತನ್ನೇ ತಿರುತಿರುಗಿಸಿ ಹೇಳುತ್ತಾರೆ. ಅವೂ ರೈತರು ಮಾತ ನಾಡುವ ರೀತಿಯಲ್ಲಿ ತುಂಬಾ ಸರಳವಾಗಿ. ಅವರ ನುಡಿಯ ಪ್ರಭಾವ ಮೂಡುತ್ತಿದ್ದುದು ಮಾತಿನ ರೀತಿಯಲ್ಲಿಲ್ಲ, ಮುಖದ ಭಾವ ಭಂಗಿಯಲ್ಲಿಲ್ಲ ; ಕಣ್ಣಿನಲ್ಲಿಯ ಬೆಳಕಿನ ಕುಣಿತದಲ್ಲಿ. ಅಷ್ಟು ಭಾವಪೂರ್ಣವಾದ ಕಣ್ಣು ಗಳನ್ನು ನಾನು ಮತ್ತೆಲ್ಲೂ ಕಂಡಿಲ್ಲ. ಇದ್ದ ಆ ಎರಡು ಕಣ್ಣಿನಲ್ಲಿ ಕೋಟಿ ಕಣ್ಣಿತ್ತು.

* * * *

ಅವರ ಕೈ ಅದ್ಭುತವಾದುದು. ಅಂದರೆ ಸುಂದರವಾದುದೆಂದಲ್ಲ ; ನರ ನರ ಗಂಟುಗಟ್ಟಿದ ಕೈ ಅವು. ಆದರೆ ಅವುಗಳಲ್ಲಿ ಎಂಥ ಸೃಷ್ಟಿ ಶಕ್ತಿಯಿದೆ. ಬಹುಶಃ ಲಿಯೊನಾರ್ಡೋ ಡ ವಿನ್ಸಿಗೆ ಇಂಥವೇ ಕೈ ಇತ್ತೋ ಏನೋ. ಇಂಥ ಕೈ ಇದ್ದರೆ ಏನು ಬೇಕಾದರೂ ಮಾಡಬಹುದು. ಒಮ್ಮೊಮ್ಮೆ ಮಾತನಾಡು ವಾಗ ಟಾಲ್ಸ್ಟಾಯ್ ಬೆರಳಾಡಿಸಿ, ಮತ್ತೆ ಮುಷ್ಟಿ ಮುಚ್ಚುತ್ತಾರೆ. ಬೆರಳು ಆಡಿದರೆ ಮಿಂಚು ಹೊಳೆದ ಹಾಗೆ.

* * * *

ಆ ಕಣ್ಣು, ಕೈ ಎರಡೂ ನನಗೆ ಚೆನ್ನಾಗಿ ನೆನಪಿವೆ. ಆ ಕಣ್ಣು ಎದೆಯನ್ನು ತೂರಿ ಕಾಣುತ್ತಿದ್ದವು. ಅದರ ಇದಿರು ಏನನ್ನೂ ಮುಚ್ಚುಮರೆ ಮಾಡುವ ಹಾಗೇ ಇಲ್ಲ. ಅವರ ಕೈ ಬೆರಳುಗಳೂ ಅಷ್ಟೆ. ಗಾಳಿಯಲ್ಲಿ ಏನನ್ನೋ ಸದಾ ಸೃಷ್ಟಿಸುತ್ತಲೇ ಇರುತ್ತಿದ್ದವು. ಅವರ ಮಾತು, ಹಾಸ್ಯ, ಬಳಕೆಯ ಶಬ್ದಗಳು ಊಹೆಗೆ ಸಿಲುಕದ ಸ್ವರಮಾಧುರ್ಯ-ಎಲ್ಲವನ್ನೂ ಆ ಬೆರಳುಗಳು ಗಾಳಿಯಲ್ಲಿ ಸೃಷ್ಟಿಸುತ್ತಿದ್ದವು.

*　　*　　*　　*

ಒಮ್ಮೆ ಯುಪೋರ್‌ನ ಜಮಾನಿನ ಹಿಂದೆ ಕಡಲ ತಡಿಯಲ್ಲಿ ನಿಧಾನವಾಗಿ ಹೆಜ್ಜೆ ಹಾಕುತ್ತಿದ್ದೆ. ತೀರದ ಕಲ್ಲುಗಳ ಮೇಲೆ ಟಾಲ್‌ಸ್ಟಾಯ್ ಕೂತಿದ್ದರು, ಕುಳ್ಳು ವ್ಯಕ್ತಿ ; ಮುದುರಿ ಬಣ್ಣಗೆಟ್ಟ ಸೂಟು, ಅಂಥದೇ ಒಂದು ಹ್ಯಾಟು ; ತಲೆಯಮೇಲೆ ಕೈಯಿಟ್ಟುಕೊಂಡು ಕೂತಿದ್ದರು. ಗಡ್ಡದ ಬೆಳ್ಳಿಗೂದಲು ಕೈ ಬೆರಳಿನ ಸಂದಿನಲ್ಲಿ ಗಾಳಿಯಲ್ಲಿ ಕುಣಿದಾಡುತ್ತಿದ್ದವು. ಕಣ್ಣು ಕಡಲಿನಲ್ಲಿ ಲೀನವಾಗಿತ್ತು. ಸಾಗರ ನೀಲಿಬೆರೆತ ಹಸುರುಬಣ್ಣದ ಪುಟ್ಟ ಅಲೆಗಳು ಇವರ ಕಾಲನ್ನು ಮುತ್ತಿಡುತ್ತಿದ್ದವು. ಅವನ್ನು ನೋಡಿದರೆ, ಅವು ಅಜ್ಜನಿಗೆ ಗುಟ್ಟಾಗಿ ಏನನ್ನೋ ಹೇಳುತ್ತಿದ್ದ ಪುಟ್ಟ ಮೊಮ್ಮಕ್ಕಳ ಹಾಗೆ ಕಾಣುತ್ತಿದ್ದವು. ಬಿಸಿಲು ಜೋರಾಗಿತ್ತು ; ಮೋಡಗಳೂ ಹೆಚ್ಚಾಗಿದ್ದವು. ಮೋಡದ ನೆರಳು ನೆಲದಮೇಲೆ ಓಡುತ್ತಿದ್ದವು. ಇದರ ನೆರಳು ಬೆಳಕಿನಾಟದಲ್ಲಿ ಟಾಲ್‌ಸ್ಟಾಯ್ ಒಮ್ಮೆ ಕಪ್ಪಾಗಿ, ಒಮ್ಮೆ ಹೊಳಪಾಗಿ ಕಾಣಿಸುತ್ತಿದ್ದರು. ಅವರೂ ಕಲ್ಲಿನಲ್ಲಿ ಕಲ್ಲಾಗಿ ಕಂಡರು. ಜಗತ್ತಿನ ಆದಿ, ಅಂತ್ಯ, ನೀರಿನ ಗುರಿ, ಶಿಲೆಯ ಕಲೆ, ಎಲ್ಲವನ್ನೂ ಬಲ್ಲ ಪುರಾತನ ಶಿಲೆಯೊಂದು ಜೀವತಾಳಿ ಬಂದಂತೆ ಕಂಡರು. ನನ್ನ ಕಣ್ಣಿಗೆ ಇಡೀ ಜಗತ್ತೇ ಅವರಿಗೆ ಕರತಲಾಮಲಕವಾದ ಹಾಗಿತ್ತು. ಕಡಲೂ ಅವರ ಅನಂತ ಆತ್ಮದ ಒಂದು ಅಲ್ಪಭಾಗವಾಗಿ ಕಂಡಿತು. ಅವರ ಸುತ್ತಲದೆಲ್ಲಾ ಅವರ ಬೇರೆ ಬೇರೆ ಭಾಗಗಳಾಗಿ ಅವರಿಂದಲೇ ಮೂಡಿಬಂದಂತೆ ತೋರಿತು. ಅಲುಗಾಡದೆ ಕುಳಿತ ಆ ವೃದ್ಧ ಮೂರ್ತಿಯಲ್ಲಿ ಏನೋ ಒಂದು ಮೋಡಿಯಿರುವಂತೆ, ಏನೋ ಒಂದು ಬೆಳಕಿನ ಕಿರಣ ಅವರ ಎದೆಯಿಂದ ಮೂಡಿ ಜಗತ್ತನ್ನೆಲ್ಲಾ ಬೆಳಗುತ್ತಿದ್ದಂತೆ, ಆ ಬೆಳಕು ಕಡಲಿನ ಅಲೆಗಳನ್ನು ಹತ್ತಿರ ಸೆಳೆದು ದೂರ ತಳ್ಳುತ್ತಿದ್ದಂತೆ, ಮೋಡ,

ನೆರಳುಗಳನ್ನು ಅದೇ ಆಳುತ್ತಿರುವಂತೆ ತೋರಿತು. ಆ ಒಂದು ಗಳಿಗೆಯಲ್ಲಿ ನನಗೆ, ಇನ್ನೇನು ಅವರು ಮೇಲೆದ್ದು ಕೈಬೀಸಿದ ಕೂಡಲೇ ಸಮುದ್ರ ಹೆಪ್ಪುಗಟ್ಟಿ ಹೊಳೆಯುವ ಕಲ್ಲಾಗಬಹುದು, ಕಲ್ಲಿಗೆ ಜೀವ ಬಂದು ಮಾತಾಡಬಹುದು. ಸುತ್ತಲಿರುವ ನಿರ್ಜೀವ ನಿಶ್ಚಲ ವಸ್ತುಗಳೆಲ್ಲಾ ಜೀವದಾಳಿ, ಮಾತನಾಡುವ ಶಕ್ತಿಪಡೆದು ಅವರೊಂದಿಗೆ ಮಾತನಾಡಲು ಆರಂಭಿಸಬಹುದು ಎನಿಸಿತು. ಆಗಿನ ನನ್ನ ಭಾವ ಊಹಾತೀತವಾದದ್ದು. ಅದರಲ್ಲಿ ಭಯ, ಆನಂದ ಎರಡೂ ಬೆರೆತಿತ್ತು. ಕಡೆಗೆ ಒಂದೇ ಭಾವ ಎದೆಯಲ್ಲಿ ಸ್ಥಿರವಾಯಿತು: "ಇವರು ಈ ಭೂಮಿಯ ಮೇಲಿರುವವರೆಗೂ ನಾನೆಂದೂ ಅನಾಥನಾಗಲಾರೆ."

* * * *

ಇಬ್ಬರೂ ಯೂಸೋವ್ರೋವ್ ಉದ್ಯಾನದಲ್ಲಿ ಅಡ್ಡಾಡುತ್ತಿದ್ದೆವು. ಟಾಲ್ಸ್ಟಾಯ್ ಮಾಸ್ಕೋ ಶ್ರೀಮಂತರ ರೀತಿನೀತಿ, ಸಂಪ್ರದಾಯಗಳ ಬಗ್ಗೆ ಸೊಗಸಾದ ಭಾಷಣವನ್ನೇ ಮಾಡಿದರು. ಪಕ್ಕದ ಹೂವಿನ ಮಡಿಯೊಂದರಲ್ಲಿ ರೈತ ಹೆಣ್ಣುಮಗಳೊಬ್ಬಳು ಪಾತಿ ಸರಿಮಾಡುತ್ತಿದ್ದಳು. ಅವಳ ದಂತದಲ್ಲಿ ಕಡೆದಂಥ ಕಾಲು, ಹತ್ತುಪೌಂಡು ತೂಗುವ, ತೂಗಾಡುತ್ತಿದ್ದ ಎದೆ ನೆಟ್ಟಗೆ ಬಾಗಿದ ಮೈ - ಎಲ್ಲವನ್ನು ಕಣ್ಣಿಟ್ಟು ನೋಡಿದರು.

"ನೋಡು ಆ ಶ್ರೀಮಂತಿಕೆ, ವೈಭವ ಎಲ್ಲಾ ಉಳಿದಿರುವುದು ಈ ಬಡವರ ದುಡಿಮೆಯಿಂದ. ಇವರ ದುಡಿಮೆ, ಇವರು ತೆರುವ ಕಂದಾಯ ಅಷ್ಟೇ ಅಲ್ಲ ಅಕ್ಷರಶಃ ಇವರ ರಕ್ತದಿಂದ ಉಳಿದಿವೆ. ಶ್ರೀಮಂತರು ಆಗಾಗ ಈ ಗಟ್ಟಿಮೈ ಹೆಂಗಸರೊಂದಿಗೆ ಮೈ ಬೆರಸದೆ ಇದ್ದಿದ್ದರೆ, ಅವರ ಕುಲ ನಾಶವಾಗಿ ಎಷ್ಟೋ ದಿನವಾಗುತ್ತಿತ್ತು. ಎಷ್ಟೋ ಜನ ಕಳವಿನಲ್ಲಿ ಇವರಲ್ಲಿ ತಮ್ಮ ಕಾಮತೃಪ್ತಿ ಮಾಡಿಕೊಳ್ಳುತ್ತಾರೆ; ಮತ್ತೆ ಕೆಲವರು ರೈತ ಹುಡುಗಿಯರನ್ನು ಮದುವೆ ಮಾಡಿಕೊಳ್ಳುತ್ತಾರೆ. ಹೀಗೆ ಮಾಡಿ ಇವರ ಕಾಮದ ಕಾವಿನಲ್ಲಿ, ಹೆಪ್ಪುಗಟ್ಟಿದ ತಮ್ಮ ರಕ್ತ ಸ್ವಲ್ಪ ನೀರಾಗಿಸಿಕೊಳ್ಳುತ್ತಾರೆ; ದುಡಿದು ನೀರಾದ ಇವರ ರಕ್ತದಲ್ಲಿ ಸ್ವಲ್ಪ ಬಣ್ಣ ತುಂಬುತ್ತದೆ. ಏನೇ ಅನ್ನು, ಹೇಗೂ ಶ್ರೀಮಂತ ಸಂತಾನದ ಶಕ್ತಿ ಬಡವರ ರಕ್ತದ ಬೆರಕೆಯಿಂದ."

* * * *

ಟಾಲ್ಸ್ಟಾಯ್‌ರ ಮಾತಿನಲ್ಲಿ ಹೆಣ್ಣಿನ ಸುದ್ದಿ ಬಹಳ; ಫ್ರೆಂಚ್ ಕತೆ

ಗಾರರಿದ್ದ ಹಾಗೆ. ಆದರೆ ಮಾತಿನಲ್ಲಿ ದ್ರಾವಿಡ ಪ್ರಾಣಾಯಾಮವಿಲ್ಲ. ನೇರವಾಗಿ, ಒರಟಾಗಿ; ರೈತರ ಹಾಗೆ. ಮೊದಮೊದಲು ಇವರ ಒರಟು ಮಾತು ನನಗೆ ಸೇರುತ್ತಿರಲಿಲ್ಲ.

ಈ ದಿನ ಆಮುಂಡ್ ಪಾರ್ಕಿನಲ್ಲಿ ಇದ್ದಕ್ಕಿದ್ದ ಹಾಗೇ ಚೆಕಾವ್‌ನನ್ನು ಕೇಳಿದರು:

'ಪ್ರಾಯದವನಾಗಿದ್ದಾಗ, ನೀನು ತುಂಬಾ ಸೂಳೆಗಾರಿಕೆ ಮಾಡಿದೆ. ಅಲ್ಲವೇ ?'

ಈ ಪ್ರಶ್ನೆಗೆ ಚೆಕಾವ್ ಏನು ಹೇಳಬೇಕು? ಮುಖ ಕೆಂಪಾಗಿ ಹೋಯಿತು. ಗಡ್ಡ ಕೆರೆದುಕೊಳ್ಳುತ್ತ ಕೇಳಿಯೂ ಕೇಳಿಸದ ಹಾಗೆ ಏನೋ ಹೇಳಿದ. ಸಮುದ್ರದ ಕಡೆ ನೋಡುತ್ತಾ ಟಾಲ್‌ಸ್ಟಾಯ್ ಹೇಳಿದರು:

'ನಾನು ಏನೂ ಕಡಮೆ ಮಾಡಲಿಲ್ಲ ......'

ಮಾತಿನ ಕೊನೆಯಲ್ಲಿ ರೈತರು ಬಳಸುವ ಘಾಟಾದ ಒಂದು ಶಬ್ದ ಉಪಯೋಗಿಸಿದರು. ಅವರ ಮಾತಿನಲ್ಲಿ ಪಶ್ಚಾತ್ತಾಪದ ಸೆಳಕಿತ್ತು. ಆ ಪೋಲಿ ಮಾತನ್ನೂ, ಅದಕ್ಕಿಂತ ಒಳ್ಳೆ ಮಾತು ಬೇರೆ ಇಲ್ಲವೇ ಇಲ್ಲವೇನೋ ಎಂಬಷ್ಟು ಸರಳವಾಗಿ, ಸಹಜವಾಗಿ ಹೇಳಿದರು. ಅವರ ಬಾಯಿಂದ ಬರುವ ಮಾತೆಲ್ಲಾ ಅಷ್ಟೆ; ಎಷ್ಟು ಹೊಲಸಾದರೂ, ಆ ಹೊಲಸೇನೂ ಕಾಣುವುದಿಲ್ಲ. ಮೊಟ್ಟ ಮೊದಲ ಬಾರಿಗೆ ನಾನು ನನ್ನ 'ಇಪ್ಪತ್ತಾರು ಜನ ಗಂಡಸರು-ಒಬ್ಬ ಹುಡುಗಿ' ಕಥೆ ಓದಿದಾಗ, ಅವರು ಹೇಳಿದ ಮಾತು ಶುದ್ಧ ಅಸಭ್ಯ ಎನಬೇಕು. ನನಗೆ ಬೇಸರವಾಯಿತು, ಸಿಟ್ಟು ಬಂತು. ಇಂಥ ಮಾತಲ್ಲದೆ, ಬೇರೆ ಭಾಷೆ ನನಗೆ ಅರ್ಥವಾಗುವುದಿಲ್ಲವೇನೋ ಎಂಬ ಹಾಗೆ ಮಾತಾಡಿದರು. ಈಗ ನನಗೆ ಅರ್ಥವಾಗಿದೆ, ಸಿಟ್ಟಾದದ್ದು ತಪ್ಪು ಎಂತ.

* * * *

ಪಾರ್ಕಿನಲ್ಲಿ ಸೈಪ್ರೆಸ್ ಮರಗಳ ನೆರಳಿನಲ್ಲಿ ಕೂತಿದ್ದರು ಟಾಲ್‌ಸ್ಟಾಯ್. ನೋಡಲು ಹಂಚಿಕಡ್ಡಿ ಹಾಗೆ ಕಾಣುತ್ತಿದ್ದರು. ತುಂಬಾ ಬೇಸರವಾಗಿತ್ತು ಎಂಬ ಹಾಗಿತ್ತು. ಪಕ್ಕದ ಎಲೆಯ ಮರೆಯಲ್ಲಿ ಸಿಳ್ಳು ಹಾಕುತ್ತಿದ್ದ ಚಾಫಿಂಚ್ ಹಕ್ಕಿಯ ಜತೆಗೆ ತಾವೂ ಶಿಳ್ಳು ಹಾಕುತ್ತಿದ್ದರು. ಎಳೆಯ ಮಗು

ವಿನ ಹಾಗೆ ತುಟಿ ಬಿಗಿದು, ಈ ಹಕ್ಕಿಯತ್ತಲೇ ನೋಡುತ್ತಾ ಅದರ ಹಾಗೇ ಶಿಳ್ಳುಹಾಕಲು ಯತ್ನಿಸುತ್ತಿದ್ದರು. ಆ ಹಕ್ಕಿ ಎಂಥದೋ ಅವರಿಗೆ ಗೊತ್ತಿರಲಿಲ್ಲ.

'ಯಾವ ಹಕ್ಕಿ ಇದು? ತಂಬಾ ಸಿಟ್ಟಾಗಿರೋ ಹಾಗಿದೆ. ಅಬ್ಬ! ಎಷ್ಟು ಸಿಟ್ಟು' ಎಂದರು.

ನಾನು ಅದು ಚಾಫಿಂಚ್. ತುಂಬಾ ಅಸೂಯೆಯ ಹಕ್ಕಿ ಎಂತ ಹೇಳಿದೆ.

'ಜೀವನದುದ್ದಕ್ಕೂ ಒಂದೇ ಹಾಡು. ಆದರೂ ಹೊಟ್ಟೆಕಿಚ್ಚು. ಗಂಡಿಗೆ ಮಾಡಲು ಸಾವಿರ ಕೆಲಸವಿದ್ದರೂ, ಅವನಿಗೆ ತುಂಬಾ ಅಸೂಯೆ ಎನ್ನುತ್ತಾರೆ. ನ್ಯಾಯವೇ?' ಏನೋ ಯಾವುದೋ ಕನಸಿನಲ್ಲಿ ತಮ್ಮನ್ನು ತಾವೇ ಪ್ರಶ್ನಿಸಿಕೊಳ್ಳುವ ಹಾಗೆ ಕೇಳಿದರು. 'ಎಷ್ಟೋ ಸಲ ಗಂಡಸು, ಹೆಂಗಸಿಗೆ ಅವಳಿಗೆ ಹೇಳಬಾರದಕ್ಕಿಂತ ಹೆಚ್ಚಾಗಿ ತನ್ನ ವಿಷಯ ಹೇಳುತ್ತಾನೆ. ಹೇಳಿ ಮರೆತುಬಿಡುತ್ತಾನೆ. ಆದರೆ ಹೆಣ್ಣು ಹಾಗಲ್ಲ; ಎಂದೂ ಮರೆಯುವುದಿಲ್ಲ. ಕೀಳಾಗಿ ಕಾಣಲ್ಪಟ್ಟಾಗ, ಆತ್ಮ ಅಧೋಗತಿಗಿಳಿದಾಗ ಅಸೂಯೆ ಹುಟ್ಟುತ್ತದೋ ಏನೋ. ಏನಾದರೂ, ಗಂಡೇ ಮೈ ಒಲಿಸಿಕೊಂಡ ಹೆಣ್ಣಿಗಿಂತ, ಆತ್ಮವನ್ನು ವಶಮಾಡಿಕೊಂಡ ಹೆಣ್ಣು ತುಂಬಾ ಅಪಾಯದ ಪ್ರಾಣಿ.'

ಅವರೇ 'ಕ್ರೂಟ್ಸರ್ ಸೊನಾಟಾ' ಕಥೆಯಲ್ಲಿ ಬೇರೆ ರೀತಿ ಹೇಳಿದ್ದನ್ನು ನಾನು ಎತ್ತಿ ಹೇಳಿದೆ. ಇದ್ದಕ್ಕಿದ್ದ ಹಾಗೇ ಹೊರವಾಗಿ ಬೆಳೆವ ಗಡ್ಡದಲ್ಲಿ ನಗೆ ಮಿಂಚು ಮಿಂಚಿತು. ಹೇಳಿದರು:

'ನಾನೇನೂ ಚಾಫಿಂಚ್ ಅಲ್ಲ....'

ಸಾಯಂಕಾಲ ತೋಟದಲ್ಲಿ ತಿರುಗಾಡುತ್ತಿದ್ದಾಗ ಟಾಲ್‌ಸ್ಟಾಯ್ ಇದ್ದಕ್ಕಿದ್ದ ಹಾಗೇ ಹೇಳಿದರು: 'ಗಂಡಸು ಭೂಕಂಪ, ಬಿರುಗಾಳಿ, ರೋಗರುಜಿನ, ಆತ್ಮದ ಗೋಳು ಯಾವುದನ್ನಾದರೂ ಸಹಿಸಿ, ಬದುಕಿದೆ ಎಂದು ನಿಟ್ಟುಸಿರು ಬಿಡುತ್ತಾನೆ. ಏನೋ ದೊಡ್ಡ ದುರಂತ ಆಗುವುದು ತಪ್ಪಿದ ಹಾಗೆ. ಆದರೆ ಅದಕ್ಕಿಂತ ಹೆಚ್ಚಾಗಿ ಹಿಂಸೆ ಕೊಡುವ ದುರಂತ ಆಗುತ್ತಲೇ ಇರುತ್ತದೆ. ಯಾವುದು ಗೊತ್ತೇನು ಈ ಕಾಣದ ಶನಿ—ಶಯ್ಯಾಗೃಹದ ದುರಂತ.'

ಈ ಮಾತು ಹೇಳಿ ದೊಡ್ಡ ಗೆಲವು ಸಾಧಿಸಿದ ಹಾಗೆ ನಕ್ಕರು ಟಾಲ್ಸ್‌ಟಾಯ್. ಒಂದೊಂದು ಸಲ ಅವರು ಅಸಾಧ್ಯವನ್ನು ಸಾಧಿಸಿದವರ ಹಾಗೆ ಕೊರೆದು ತಿನ್ನುತ್ತಿದ್ದ ನೋವು ಇದ್ದಕ್ಕಿದ್ದ ಹಾಗೇ ನಿಂತು ಹೋದವರ ಹಾಗೆ ಹಗುರವಾದ ನಗೆ ನಗುತ್ತಾರೆ. ಒಂದೊಂದು ಯೋಚನೆಯೂ ಅವರ ಆತ್ಮವನ್ನು ಜಿಗುಣೆಯ ಹಾಗೆ ಕಚ್ಚಿಕೊಳ್ಳುತ್ತದೆ. ಅವರು ಅದನ್ನು ಕೂಡಲೇ ಕಿತ್ತು ಬಿಸುಡುತ್ತಾರೆ. ಇಲ್ಲವಾದರೆ ಅದೇ ಬೇಕಾದಷ್ಟು ರಕ್ತ ಕುಡಿದು ತಾನೇ ಉದುರಿ ಹೋಗುವವರೆಗೂ ಸುಮ್ಮನಿದ್ದು ಬಿಡುತ್ತಾರೆ.

*　*　*　*

ಟಾಲ್ಸ್‌ಟಾಯ್ ದೇವರು, ಹೆಂಗಸರು, ರೈತರಬಗ್ಗೆ ವಿಶೇಷವಾಗಿ ಮಾತಾಡುತ್ತಾರೆ. ಸಾಹಿತ್ಯದ ಬಗ್ಗೆ ಹೆಚ್ಚು ಮಾತೇ ಆಡುವುದಿಲ್ಲ, ಸಾಹಿತ್ಯವೆಂದರೆ ತಮಗೆ ಬೇಡ ಎನ್ನುವ ಹಾಗೆ. ಹೆಣ್ಣೆಂದರೆ ಅವರಿಗೆ ತುಂಬಾ ಹಗೆತನ ಎಂತಲೇ ನನ್ನ ಅಭಿಪ್ರಾಯ. ಹೆಣ್ಣಿಗೆ ಶಿಕ್ಷೆ ಕೊಡುವುದೆಂದರೆ ಅವರಿಗೆ ಎಷ್ಟೋ ಪ್ರೀತಿ. ಇವರ ಸ್ತ್ರೀದ್ವೇಷಕ್ಕೆ ಎರಡೇ ಕಾರಣವಿರಬೇಕು: ಒಂದು ಅಪೂರ್ಣ ಕಾಮ, ಇನ್ನೊಂದು ವ್ಯೆಯಕ್ತಿಕ ಕೀಳುಕಾಮದ ಬಗ್ಗೆ ಆತ್ಮಕ್ಕಿರುವ ಅಸಹ್ಯ. ಕಾರಣ ಯಾವುದೇ ಇರಲಿ ಬಿಡಲಿ, ಅಂತೂ ಟಾಲ್ಸ್‌ಟಾಯಿಗೆ, ಹೆಣ್ಣಿನ ಬಗ್ಗೆ ಇರುವುದು ಹಗೆತನ; 'ಅನ್ನಾಕೆರಿನಿನಾ' ದಲ್ಲಿ ಕಂಡು ಬರುವಂಥ ಕುಳಿರು ಗಟ್ಟಿಸುವ ದ್ವೇಷ, ತಿರಸ್ಕಾರ.

*　*　*　*

'ವ್ಯೆಯಮುಟ್ಟಿಗೆ ಹೇಳಬೇಕೆಂದರೆ ಗಂಡಿಗಿಂತ ಹೆಣ್ಣು ವಿಶ್ವಾಸಪಾತ್ರಳು. ಆದರೆ ಅವಳ ಮನಸ್ಸನ್ನು ಮಾತ್ರ ನಂಬಲು ಸಾಧ್ಯವಿಲ್ಲ; ಸದಾ ಸುಳ್ಳು. ಅಷ್ಟೆ ಅಲ್ಲ. ಅವಳು ಸುಳ್ಳಾಡುವಾಗ, ತಾನಾಡುವ ಮಾತಿನಲ್ಲಿ ಅವಳಿಗೇ ನಂಬಿಕೆ ಇರುವುದಿಲ್ಲ. ಆದರೆ ಗಂಡಸು ಹಾಗಲ್ಲ: ಸುಳ್ಳು ಹೇಳುತ್ತಾನೆ; ಅದೇ ನಿಜ ಎಂತ ನಂಬುತ್ತಾನೆ.'

ಇದು ಟಾಲ್ಸ್‌ಟಾಯ್ ಹೆಣ್ಣಿನ ಬಗ್ಗೆ ಆಡಿದ ಒಂದು ಮಾತು. ಒಂದು ಸಲ ಸ್ಯೂಲರ್, ಚೆಕಾವ್, ಇನ್ನೂ ಕೆಲವರು-ಎಲ್ಲಾ ಪಾರ್ಕಿನಲ್ಲಿ ಕೂತು ಹೆಂಗಸರ ವಿಚಾರ ಮಾತಾಡುತ್ತಿದ್ದರು. ಟಾಲ್ಸ್‌ಟಾಯ್ ಸ್ವಲ್ಪ ಹೊತ್ತು ಅವರ ಮಾತು ಕೇಳುತ್ತಿದ್ದು ಆಮೇಲೆ ಹೇಳಿದರು:

'ಹೆಣ್ಣಿನ ವಿಚಾರ ಸತ್ಯವನ್ನು ನಾ ಯಾವಾಗ ಹೇಳುತ್ತೇನೆ ಗೊತ್ತೊ? ಇನ್ನೇನು ಗೋರಿಯಲ್ಲಿ ಒಂದು ಕಾಲಿಟ್ಟಿರಬೇಕು ; ಆಗ. ಹೇಳಿದವನೇ ಶವ ಪೆಟ್ಟಿಗೆಯ ಮುಚ್ಚಳ ಮುಚ್ಚಿಕೊಂಡು ಬಿಟ್ಟು ಆಗ 'ಬೇಕಾದ್ದು ಮಾಡು ಎಂದು ಬಿಡುತ್ತೇನೆ' ಎಂದರು. ಮಾತಾಡುವಾಗ ಅವರನ್ನು ನೋಡಿದರೆ ಹೆದ ರಿಕೆಯಾಗುತ್ತಿತ್ತು. ಸ್ವಲ್ಪ ಹೊತ್ತು ಎಲ್ಲರೂ ಸುಮ್ಮನೆ ಕೂತಿದ್ದೆವು.

* * * *

ಒಂದೊಂದು ಸಲ ಅವರ ಮಾತು ಕೇಳಿದರೆ ಅವರಿಗೆ ತುಂಬಾ ಠೇಂಕಾರ, ಇಲ್ಲದ ಜಂಭ ಎನಿಸುತ್ತದೆ. ಪ್ರಪಂಚವನ್ನು ಎಚ್ಚರಿಸುವ ಶಂಖಧ್ವನಿಯಾದ ಜ್ಞಾನಿಗೆ ಇಷ್ಟು ಮಮಕಾರ, ಅಹಂಬ್ರಂಹತ್ವ ಇರಬಾರದು. ನಿನ್ನೆ ಮಾತಾ ಡುತ್ತಾ ಆಡುತ್ತಾ ಹೇಳಿದರು :

'ನಿನಗಿಂತ ನಾನು ಒಳ್ಳೆ ಧರ್ಮಿಷ್ಟ ಗೊತ್ತೆ ? ನನ್ನ ಬುದ್ಧಿಯೂ ಅಷ್ಟೆ'

ಅಬ್ಬಾ ! ಎಷ್ಟು ಜಂಭ. ಇರಬಾರದು. ಈ ಮನುಷ್ಯನಿಗೆ ಇಷ್ಟು ಅಹಂಕಾರ, ಆತ್ಮಪ್ರಶಂಸಾಬುದ್ಧಿ ಇರಬಾರದು !

* * * *

ಇನ್ನೂ ಒಂದೊಂದು ಸಲ ಶುದ್ಧ ಹಟಮಾರಿಯಾದ ತುಂಟ ಮಗುವಿನ ಹಾಗಾಡುತ್ತಾರೆ ಟಾಲ್ಸ್ಟಾಯ್. ಇರುಕಿಗೆ ಸಿಕ್ಕಿಸುವ ಪ್ರಶ್ನೆಗಳನ್ನೆಲ್ಲಾ ಕೇಳುತ್ತಾರೆ :

'ನನ್ನ ವಿಚಾರದಲ್ಲಿ ನಿನ್ನ ಅಭಿಪ್ರಾಯವೇನು ?'

'ನನ್ನ ಮಗ ಜಾಣನೇ ?'

'ನನ್ನ ಹೆಂಡತಿ ಹೇಗೆ?'

'ನನ್ನ ಮೇಲೆ ನಿನಗೆ ಪ್ರೀತಿ ಇದೆಯೇ ?'

ಯಾವಾಗಲೂ ಏನೋ ಪ್ರಯೋಗ ಮಾಡುತ್ತಿದ್ದ ಹಾಗೆ, ಏನನ್ನೋ ಪರೀಕ್ಷೆ ಮಾಡುತ್ತಿದ್ದ ಹಾಗೇ, ಯಾರ ಮೇಲೋ ಯುದ್ಧಮಾಡಲು ಹೊರ ಟವರ ಹಾಗೆ ಇರುತ್ತಾರೆ ; ನನಗಂತೂ ಇದು ಸರಿ ಬೀಳುವುದಿಲ್ಲ. ಅವರು ದೆವ್ವ ; ನಾನು ಹಸುಳೆ. ನನ್ನನ್ನಿಷ್ಟು ಗೋಳಾಡಿಸಬಾರದು ಅವರು. ನನ್ನ ಪಾಡಿಗೆ ನನ್ನನ್ನೇಕೆ ಬಿಡಬಾರದು ?

* * * *

ಟಾಲ್ಸ್‌ಟಾಯ್ ಕೆಲವು ಸಲ ಬೇರೆ ಯಾವುದೋ ದೂರದ ಊರಿನಿಂದ, ಬೇರೆ ಭಾಷೆಯಾಡುವ ದೇಶದಿಂದ ಬಂದವರ ಹಾಗೆ ಕಾಣುತ್ತಾರೆ. ಮೂಲೆಯಲ್ಲಿ ತುಂಬಾ ದಣಿದು ಬೇಸರವಾದವರ ಹಾಗೆ ಕೂತು, ಹೊಸಬರ ಹಾಗೆ ಎಲ್ಲವನ್ನೂ ಆಸಕ್ತಿಯಿಂದ ನೋಡುತ್ತಾರೆ ; ಮೂಕನಹಾಗೆ ಒಂದೊಂದು ಮಾತನ್ನೂ 'ಆ' ಯೆಂದು ಬಾಯಿ ಬಿಟ್ಟುಕೊಂಡು ಕೇಳುತ್ತಾರೆ.

ನಿನ್ನೆ ದಿನ ಊಟಕ್ಕೆ ಮೊದಲು ಹಾಗೇ ಎಲ್ಲೋ, ಏನೋ ಯೋಚನೆ ಮಾಡುತ್ತಾ ದಿವಾನಖಾನೆಗೆ ಬಂದು ಸೋಫಾದ ಮೇಲೆ ಒಂದು ಗಳಿಗೆ ಸುಮ್ಮನೆ ಕೂತು, ಕೈಯುಜ್ಜುತ್ತಾ, ಮುಖ ಮುದುಡಿಸಿಕೊಂಡು, ಇದ್ದಕ್ಕಿದ್ದ ಹಾಗೇ ಹೇಳಿದರು :

'ಅಷ್ಟೇ ಅಲ್ಲ....ಊಹು....ಅಷ್ಟೇ ಅಲ್ಲ.' ಯಾರೋ ಮಂಕು ದಿಣ್ಣೆ ಕೇಳಿಯೇ ಬಿಟ್ಟ. 'ಏನು ಹೇಳಿದಿರಿ.'

ಒಂದು ಗಳಿಗೆ ಹಾಗೇ ನಟ್ಟ ದಿಟ್ಟಿಯಲ್ಲಿ ಬಿಸಿಲು ಮಾಳಿಗೆಯ ಮೇಲೆ ಕೂತ ನಮ್ಮ ಕಡೆ ನೋಡಿ ಕೇಳಿದರು 'ಏನು ಮಾತು ? '

'ಪ್ಲೆಹ್ವೆ '

'ಪ್ಲೆಹ್ವೆ ...ಪ್ಲೆಹ್ವೆ....' ಆ ಮಾತನ್ನು ಮೊಟ್ಟಮೊದಲ ಬಾರಿಗೆ ಕೇಳಿದವರ ಹಾಗೆ ಎರಡು ಮೂರು ಬಾರಿ ತಮಗೆ ತಾವೇ ಹೇಳಿಕೊಂಡರು. ಆ ಮೇಲೆ ಹಕ್ಕಿಯ ಹಾಗೆ ಮೈಕೊಡವಿ, ಮಿದುವಾಗಿ ನಗೆನಗುತ್ತಾ ಹೇಳಿದರು :

' ನೋಡು. ಬೆಳಗಿನಿಂದಾ ಒಂದು ಮಾತು ಸುಮ್ಮನೆ ನನ್ನ ತಲೆಯಲ್ಲಿ ಸುತ್ತುತ್ತಾ ಇದೆ. ಯಾರೋ ಒಂದು ಸಲ ಹೇಳಿದರು. ಈ ಪದ್ಯ ಒಂದು ಗೋರಿ ಮೇಲೆ ಬರೆದಿತ್ತಂತೆ.

'ಈ ಶಿಲೆಯ ಅಡಿಯಲ್ಲಿ ಮಲಗಿಹನು ಇವಾನ್ ಎಗ್ರೆಯೇವ್
ಕಸುಬಿನಲಿ ಚಮ್ಮಾರ, ಚರ್ಮವನು ಹದಮಾಡುವುದೆ ಕೆಲಸ
ಕೆಲಸದಲಿ ಪ್ರಾಮಾಣಿಕನವನು, ಒಳ್ಳೆಯವನು ಆದರೇನಂತೆ.
ತನ್ನ ಕೆಲಸವನು ಹೆಂಡತಿಗೆ ಬಿಟ್ಟು, ಸತ್ತೇಹೋದ.
ಅವನಿನ್ನೂ ಮುದುಕನಾಗಿರಲಿಲ್ಲ. ಮಾಡಬೇಕಾದುದೆಷ್ಟೋ ಇತ್ತು.
ಆದರೇನಂತೆ ದೇವರವನನು ನಾಕದೆಡೆ ಕರೆದೊಯ್ದ........"

ಹೀಗೇ ಇನ್ನು ಏನೋ ಇರಬೇಕು.' ಸ್ವಲ್ಪ ಹೊತ್ತು ಸುಮ್ಮನಿದ್ದು ತಲೆಯಲ್ಲಾಡಿಸಿ ಕಿರು ನಗೆ ನಗುತ್ತಾ ಹೇಳಿದರು: 'ಮನುಷ್ಯನ ಮುತ್ತಾಳಿತನದಲ್ಲಿ, ಕಹಿ, ಇರದಿದ್ದರೆ, ಅವರಲ್ಲೂ ಎಷ್ಟೋ ಸೌಂದರ್ಯವಿದೆ; ನಿಜವಾಗಿಯೂ ಇದೆ.'

ಆ ಮಾತು ಅವರಿಗೆ ಅವರೇ ಹೇಳಿಕೊಳ್ಳುತ್ತಿದ್ದ ಹಾಗಿತ್ತು.

ಊಟಕ್ಕೆ ಕರೆದರು; ಎದ್ದು ಹೋದೆವು.

* * * *

'ಕುಡಿದವರನ್ನು ಕಂಡರೆ ನನಗಾಗುವುದಿಲ್ಲ. ಆದರೂ ಸ್ವಲ್ಪ ಕುಡಿದು ನೈಮರೆತ ಮೇಲೆ, ಎಂದಿಗಿಂತ ಹೆಚ್ಚು ಚುರುಕಾಗಿ, ಮಾತಾಡುವವರನ್ನು ನೋಡಿದ್ದೇನೆ. ಅವರ ಮಾತಿನಲ್ಲಿ ಶಬ್ದ ಸೌಂದರ್ಯ, ವಿಚಾರಪರತೆ, ಕುಡಿಯದೆ ಇದ್ದಾಗಿನ ಮಾತಿಗಿಂತ ಹೆಚ್ಚಾಗಿ ಕಂಡು ಬರುತ್ತದೆ. ಹಾಗಾದಾಗ ಸಾರಾಯನ್ನು ನಾನು ಬಾಯ ತುಂಬಾ ಹರಸುತ್ತೇನೆ' ಹೀಗೆಂತ ಒಂದು ಸಲ ಕುಡಿತದ ಪ್ರಶ್ನೆ ಬಂದಾಗ ಹೇಳಿದರು ಟಾಲ್ಸ್ಟಾಯ್.

* * * *

ವಿಜ್ಞಾನದ ವಿಚಾರವಾಗಿ:

'ವಿಜ್ಞಾನ ಮೋಸಗಾರ ರಸಸಿದ್ಧನೊಬ್ಬನು ತಯಾರಿಸಿದ ಬಂಗಾರದ ಗಟ್ಟಿ. ಅದನ್ನು ತಯಾರಿಸುವ ವಿಧಾನ ಸುಲಭವಾಗಬೇಕು, ಅದು ಎಲ್ಲರಿಗೂ ಸುಲಭ ಸಾಧ್ಯವಾಗಿ ಸಿಗಬೇಕು ಎಂತ ಆಸೆ. ಅದಕ್ಕಾಗೇ ಸಾವಿರಾರು ಖೋಟಾ ನಾಣ್ಯ ತಯಾರಿಸುತ್ತೀರಿ. ಜನಕ್ಕೆ ನೀವು ಕೊಟ್ಟ ನಾಣ್ಯದ ನಿಜವಾದ ಬೆಲೆಗೊತ್ತಾದರೆ, ಇದಕ್ಕಾಗಿ ಅವರು ಉಪಕಾರ ಮಾಡಿದಿರಿ ಎಂತ ಹೇಳುವುದಿಲ್ಲ.'

* * * *

ಸ್ಯೂಲರ್ ಒಂದು ಸಲ ಫ್ರೆಂಚ್ ಕವಿಯೊಬ್ಬನ ವಿಷಯವಾಗಿ ತುಂಬಾ ಆವೇಶಪೂರ್ಣವಾಗಿ ಮಾತಾಡುತ್ತಿದ್ದ. ಮಾತಿನಲ್ಲಿ ಬಿರುಸು, ವೇಗ ಎರಡೂ ಇತ್ತು. ಒಂದು ಗಳಿಗೆ ಅವನ ಮಾತು ಕೇಳಿ, ಆಮೇಲೆ ನಗುತ್ತಾ ಟಾಲ್ಸ್ಟಾಯ್ ಹೇಳಿದರು: 'ಸ್ಯೂಲರ್. ಈ ಹೊತ್ತು ನಿನಗೇನೋ ಆಗಿದೆ.

ಪ್ರಾಯಕ್ಕೆ ಒಂದು ಮದುವೆ ಆಗದ ಹುಡುಗಿ ಹಾಗೆ ಮಾತಾಡುತ್ತಾ ಇದೀಯಾ' ಎಂದರು.

ಸ್ಟ್ಯಾಲರ್ ಸುಸ್ತು !

*   *   *   *

ದೇವರ ವಿಚಾರ ಮಾತಾಡುತ್ತಾ ಒಂದುಸಲ ಟಾಲ್ಸ್‌ಟಾಯ್ ಹೇಳಿದರು

'ಕೆಲವರಿಗೆ, ಉಳಿದದ್ದೆಲ್ಲಾ ಇದೆ, ಎಂತ ದೇವರು ಬೇಕು ಎನಿಸುತ್ತದೆ. ಬಹುಭಾಗದ ಜನಕ್ಕೆ 'ಏನೂ ಇಲ್ಲವಲ್ಲ ಇದಾದರೂ ಇರಲಿ' ಎಂತ ದೇವರಿಗೆ ಮೊರೆ ಹೋಗುತ್ತಾರೆ.'

ನಾನಾಗಿದ್ದಿದ್ದರೆ ಹೀಗೆ ಹೇಳುತ್ತಾ ಇದ್ದೆ :

ಬಹುಭಾಗದ ಜನ ಹೇಡಿಗಳ ಹಾಗೆ ಹೆದರಿಕೆಯಿಂದ ದೇವರಿದಾನೆ ಎಂತ ಎಪ್ಪಿಕೊಳ್ಳುತ್ತಾರೆ ; ಹೃತ್ಪೂರ್ವಕವಾಗಿ ದೇವರನ್ನು ನಂಬಿದವರು ತುಂಬಾ ಕಡಮೆ.

*   *   *   *

'ಸತ್ಯವನ್ನು ದಿಟ್ಟಿಸಿ ನೋಡಿವ ಧೈರ್ಯವಿಲ್ಲದಾಗ ಕವಿತೆಯಲ್ಲಿ 'ರೋಮ್ಯಾಂಟಿಸಿಸಮ್' ಬರುತ್ತದೆ' ಎಂದು ಹೇಳಿದರು ಟಾಲ್ಸ್‌ಟಾಯ್. ಬ್ಯಾಲ್‌ಮೆಂಟನ ಕವಿತೆ ವಿಚಾರ ಮಾತನಾಡುತ್ತಾ. ಸ್ಟ್ಯಾಲಾರ್ ಈ ಮಾತು ಒಪ್ಪಲಿಲ್ಲ. ತನ್ನ ಮಾತು ಸಾಧಿಸಲು ಒಂದೆರಡು ಕವಿತೆ ಓದಿ ತೋರಿಸಿದ.

'ಇದೆಲ್ಲಾ ಕವಿತೆ ಎನ್ನುತ್ತೀಯೇನು ?'

ಬರೀ ಮಾತಿನ ಮಾಲೆ, ಕವಿತೆ ಅಲಂಕಾರವಿಲ್ಲದ ನಿರಾಭರಣ ಸಹಜ ಸುಂದರಿ.

'ನಾನೇನ ಹಾಡುವೆನೊ ನಾನರಿಯೆ,
ನನ್ನೆದೆಯ ಗೀತೆ ಹಣ್ಣಾಗುತಿದೆ'

ಎಂತ ಫೆಚೆ ಹೇಳಿದಾನೆ ನೋಡು ಅದು ನಿಜವಾದ ಜನರ ಕವಿತಾ ಭಾವನೆ. ರೈತನಿಗೆ ತಾನೂ ಕವಿ ಎಂಬುದು ಗೊತ್ತಿರುವುದಿಲ್ಲ. ಓ, ಆ, ಹಾ ಎಂತ ಅವನಾಡುವ ಒಂದೊಂದು ಮಾತಿನಲ್ಲೂ ಕವಿತೆಯಿದೆ. ಅದು ಹೃದಯ ದಿಂದ ತಾನಾಗಿ ಹರಿದುಬರುತ್ತದೆ. ನೀನು ಹೇಳುವ ಕವಿಗಳೆಲ್ಲಾ ಮಾತಿನ ಮುತ್ತನ್ನು ಪೋಣಿಸುವ ಮಾಲೆಗಾರರು ; ಕವಿಗಳಲ್ಲ.'

*   *   *   *

ನನ್ನ ಕಥೆ 'ದಿ ಬುಲ್' ಅವರಿಗೆ ಓದಿ ಹೇಳಿದೆ. ಕೇಳಿ ನಕ್ಕುಬಿಟ್ಟು 'ಪರವಾ ಇಲ್ಲ ಮಾತಿನ ಮಲ್ಲತನದ ಪಟ್ಟುಗಳೆಲ್ಲಾ ನೀನೂ ಬಲ್ಲೆ' ಎಂದರು.

'ಆದರೆ ನೋಡು ನಿನ್ನ ಶಬ್ದಗಳ ಬಳಕೆ ಚೆನ್ನಾಗಿಲ್ಲ. ನಿನ್ನ ರೈತರೆಲ್ಲಾ ತುಂಬಾ ಜಾಣ್ಮೆಯಿಂದ ಮಾತಾಡುತ್ತಾರೆ. ಆದರೆ ನಿಜವಾದ ಜೀವನದಲ್ಲಿ ಹಾಗಲ್ಲ. ಅವರ ಮಾತು ತುಂಬಾ ಅಸ್ಪಷ್ಟ; ಅದೂ ತಪ್ಪುತ್ತಾ ತೊದಲುತ್ತಾ ಮಾತಾಡುತ್ತಾರೆ. ಅವರೇನು ಮಾತಾಡುತ್ತಾರೋ ಏನೋ ಗೊತ್ತೇ ಆಗುವುದಿಲ್ಲ. ಬೇಕೆಂತಲೇ ಅವರು ಹಾಗೆ ಮಾತಾಡುತ್ತಾರೆ. ಇದು ತೋರಿಕೆಯ ದಡ್ಡತನ. ಏಕೆ ಗೊತ್ತೆ? ನೀನು ನಿನ್ನ ಮನಸ್ಸಿನಲ್ಲಿರುವುದನ್ನೆಲ್ಲಾ ಬಿಚ್ಚಿ ಹೇಳಬೇಕು. ಒಳ್ಳೆ ರೈತ ತನ್ನ ಮನಸ್ಸಿನ ಮಾತನ್ನು ಎಂದೂ ಬಿಟ್ಟುಕೊಡುವುದಿಲ್ಲ. ಅವನಿಗೆ ಗೊತ್ತು ದಡ್ಡನ ಹತ್ತರ ನೀವು ನೇರವಾಗಿ, ಸ್ಪಷ್ಟವಾಗಿ ಎದೆಬಿಚ್ಚಿ ಮಾತಾಡುತ್ತೀರಿ ಎಂತ. ಅವನಿಗೆ ಬೇಕಾದ್ದೂ ಅದೇ. ನಿಮ್ಮ ಹುಳುಕೆಲ್ಲಾ ಅವನಿಗೆ ಗೊತ್ತಾಗಿ ಹೋಗುತ್ತದೆ. ರೈತ ತುಂಬಾ ಸಂಶಯದ ಪ್ರಾಣಿ. ತನ್ನ ಎದೆಯ ಮಾತನ್ನು ಹೆಂಡತಿಗೆ ಕೂಡಾ ಹೇಳುವುದಿಲ್ಲ. ಆದರೆ ನಿನ್ನ ಕಥೆಯ ರೈತರು ಹಾಗಲ್ಲ. ಅವರಲ್ಲಿ ಮುಚ್ಚುಮರೆ ಏನೇನೂ ಇಲ್ಲ. ಅಲ್ಲದೆ ಒಬ್ಬೊಬ್ಬರೂ ಮಾತೂ ಒಂದೊಂದು ಸೂತ್ರ. ರಷ್ಯನ್ ಭಾಷೆಯಲ್ಲಿ ಇಂಥ ಶೈಲಿ ಸೊಗಸುವುದಿಲ್ಲ.''

'ಗಾದೆಗಳಿಲ್ಲವೇ?'

'ಗಾದೆಯ ಮಾತು ಬೇರೆ ಆಯಿತು. ಅವು ಇವತ್ತಿನವಲ್ಲ.'

'ಆದರೆ ನೀವೇ ಎಷ್ಟೋ ಸಲ ಸೂಕ್ತರೂಪವಾಗಿ ಮಾತಾಡುತ್ತೀರಲ್ಲ?'

'ನೋಡು ಮತ್ತೆ ಎಡುವುತ್ತಾ ಇದ್ದೀಯ. ನಾನು ಹಾಗೆ ಮಾತಾಡುತ್ತೇನೋ ಇಲ್ಲವೋ ಇರಲಿ. ನೀನು ಮಾತ್ರ ಯಾರ ಪ್ರಭಾವಕ್ಕೂ ದಾಸನಾಗಬಾರದು. ಯಾರಿಗೂ ಹೆದರಬಾರದು. ಅದನ್ನು ಕಲಿ, ಸರಿಹೋಗುತ್ತೀಯ.'

* * * *

ಇನ್ನೊಂದು ಸಲ ನನ್ನ 'ಲೋವರ್ ಡೆಪ್ತ್ಸ್' (ಪಪಾತ) ಎಂಬ ನಾಟಕದ ಒಂದೆರಡು ದೃಶ್ಯಗಳನ್ನು ಓದಿ ತೋರಿಸಿದೆ. ಸ್ವಲ್ಪ ಹೊತ್ತು ಕೇಳಿ 'ಇದನ್ನೇಕೆ ಬರೆದೆ?' ಎಂದು ಪ್ರಶ್ನೆ ಕೇಳಿದರು.

ನಾನು ಸಾಧ್ಯವಾದ ಮಟ್ಟಿಗೆ ಅದನ್ನು ಬರೆದ ಉದ್ದೇಶ ವಿವರಿಸಿದೆ.

'ನೋಡು. ನೀನು ಎಲ್ಲದರಲ್ಲೂ ತಲೆಹಾಕಿಕೊಂಡು ಬರುತ್ತೀಯ. ಅದಕ್ಕಿಂತ ಹೆಚ್ಚಾಗಿ ಕಂಡದ್ದಕ್ಕೆಲ್ಲಾ ಬಣ್ಣಬಳಿವ ಚಪಲ ನಿನಗೆ. ಆಂಡರ್ ಸೆನ್ ಹೇಳಿದ ಮಾತು ನೆನಪಿದೆಯೇನು 'ಬಣ್ಣ ಹೋಗುತ್ತದೆ ; ಉಳಿಯುವುದು ಹಂದಿ ಚರ್ಮ ಮಾತ್ರ' ಎಂತ. ನಮ್ಮ ರೈತರು ಹೇಳೋ ಹಾಗೆ 'ಎಲ್ಲಾ ಹೋಗುತ್ತದೆ ; ಕಡೆಗೆ ಉಳಿಯುವುದು ಸತ್ಯವೊಂದೆ.' ನೀನೂ ಅಷ್ಟೆ ಈ ಗಾರೆ ಕೂಲಿಯ ಕೆಲಸ ಬಿಟ್ಟುಬಿಡು ಸಾಹಿತ್ಯದಲ್ಲಿ. ಅಷ್ಟೇ ಅಲ್ಲ : ನಿನ್ನ ಭಾಷೆಯಲ್ಲೂ ಅಷ್ಟೆ : ತುಂಬಾ ಕಸರತ್ತು. ಜನ ಹಾಗೆ ಮಾತಾಡೋದಿಲ್ಲ : ನೇರವಾಗಿ ಸರಳವಾಗಿ ಮಾತಾಡುತ್ತಾರೆ. ಯಾರೋ ಹುಡುಗಿ ಹೇಳಿದಳಂತೆ : 'ಈ ಕಮಾಲೆಲ್ಲಾ ಬೇಡ' ಎಂತ. ನಿನಗೆ ನಾನು ಹೇಳೋದೂ ಅಷ್ಟೆ.'

ನನ್ನ ನಾಟಕ ಅವನಿಗೆ ಸರಿಹೋಗಲಿಲ್ಲವೆಂಬುದು ಸ್ಪಷ್ಟವಾಗಿತ್ತು. ಸಿಡುಕುತ್ತ ಮಾತಾಡುತ್ತಿದ್ದರು.

'ನಿನ್ನ ನಾಟಕದಲ್ಲಿ ಬರೋ ಮುದುಕನ ಪಾತ್ರ ಚೆನ್ನಾಗಿಲ್ಲ. ಅವನು ಒಳ್ಳೇನು ಎಂತ ಯಾರೂ ನಂಬೋದಿಲ್ಲ. ಆದೇ ನಟನಪಾತ್ರ ಚೆನ್ನಾಗಿದೆ. ನಾಟಕ ಬರೆಯೋದು ತುಂಬಾ ಕಷ್ಟ. ಎಲ್ಲಕ್ಕಿಂತ ನಿನ್ನ ಸೂಳೆ ಪಾತ್ರ ತುಂಬಾ ಸೊಗಸಾಗಿದೆ. ಹಾಗಿರಬೇಕು. ಸೂಳೆಯರ ಪರಿಚಯ ಇದೆಯೇನು ನಿನಗೆ ?'

'ಇತ್ತು.'

'ಇತ್ತು ಎಂತ ಗೊತ್ತೇ ಆಗುತ್ತೆ. ಸತ್ಯ ಸ್ವಯಂ ಸ್ಪಷ್ಟ. ನಿನ್ನ ಪಾತ್ರ ರಚನೆಯಲ್ಲಿ ಒಂದು ತಪ್ಪೇನು ಗೊತ್ತೆ. ನೀನು ಕಾಣದುದನ್ನೆಲ್ಲಾ ಬರೆಯಲು ಹೋಗುತ್ತಿ. ಸರಿ. ಅವರೆಲ್ಲಾ ನಿನ್ನಹಾಗೇ ಆಗುತ್ತಾರೆ. ನಿನ್ನದೇ ಮಾತು, ನಿನ್ನದೇ ಮುಖ. ಅಲ್ಲದೆ ನಿನಗೆ ಹೆಂಗಸರ ಸ್ವಭಾವ ಅರ್ಥವಾದ ಹಾಗೆ ಕಾಣೋದಿಲ್ಲ ....

ಇಷ್ಟರಲ್ಲೇ ಟೀಗೆ ಕರೆ ಬಂತು. ಮಾತು ಮುಗಿದರೆ ಸಾಕು ಎಂತ ಇದ್ದವರ ಹಾಗೆ ತಟಕ್ಕೆಂತ ಎದ್ದುಹೋಗಿಬಿಟ್ಟರು.

* * * *

ಚೆಕಾವ್ ಜತೆಯಲ್ಲಿ ಸತ್ಯದ ವಿಚಾರ ಮಾತಾಡುತ್ತಿದ್ದಾಗ ಹೇಳಿದರು :

'ನೋಡು, ಮನುಷ್ಯ ಯೋಚನೆ ಮಾಡೋದನ್ನು ಕಲಿತರೆ, ಏನೇ ಯೋಚನೆ ಮಾಡಲಿ ತನ್ನ ಸಾವಿನ ವಿಚಾರವನ್ನೇ ಯೋಚಿಸುತ್ತಾನೆ. ಎಲ್ಲ ತತ್ವಜ್ಞಾನಿಗಳೂ ಅಷ್ಟೆ. ಸಾವು ಬಂದಮೇಲೆ ಸತ್ಯ ಕಟ್ಟಿಕೊಂಡು ಏನಾಗ ಬೇಕು ಹೇಳು ?'

ಟಾಲ್‌ಸ್ಟಾಯ್‌ಗೆ ಸಾಯುವುದೊಂದೇ ಹೆದರಿಕೆ ; ಮೃತ್ಯು ಎಂದರೆ ಇಲ್ಲದಷ್ಟು ದ್ವೇಷ.

ಪ್ರಕೃತಿ ಒನ್ಮೆ ತನ್ನ ನಿಯಮ ತಪ್ಪಿಸಿ ಒಬ್ಬನನ್ನು ಅಮರನನ್ನಾಗಿ ಮಾಡಬಾರದೇಕೆ ಎಂಬ ಬಯಕೆ.

*          *          *          *

ಮೃತ್ಯುವನ್ನು ಟಾಲ್‌ಸ್ಟಾಯ್ ಹುಡುಗಿಯ ಹಾಗೆ ಆಟ ಆಡಿಸುತ್ತಾರೆ. 'ನೋಡು ನಿನ್ನಮೇಲೆ ನನಗೆ ತುಂಬಾ ಪ್ರೀತಿ. ಯಾವಾಗ ಬರುತ್ತಿ ? ಬೇಗ ಬಾ' ಎಂತ ತಾವೇ ಬಯಸಿ ಕರೆದ ಹಾಗೆ ಮಾಡಿ ಟೋಪಿಹಾಕಲು ಯತ್ನಿಸು ತ್ತಾರೆ.

ಆದರೆ ಅಷ್ಟೇಮಟ್ಟಿಗೆ ಸಾವಿನ ಬಗ್ಗೆ ಕುತೂಹಲವೂ ಇದೆ : 'ಹೇಗಿ ದೀಯ ನೀನು ? ಸತ್ತಮೇಲೆ ಏನಾಗತ್ತೆ ? ಎಲ್ಲಾ ಹಾಳುಮಾಡಿ ಬಿಡು ತ್ತೀಯೋ ? ಅಥವಾ ನನ್ನಲ್ಲಿ ಏನಾದರೂ ಸ್ವಲ್ಪ, ನಾನು ಹೋದಮೇಲೂ ಬದುಕಿರುತ್ತದೆಯೋ ?' ಎಂತ ಪ್ರಶ್ನಿಸುತ್ತಾರೆ.

*          *          *          *

ಟಾಲ್‌ಸ್ಟಾಯ್ ಸಂತನಾಗುವುದು ಬೇಡ. ಪಾಪಿಯಾಗೇ ಇರಲಿ. ಹಾಗಿದ್ದರೇ ಆತ ಈ ಪಾಪಪೂರಿತ ಜಗತ್ತಿನ ಗೆಳೆಯನಾದಾನು ; ನಮ್ಮೆಲ್ಲ ರಿಗೂ ಪ್ರಿಯನಾದಾನು.

*          *          *          *

'ಟಾಲ್‌ಸ್ಟಾಯ್ ತೀರಿಹೋದರು !'

ಟೆಲಿಗ್ರಾಂ ಬಂತು. ಎರಡೇ ಮಾತು ; ದಿನ ಬಳಕೆಯ ಎರಡೇ ಮಾತು. ಆದರೆ ಎಷ್ಟು ವ್ಯತ್ಯಾಸ ! ಓ !!

ನನ್ನ ಎದೆ ಬಿರಿಯಿತು. ನೋವು, ಸಿಟ್ಟಿನಲ್ಲಿ ಗಟ್ಟಿಯಾಗಿ ಅತ್ತೆ. ನಾನವರನ್ನು ನೋಡಿದ ಹಾಗೆ, ಅರಿತ ಹಾಗೆ ಊಹಿಸಿಕೊಳ್ಳಲು ಯತ್ನಿಸಿದೆ. ಅವರೊಡನೆ ಮಾತಾಡಬೇಕೆಂಬ ಬಯಕೆ ಎದೆಯಲ್ಲಿ ಕೊರೆಯುತ್ತಿದೆ. ಶವದ ಪೆಟ್ಟಿಗೆಯಲ್ಲಿ ಹೇಗಿರಬಹುದು ಅವರು ?—ತೊರೆಯ ತಳದಲ್ಲಿರುವ ಶಿಲೆಯ ಹಾಗೆ.... ಆ ಬಿಳಿದಾಗಿ ನರೆತ ಗಡ್ಡದಲ್ಲಿ ಕಿರುನಗೆ ಮಿನುಗುತ್ತಿರಬೇಕು ; ಇರಬೇಕು. ಅಂತೂ ಕೈಕಟ್ಟಿವೆ. ಕೆಲಸ ಮುಗಿಯಿತು. ಓ! ಎಂಥ ಕಷ್ಟದ ಕೆಲಸ. ಕೊನೆಗೂ ಶಾಂತಿ.

*   *   *   *

ಆ ಮುದಿ ಮಾಟಗಾರ ನನ್ನ ಮನಸಿನ ಕಣ್ಣೆದುರು ನಿಂತಿದ್ದಾನೆ. ಜಗತ್ತಿನ ಸತ್ಯವನ್ನರಿಯಲು ಹೊರಟ ಏಕಾಂಗಿ ಪಥಿಕ ಭಾವನೆಗಳ ಮರಳುಗಾಡಿನಲ್ಲಿ ಅರಸುವ ಸತ್ಯವನ್ನು ಕಾಣದೆ ಅಲೆಯುತ್ತಿದ್ದಾನೆ. ನೋಡುತ್ತೇನೆ. ಇನ್ನಿಲ್ಲವಲ್ಲಾ ನನ್ನ ಪಾಲಿಗೆ ಎಂದು ದುಃಖವಾಗುತ್ತದೆ. ಆದರೂ ಆತನನ್ನು ಕಣ್ಣಾರೆ ಕಂಡ ಹೆಮ್ಮೆ ನನಗಿದೆ. ಆ ಹೆಮ್ಮೆಯೇ ನನ್ನ ದುಃಖದ ಗಾಯಕ್ಕೆ ಅಮೃತ ಸಂಜೀವಿನಿ.

*   *   *   *

ಇದ್ದಕ್ಕಿದ್ದ ಹಾಗೇ ಟಾಲ್‌ಸ್ಟಾಯ್ ನನ್ನನ್ನೊಮ್ಮೆ ಕೇಳಿದ್ದರು :

'ನಿನಗೇಕೆ ದೇವರಲ್ಲಿ ನಂಬಿಕೆಯಿಲ್ಲ ?'

'ಏನೋ ನಂಬಿಕೆಯಿಲ್ಲ.'

'ಅದು ನಿಜವಲ್ಲ. ನೀನು ನಿಜವಾಗಿಯೂ ಆಸ್ತಿಕ. ದೇವರಿಲ್ಲದೆ ನೀನು ಬದುಕಲೇಲಾರೆ. ಒಂದು ದಿನ ನಿನಗೇ ಇದು ಗೊತ್ತಾಗುತ್ತದೆ. ಈ ಪ್ರಪಂಚ ನೀನು ಬಯಸುವ ಹಾಗಿಲ್ಲ ಎಂತ ನಿನಗೆ ನೋವಾಗಿದೆ. ಅದಕ್ಕೇ ದೇವರೇ ಇಲ್ಲ ಎನ್ನುತ್ತೀಯ. ಇನ್ನು ಕೆಲವರು ನಾಚಿಕೆಯಿಂದ ದೇವರಿಲ್ಲ ಎನ್ನುತ್ತಾರೆ. ಇದು ಹೀಗೆ ಗೊತ್ತೇನು. ಕೆಲವರಿಗೆ ಹುಡುಗಿಯ ಮೇಲೆ ಪ್ರೀತಿ ಇರುತ್ತದೆ. ಇದೆ ಎಂದರೆ ಏನನ್ನುತ್ತಾಳೋ ಎಂಬ ನಾಚಿಕೆ, ಭೀತಿಯಿಂದ ಪ್ರೀತಿ ಇಲ್ಲ ಎನ್ನುತ್ತಾರೆ. ದೇವರ ವಿಷಯದಲ್ಲೂ ಹಾಗೆ. ಪ್ರೇಮಕ್ಕೆ ಹೇಗೋ ಆಸ್ತಿಕತೆಗೂ ಹಾಗೆ; ಧೈರ್ಯ ಬೇಕು. ಒಂದು ಸಲ 'ನಾನು ನಂಬುತ್ತೇನೆ' ಎಂದುಕೊಂಡರೆ ಸಾಕು. ಆಮೇಲೆ ಎಲ್ಲಾ ನಿನಗೆ ಬೇಕಾದ ಹಾಗಾಗುತ್ತದೆ :

ನಿನ್ನ ಮನಸ್ಸು ಮಾರುಹೋಗುತ್ತದೆ. ಪ್ರೇಮದ ಉತ್ಕಟಾವಸ್ಥೆ ಭಕ್ತಿ. ನೀನು ಮೆಚ್ಚಿದವಳು ನಿನಗೆ ರಂಭೆ. ಹಾಗೇ ಒಬ್ಬೊಬ್ಬನಿಗೂ. ನಿನ್ನ ನಂಬಿಕೆಯೇ ನಿನಗವಳು ರಂಭೆಯಾಗಲು ಕಾರಣ. ಆ ನಂಬಿಕೆ ಇಲ್ಲದವನಿಗೆ ಈ ವರ್ಷ ಇವಳು, ಮುಂದಿನ ವರ್ಷ ಮತ್ತೊಬ್ಬಳು. ಅವರದು ಬೀದಿಯ ಭಿಕಾರಿಗಳ ಹಾಗೆ ಬಂಜೆಜೀವನ – ಒಳ್ಳೆಯದಲ್ಲ. ನೀನು ಹುಟ್ಟಾ ಆಸ್ತಿಕ. ಸುಮ್ಮನೆ ಅಲ್ಲ ಎಂದುಕೊಂಡರೆ ಆಗುವುದೇನು? ಸೌಂದರ್ಯ ಎನ್ನುತ್ತಿ. ಸೌಂದರ್ಯ ಎಂದರೆ ಏನು? ಅದೇ ದೇವರು. ಯಾವುದು ಅತ್ಯುತ್ತಮವೋ, ಯಾವುದು ಸರ್ವಪರಿಪೂರ್ಣವೋ ಅದೇ ದೇವರು.'

ನಾನು ಸುಮ್ಮನೇ ಇದ್ದೆ.

ಸೋಫಾದ ಮೇಲೆ ಕಾಲು ಮುದುರಿಕೊಂಡು ಕುಳಿತಿದ್ದರು ಟಾಲ್ಸ್ಟಾಯ್. ಸ್ವಲ್ಪಹೊತ್ತು ಸುಮ್ಮನಿದ್ದು ಆಮೇಲೆ ನಗುತ್ತಾ ನನ್ನ ಕಡೆ ಬೆರಳು ತೋರಿಸುತ್ತಾ ಹೇಳಿದರು:

'ಸುಮ್ಮನಿದ್ದು ಬಿಟ್ಟರೆ ಬಿಟ್ಟುಬಿಡುತ್ತೀನಿ ಎಂತ ತಿಳಿದಿದಿಯೋ?'

ದೇವರಲ್ಲಿ ನಂಬಿಕೆಯಿಲ್ಲದ ನಾನು ಅವರ ಕಡೆಯೇ ಹೆದಹೆದರುತ್ತಾ ಹುಷಾರಾಗಿ ನೋಡಿದೆ. ನೋಡಿ ನನಗೆ ನಾನೇ ಹೇಳಿಕೊಂಡೆ:

'ದೇವರಿದ್ದಾನೋ ಇಲ್ಲವೋ, ಇವರಂತೂ ದೇವರಂಥ ಮನುಷ್ಯರು.'

# * ಒಂದು ಚಳಿ ರಾತ್ರಿ

ಅನುವಾದಕ : ನಾಡಿಗೇರ ಕೃಷ್ಣರಾಯ

ಒಂದು ಸಾರಿ ಚಳಿಗಾಲದಲ್ಲಿ ನಾನು ಬಹಳ ಅನಾನುಕೂಲ ಪರಿಸ್ಥಿತಿಯಲ್ಲಿದ್ದೆ. ಆಗತಾನೇ ಆ ಊರಿಗೆ ಬಂದಿದ್ದೆ, ಯಾರೊಬ್ಬರ ಪರಿಚಯವೂ ಇರಲಿಲ್ಲ. ಕೈಯಲ್ಲಿ ಒಂದು ಕುರುಡು ಕವಡೆಯೂ ಇರಲಿಲ್ಲ, ರಾತ್ರಿ ಮಲಗಲು ಅನುವು ದೊರೆಯದೆ ಪೇಚಿಗೆ ಸಿಕ್ಕಿದ್ದೆ.

ಆ ಊರಿಗೆ ಬಂದ ಮೊದಲಿನ ಕೆಲವು ದಿನಗಳಲ್ಲಿ ಸಾಧ್ಯವಾದಷ್ಟು ಮೈಮೇಲಿನ ಬಟ್ಟೆ ಬರೆಗಳನ್ನು ಮಾರಾಟ ಮಾಡಿದ್ದೆ. ನಗರ ಭಾಗವನ್ನು ಬಿಟ್ಟು ಹಡಗುಗಳು ತಂಗುವ ಸ್ಥಳವಾದ 'ಎಸ್ಟ್' ಎಂಬಲ್ಲಿಗೆ ಹೋದೆ. ನೌಕಾಯಾನ ದಿನಗಳಲ್ಲಿ ಈ ಪ್ರದೇಶವು ಜನಭರಿತವಾಗಿರುತ್ತದೆ. ಈಗ ಅದು ಸ್ಮಶಾನದಂತೆ ಮೌನವಾಗಿತ್ತು, ಮರಭೂಮಿಯಂತೆ ಬರಿದಾಗಿತ್ತು. ಏಕೆಂದರೆ ಅಕ್ಟೋಬರ್ ಕೊನೆಯ ದಿನಗಳು ಈಗಾಗಲೇ ಸಮಾಪಿಸಿದ್ದವು.

ಸೀಸದಂತೆ ಭಾರವಾದ ನನ್ನ ಕಾಲುಗಳನ್ನು ಒದ್ದೆಯಾದ ಮರಳಿನಲ್ಲಿ ಎಳೆಯಲಾರದೆ ಎಳೆಯುತ್ತಾ ಹೊರಟೆ. ಅಲ್ಲಿ ಏನಾದರೂ ತಿನ್ನಲು ಚೂರು ಆಹಾರ ಸಿಕ್ಕೀತೆಂದು ಮನಸ್ಸೊಪ್ಪದಿದ್ದರೂ ಮೊಂಡತನದಿಂದ ಯೋಚಿಸಿದೆ. ಬರಿದಾದ ಕಟ್ಟಡಗಳ ಮಧ್ಯದಲ್ಲಿ ದಾಸ್ತಾನಿಡುವ ಕೋಣೆಗಳ ಮಧ್ಯದಲ್ಲಿ ಹೊರಟೆ. ಹೊಟ್ಟೆತುಂಬ ಊಟ ಸಿಕ್ಕರೆ ಎಷ್ಟು ಒಳ್ಳೆಯದಾದೀತೆಂದು ಯೋಚಿಸಿದೆ.

ನಮ್ಮ ಇಂದಿನ ಸಾಂಸ್ಕೃತಿಕ ಪರಿಸ್ಥಿತಿಯಲ್ಲಿ ಮಾನಸಿಕ ಹಸಿವು ತೃಪ್ತಿ ಹೊಂದಿದಂತೆ ದೈಹಿಕ ಹಸಿವು ತೃಪ್ತಿಹೊಂದುವದಿಲ್ಲ. ನೀವು ಬೀದಿಗಳಲ್ಲಿ ಅಲೆಯುತ್ತೀರಿ. ಹೊರಗಡೆ ನೋಡಲು ಸಾಧಾರಣ ಅಂದವಾದ ಕಟ್ಟಡಗಳನ್ನು ನೋಡುವಿರಿ—ಅವು ಒಳಗಡೆ ಸುಸಜ್ಜಿತವಾಗಿರಬಹುದೆಂದು ನೀರು ಕುಡಿದಷ್ಟು ಸುಲಭವಾಗಿ ಹೇಳುವಿರಿ. ಒಳಗಡೆ ನೋಡಿದ ಮೇಲೆ ಶಿಲ್ಪ, ಆರೋಗ್ಯ ಮತ್ತು ಇಂತಹವೇ ಆದ ಅನೇಕ ಉಚ್ಚ ಭಾವನೆಗಳು ನಿಮ್ಮಲ್ಲಿ

---

* One Autumn Night.

ಪ್ರಚೋದಿತವಾಗಲು ಕಾರಣವಾಗುತ್ತದೆ. ಅಚ್ಚುಕಟ್ಟಾದ ಬಟ್ಟೆತೊಟ್ಟ ಜನಗಳನ್ನು ನೀವು ಕಾಣಬಹುದು—ಅವರೆಲ್ಲರೂ ಬಹಳ ವಿನಯಶೀಲರು, ನಿಮ್ಮ ಅಸ್ತಿತ್ವವನ್ನು ಗಣನೆಗೆ ತೆಗೆದುಕೊಂಡಿಲ್ಲವೆಂಬ ಅಂಶವನ್ನು ಸ್ಪಷ್ಟಪಡಿಸಿ ನಿಮಗೆ ನೋವನ್ನುಂಟುಮಾಡುವ ಗೋಜಿಗೆ ಹೋಗದೆ ಉಪಾಯದಿಂದ ಜಾರಿಕೊಳ್ಳುತ್ತಾರೆ. ಹಸಿದ ಮನುಷ್ಯನ ಮನಸ್ಸು ಹೊಟ್ಟೆತುಂಬ ಉಂಡವನ ಮನಸ್ಸಿಗಿಂತ ಚೆನ್ನಾಗಿ ಪೋಷಣೆ ಹೊಂದಿ ಪುಷ್ಟಿಯಾಗಿರುತ್ತದೆ; ಆದುದರಿಂದ ಹೊಟ್ಟೆತುಂಬ ಉಂಡವನಿಗಿಂತ ಹಸಿದ ಮನುಷ್ಯನ ಸ್ಥಿತಿಯೇ ಮೇಲೆಂಬ ತೀರ್ಮಾನಕ್ಕೆ ಬರಲು ಇದೊಂದು ಸಕಾರಣವೇ ಸರಿ.

ಸಾಯಂಕಾಲ ಸಮೀಪಿಸಿತು. ಮಳೆ ಬೀಳುತ್ತಲಿತ್ತು. ಉತ್ತರದಿಕ್ಕಿನಿಂದ ಗಾಳಿ ಭೋರೆಂದು ಬೀಸುತ್ತಿತ್ತು. ಬರಿದಾದ ಕೋರಿಗಳ ಮೇಲೂ, ಅಂಗಡಿಗಳ ಮೇಲೂ ಸಿಳ್ಳು ಹೊಡೆದಂತೆ ಗಾಳಿ ಬೀಸುತಲಿತ್ತು. ಹೋಟಲು ಕಿಟಕಿಗಳ ಮೇಲೆ ಫಳ್ಳೆಂದು ಬಡಿಯುತ್ತಿತ್ತು. ಚಳಿಗಾಲದ ಬರುವನ್ನು ನದಿಯು ಅರಿತುಕೊಂಡು, ಉತ್ತರ ದಿಕ್ಕಿನ ಬಲವಾದ ಗಾಳಿಯ ಪರಿಣಾಮದಿಂದ ಉರುಳಿಬಂದ ಮಂಜುಗಡ್ಡೆಗೆ ಸಿಲುಕವಂತೆ ಎತ್ತಲೋ ಬಳಸಿಕೊಂಡು ಹೋಗುವಂತೆ ತೋರುತ್ತಿತ್ತು. ಆಕಾಶವು ಭಾರವಾಗಿತ್ತು, ಕಪ್ಪಾಗಿತ್ತು; ಬಿಟ್ಟು ಬಿಡದೆ ದಪ್ಪ ಹನಿಗಳು ಉದುರುತ್ತಿದ್ದವು. ಬೇರು ಸಹಿತ ಕಳಚಿಬಿದ್ದ ಕೆಲವು ನೀರವಂಜಿ ಮರಗಳೂ ಬುಡಮೇಲಾದ ಒಂದು ದೋಣಿಯೂ, ನನ್ನ ಸುತ್ತುಮುತ್ತಿನ ಪ್ರಕೃತಿಯ ಶೋಕಗೀತೆಯನ್ನು ಸುಸ್ಪಷ್ಟಪಡಿಸುವಂತಿತ್ತು.

ಬುಡಮೇಲಾದ ದೋಣಿಯ ಅದೃಷ್ಟ, ಚಳಿಗಾಳಿಯ ಹೊಡೆತದಿಂದ ಬೇರು ಕಳಚಲಿದ್ದ ಮುದಿ ಮರಗಳು—ಬರಿದು, ಬರಡು, ಸಾವು, ಇವನ್ನು ಸೂಚಿಸುತ್ತಿದ್ದವು. ಸಾಲದುದಕ್ಕೆ ಒಣಗಲಾರದ ಆಕಾಶದ ಕಣ್ಣೀರು....ನನ್ನ ಸುತ್ತ ಎಲ್ಲವೂ ಹಾಳು, ನಿರಾಶಾದಾಯಕ ... ಎಲ್ಲವೂ ಸತ್ತಂತೆ ತೋರಿತು, ನಾನೊಬ್ಬನೇ ಜೀವಂತ, ಆದರೆ ನನಗೂ ಅಂತಹ ಶೀತಲ ಸಾವು ಕಾದುಕೂತಿದ್ದಂತೆ ಭಾಸವಾಯಿತು.

ನನಗಾಗ ಹದಿನೆಂಟು ವರ್ಷ ವಯಸ್ಸು—ತಕ್ಕ ಕಾಲವೇ !

ಆ ಹಸಿಮರಳಿನ ಮೇಲೆ ಒಂದೇ ಸಮನಾಗಿ ಹಜ್ಜೆಹಾಕಿದೆ. ಹಸಿವು ಚಳಿಗಳ ಮರ್ಯಾದಾರ್ಥವಾಗಿ ನನ್ನ ಹಲ್ಲುಗಳು ಕಟಕಟನೆ ಶಬ್ದಮಾಡು

ತ್ತಿದ್ದವು. ಏನಾದರೂ ತಿನ್ನಲು ಸಿಕ್ಕುವುದೆಂದು ನಾವು ಹುಡುಕುತ್ತಿದ್ದಾಗ, ಬರಿದಾದ ದೊಡ್ಡ ಪೆಟ್ಟಿಗೆಯೊಂದರ ಹಿಂದುಗಡೆ ನೆಲದಮೇಲೆ ಮುದುರಿ ಕೊಂಡು ಕುಳಿತಿದ್ದ ಒಂದು ಸ್ತ್ರೀ ವ್ಯಕ್ತಿ ನನ್ನ ಕಣ್ಣಿಗೆ ಬಿದ್ದಿತು. ಆಕೆಯ ಬಟ್ಟೆಗಳೆಲ್ಲಾ ತೊಯ್ದು ತೊಪ್ಪೆಯಾಗಿದ್ದವು. ಇಳಿಬಿದ್ದಿದ್ದ ಅವಳ ತೋಳು ಗಳಿಗೆ ಅವು ಬಲವಾಗಿ ಅಂಟಿಕೊಂಡಿದ್ದವು. ಅವಳು ಏನು ಮಾಡುತ್ತಿದ್ದಾ ಳೆಂದು ಹಾಗೆಯೇ ನೋಡಿದೆ. ಪೆಟ್ಟಿಗೆಯ ಕೆಳಗಿದ್ದ ಮರಳನ್ನು ತನ್ನ ಕೈಗ ಳಿಂದಲೇ ತೋಡುತ್ತಿರುವುದು ನನ್ನ ಕಣ್ಣಿಗೆ ಬಿದ್ದಿತು.

"ಹಾಗೇಕೆ ಮಾಡುತ್ತೀ?" ಮುಂಗಾಲಿನಿಂದಲೇ ನಡೆಯುತ್ತ ಅವಳ ಸಮೀಪಕ್ಕೆ ಬಂದು ಕೇಳಿದೆ.

ಆಕೆ ಚಟ್ಟನೆ ಚೀರಿ ಎದ್ದುನಿಂತಳು ತನ್ನ ದೊಡ್ಡದಾದ ಬೂದು ಕಣ್ಣು ಗಳಿಂದ ಹೆದರಿಕೆಯಿಂದ ನೋಡಿದಳು. ಆಕೆ ನನ್ನ ವಯಸ್ಸಿನವಳೇ ಎಂದು ಕಾಣಬಂತು. ಮುದ್ದುಮುಖ. ಆದರೆ ಅದರ ಮೇಲೆ ದುರದೃಷ್ಟವಶಾತ್ ಮೂರು ನೀಲಿಬಣ್ಣದ ಗುರುತುಗಳಿದ್ದವು. ಇವು ಅವಳ ಚೆಲುವನ್ನು ಕೆಡಿಸಿ ದ್ದವು. ಈ ನೀಲಿಬಣ್ಣದ ಗುರುತುಗಳು ಅವಳ ದುಃಖದ ಮೇಲೆ ಸಪ್ರಮಾಣ ವಾಗಿ, ಒಂದೇ ಅಳತೆಯಲ್ಲಿ, ಒಂದೇ ದೂರದಲ್ಲಿ ಬಿಡಿಬಿಡಿ ಹಂಚಿದ್ದವು. ಕಣ್ಣುಗಳ ಕೆಳಗೆ ಎರಡು, ಹಣೆಗೂ ಮೂಗಿಗೂ ಮಧ್ಯದಲ್ಲಿ ಕೊಂಚ ದೊಡ್ಡ ದೊಂದು ಹೀಗೆ ಮೂರು ಗುರುತುಗಳಿದ್ದವು. ಮನುಷ್ಯ ಮುಖಲಕ್ಷಣವನ್ನು ಹಾಳುಮಾಡುವದರಲ್ಲಿ ನುರಿತ ಕಲಾವಿದನ ಕೈವಾಡವಿತ್ತೆಂದು ಖಡಾಖಂಡಿತ ವಾಗಿ ಹೇಳಬಹುದಾಗಿತ್ತು.

ಹುಡುಗಿ ನನ್ನನ್ನು ದಿಟ್ಟಿಸಿ ನೋಡುತ್ತಿದ್ದ ಹಾಗೆ ಅವಳ ಕಣ್ಣುಗಳಲ್ಲಿ ಕಾಣುತ್ತಿದ್ದ ಭೀತಿ ನಿಧಾನವಾಗಿ ಮಾಯವಾಯಿತು.... ಕೈಗೆ ಹತ್ತಿದ್ದ ಮರಳನ್ನು ಕೊಡವಿ, ತಲೆಗೆ ಕಟ್ಟಿದ್ದ ಬಟ್ಟೆಯನ್ನು ಸರಿಪಡಿಸಿಕೊಂಡು ನಡ ಗುವ ದನಿಯಲ್ಲಿ ಹೇಳಿದಳು :

"ತಿನ್ನುವುದಕ್ಕೆ ಏನನ್ನೋ ನೀನು ಹುಡುಕುವಂತೆ, ತೋರುತ್ತಿದೆಯಲ್ಲ? ಹಾಗಾದರೆ ಆ ಮರಳನ್ನು ತೋಡು. ನನ್ನ ಕೈಗಳು ಸೋತು ಸುಸ್ತಾಗಿವೆ. ಅಗೋ ಅಲ್ಲಿ—" ಎಂದು ಹೇಳುತ್ತ ಮೂಲೆಯ ಕಡೆ ತನ್ನ ತಲೆಯನ್ನು

ಹೊರಳಿಸಿ "ಖಂಡಿತವಾಗಿಯೂ ಅಲ್ಲಿ ರೊಟ್ಟಿಯ ಚೂರುಗಳಿವೆ.... ಮಾಂಸದ ಚೂರೂ ಸಿಕ್ಕಬಹುದು...."

ನಾನು ಮರಳನ್ನು ತೋಡಲಾರಂಭಿಸಿದೆ. ಆಕೆ ಹಾಗೆಯೇ ಸ್ವಲ್ಪ ಹೊತ್ತು ನೋಡುತ್ತ ನಿಂತಿದ್ದವಳು ನನ್ನ ಪಕ್ಕ ಪಕ್ಕಕ್ಕೆ ಬಂದು ಕುಳಿತಳು. ನನಗೆ ಸಹಾಯ ಮಾಡತೊಡಗಿದಳು.

ಮಾತಿಲ್ಲದೆ ಹಾಗೆಯೇ ನಮ್ಮ ಕೆಲಸ ಸಾಗಿಸಿದೆವು. ನ್ಯಾಯಶಾಸ್ತ್ರ, ನೀತಿಪ್ರಶ್ನೆ, ಒಡೆತನ ಮತ್ತು ಇಂತಹವೇ ಆದ ಬಹು ವಿಷಯಗಳು ಬಹು ಮುಖ್ಯವೆಂದೂ, ಇವನ್ನು ನಮ್ಮ ಜೀವಿತದ ಪ್ರತಿ ಕ್ಷಣದಲ್ಲಿಯೂ ಆಲೋಚಿಸ ಬೇಕೆಂದೂ ಹೇಳುವ ಅನುಭವಿಗಳ ಮಾತು ನನ್ನ ನೆನಪಿಗೆ ಬಂದಿತೋ ಇಲ್ಲವೋ ಹೇಳಲಾರೆ. ಆದರೂ ಸಾಧ್ಯವಾದಷ್ಟು ಮಟ್ಟಿಗೆ ಸತ್ಯಕ್ಕೆ ಅಂಟಿ ಕೊಂಡಿರಬೇಕೆಂದು ಏಕಚಿತ್ತದಿಂದ ಪೆಟ್ಟಿಗೆಯ ಕೆಳಗಡೆ ಮರಳನ್ನು ತೆಗೆದು ಹಾಕುತ್ತಿದ್ದೆ. ನಿಜ ನುಡಿಯಬೇಕೆಂದರೆ ಆ ಪೆಟ್ಟಿಗೆಯ ಕೆಳಗೆ ಏನಿದ್ದೀತೆಂಬ ಯೋಚನೆ ಸಹ ನನಗುಂಟಾಗಲಿಲ್ಲ.

ಸಂಜೆ ದಾಟಿತು. ರಾತ್ರಿಯಾಗುತ್ತ ಬಂದಿತು. ದಪ್ಪನಾಗಿ ಮಂಜು ನಮ್ಮನ್ನು ಆವರಿಸತೊಡಗಿತು. ಅಲೆಗಳು ಮುಂಚೆಗಿಂತ ಒಡಕು ಶಬ್ದ ಮಾಡುವುದು ಕೇಳಬರುತ್ತಿತ್ತು. ಪೆಟ್ಟಿಗೆಯ ಹಲಗೆಗಳ ಮೇಲೆ ಮಳೆಹನಿ ಗಳು ಪಟಪಟ ಶಬ್ದ ಮಾಡುವುದು ನಿಲ್ಲಲೇ ಇಲ್ಲ. ರಾತ್ರಿ ಕಾವಲುಗಾರನು ಎಲ್ಲಿಯೋ ಬಹಳ ದೂರದಲ್ಲಿ ಸೀಟಿ ಹೊಡೆಯುತ್ತಿದ್ದುದು ಕೇಳಿಸುತ್ತಿತ್ತು.

"ಅದಕ್ಕೇನಾದರೂ ತಳ ಇದೆಯೋ ಇಲ್ಲವೋ ?" ನನ್ನ ಸಹಾಯಕಳು ಕೇಳಿದಳು. ಆಕೆ ಏನು ಮಾತನಾಡುತ್ತಿದ್ದಾಳೆಂಬುದು ತಿಳಿಯದೆ ಮೌನ ವಾಗಿದ್ದೆ.

"ಆ ಪೆಟ್ಟಿಗೆಗೆ ತಳ ಇದೆಯೆ ಅಂತ ಕೇಳಿದೆ. ಅದಕ್ಕಿರುವದಾದರೆ ನಾವು ತೋಡಿದ್ದು ನಿರರ್ಥಕವೇ ಸರಿ. ನಾವು ಸುಮ್ಮನೇ ಒಂದು ಹಳ್ಳವನ್ನು ತೋಡುತ್ತಿದ್ದೇವೆ. ನಾವು ಪೂರ್ತಿಯಾಗಿ ತೋಡಿದ ಮೇಲೆ ಬರೀ ಮರದ ಹಲಗೆಗಳು ಸಿಕ್ಕಿದರೆ ಏನು ಮಾಡೋಣ ? ಆ ಹಲಗೆಗಳನ್ನು ತೆಗೆಯುವದಾ ದರೂ ಹೇಗೆ? ಅದಕ್ಕಿಂತಲೂ ಬೀಗವನ್ನು ಒಡೆದುಹಾಕುವುದೇ ಲೇಸು, ಅದು ಹಳೆಯ ಲಡ್ಡು ಬೀಗ."

ಹೆಂಗಸರ ತಲೆಯಲ್ಲಿ ಒಳ್ಳೆಯ ವಿಚಾರಗಳು ಸುಳಿಯುವುದೇ ಅಪ ರೂಪ, ಆದರೆ ನೀವು ಕಂಡಂತೆ ಕೆಲವು ಸಾರಿ ಸುಳಿಯುವುದೂ ಉಂಟು. ಒಳ್ಳೆಯ ವಿಚಾರಗಳಿಗೆ ಯಾವಾಗಲೂ ನಾನು ಮಾನ್ಯಕೊಡತಕ್ಕವನು ಮತ್ತು ಆದಷ್ಟುಮಟ್ಟಿಗೆ ಅವುಗಳ ಉಪಯೋಗವನ್ನು ಮಾಡಿಕೊಳ್ಳುವವನು.

ಬೀಗವನ್ನು ಪತ್ತೆಮಾಡಿದೆ. ಅದನ್ನು ಬಿಗಿಯಾಗಿ ತಿರುಗಿಸಿ ಕಿತ್ತು ಹಾಕಿದೆ. ನನ್ನ ಸಹಾಯಿಕೆಯು ಹಾಗೆಯೇ ಬಗ್ಗಿ ಹಾವಿನಂತೆ ವರ್ತುಳಾ ಕಾರವಾಗಿ ಸುತ್ತುತ್ತ ಪೆಟ್ಟಿಗೆಯೊಳಹೊಕ್ಕಳು. ಅಲ್ಲಿಂದಲೇ ಮೇಲುದನಿಯಲ್ಲಿ ಕೂಗಿದಳು.

"ನೀನೊಬ್ಬ ಕದೀಮ."

ಇಂದಿನ ದಿನಗಳಲ್ಲಿ ಹೆಂಗಸಿನಿಂದ ಬಂದ ಒಂದು ತುಂಡು ಪ್ರಶಂಸೆಯು ಗಂಡಸಿನ ಪ್ರಶಂಸಾ ಉದ್ಗ್ರಂಥಕ್ಕಿಂತಲೂ ಪ್ರಿಯವಾಗಿತ್ತು. ಆಧುನಿಕ ಮತ್ತು ಪುರಾತನ ವಾಗ್ಮಿಗಳ ಪ್ರಶಂಸೆಗಳನ್ನು ಒಟ್ಟುಗೂಡಿಸಿದರೆ ಆಗುವ ಪರಿ ಣಾಮಕ್ಕಿಂತಲೂ ಇದು ಪ್ರಿಯವಾಗಿತ್ತು. ಆಗ ನನ್ನ ಮನೋವೃತ್ತಿ ಈಗಿನ ಹಾಗಿಲ್ಲವಾದ್ದರಿಂದ, ಆಕೆಯ ಪ್ರಶಂಸೆಯನ್ನು ಲಕ್ಷಿಸದೆ ಸ್ವಲ್ಪ ಬಿರುಸಿ ನಿಂದಲೂ, ಕುತೂಹಲದಿಂದಲೂ ಕೇಳಿದೆ :

"ಅಲ್ಲೇನಾದರೂ ಇದೆಯೋ ?"

ತುಂಬು ಬೇಸರದ ದನಿಯಲ್ಲಿ ನಮಗೆ ಸಿಕ್ಕ ಪದಾರ್ಥಗಳ ವಿವರಣೆ ಕೊಡಲಾರಂಭಿಸಿದಳು.

"ಒಂದು ಬುಟ್ಟಿ ಸೀಸೆಗಳು, ದಪ್ಪ ಉಣ್ಣೆಬಟ್ಟೆ, ದೀಪದ ಮುಚ್ಚಿಗೆ, ಒಂದು ಕಬ್ಬಿಣದ ಪಾತ್ರೆ."

ಇವು ಯಾವೂ ತಿನ್ನುವ ಪದಾರ್ಥಗಳಲ್ಲ. ನನ್ನ ಆಶಾಸೌಧಗಳೆಲ್ಲಾ ಪುಡಿ ಪುಡಿಯಾದವೆಂದು ತಿಳಿದೆ ... ಆದರೆ ಆಕೆ ಹಟಾತ್ತಾಗಿ ಕೇಕೆಹಾಕುತ್ತಾ ಹೇಳಿದಳು :

"ಇಲ್ಲಿ ನೋಡು "

"ಏನು ?"

"ರೊಟ್ಟಿ .... ರೊಟ್ಟಿ .... ಸ್ವಲ್ಪ ಒದ್ದೆಯಾಗಿದೆ .... ತೆಗೆದುಕೋ !"

ಒಂದು ರೊಟ್ಟಿಯ ಚೂರು ನನ್ನ ಕಾಲಿನ ಬಳಿ ಬಿತ್ತು. ಅದರ ಜತೆಗೆ ಬಂದಳು – ನನ್ನ ಸಾಹಸೀ ಗೆಳತಿ. ಈ ಹೊತ್ತಿಗೆ ಒಂದು ಚೂರು ರೊಟ್ಟಿಯನ್ನು ನಾನು ಬಾಯಲ್ಲಿ ತುಂಬಿಕೊಂಡು ಅಗಿಯುತ್ತಿದ್ದೆ....

"ನನಗೆ ಸ್ವಲ್ಪ ಕೊಡು ... ಇನ್ನು ನಾವಿಲ್ಲಿ ನಿಲ್ಲಕೂಡದು. ನಾವೆಲ್ಲಿಗೆ ಹೋಗೋಣ ?" ಹೀಗೆಂದು ಹೇಳುತ್ತ ಸುತ್ತ ನಾಲ್ಕೂಕಡೆಗೂ ನೋಡಿದಳು ....ಅಲ್ಲೆಲ್ಲಾ ಕತ್ತಲು, ಒದ್ದೆ ಮತ್ತು ಒಂದು ತರಹೆ ಭೀತಿ.

"ಅಲ್ಲಿ ನೋಡು, ಮುಗುಚಿದ ಒಂದು ದೋಣಿ ಕಾಣುತ್ತೆ .... ಅಲ್ಲಿಗೆ ಹೋಗೋಣ." ಹಾಗೆಯೇ ಹೊರಟೆವು. ಕೊಳ್ಳೆಹೊಡೆದ ಪದಾರ್ಥಗಳು ಕೈಯಲ್ಲಿಯೇ ಇದ್ದವು. ಬಾಯಿ ಹಿಡಿಸಲಾರದ ಹಾಗೆ ತುಂಬಿಕೊಳ್ಳುತ್ತಿದ್ದೆವು .... ಮಳೆಯ ಹೊಡೆತ ಬಿರುಸಾಗಿತ್ತು ... ನದಿಯು ಭೋರ್ಗರೆಯುತ್ತಿತ್ತು ; ಎಲ್ಲಿಂದಲೋ ಅಣಕಿಸುವ ಸಿಳ್ಳಿನ ದನಿಯೊಂದು ಕೇಳಬರುತ್ತಿತ್ತು.... ಅಂದರೆ ಇವು ಯಾವಕ್ಕೂ ಹೆದರದ ಒಂದು ಭಾರೀ ಸಂಸ್ಥೆಯು ಈ ಪಾರ್ಥಿವ ಸಂಸ್ಥೆಗಳನ್ನೆಲ್ಲಾ ಅಣಗಿಸುವಂತೆ ತೋರಿತು. ಈ ಸಿಳ್ಳಿನ ದನಿ ನನ್ನ ಎದೆಯಲ್ಲಿ ಒಂದು ತರಹೆ ನೋವಿನ ಹೊಡೆತವನ್ನುಂಟುಮಾಡಿತು. ಆದಾಗ್ಯೂ ಹಸಿವಿನ ಬಾಧೆ ಹಿಂಗಲು ರೊಟ್ಟಿ ತಿನ್ನುತ್ತಲೇ ಹೊರಟೆ. ಆ ಹುಡುಗಿ ಸರಿಹೆಜ್ಜೆ ಹಾಕುತ್ತ ಸಾಗುತ್ತಿದ್ದಳು.

"ನಿನ್ನನ್ನು ಏನೆಂದು ಕರೆಯುತ್ತಾರೆ?" ಆಕೆಯನ್ನು ಕೇಳಿದೆ. ಏಕೆ ಕೇಳಿದೆನೆಂಬುದು ನನಗೆ ಗೊತ್ತಿಲ್ಲ.

"ನಟಾಷ" ಎಂದು ಲಘುವಾಗಿ ಹೇಳಿ, ಗಟ್ಟಿಯಾಗಿ ರೊಟ್ಟಿಯನಗಿಯುತ್ತ ಮುಂದೆ ಸಾಗಿದಳು.

ಆಕೆಯನ್ನು ದಿಟ್ಟಿಸಿ ನೋಡಿದೆ. ಏನೋ ಒಂದು ತರಹೆ ನೋವಾಯಿತು. ನನ್ನ ಮುಂದಿರುವ ಮಂಜು ಕವಿದಿರುವ ಹಾದಿಯನ್ನು ದಿಟ್ಟಿಸಿದೆ. ನನ್ನ ಅದೃಷ್ಟದ ಕರಾಳವದನ ವಿಕಟಹಾಸ್ಯದಿಂದ ಶೀತಲ ಮತ್ತು ಅರ್ಥರಹಿತ ನಗುವೊಂದನ್ನು ಬೀರುವಂತೆ ತೋರಿತು.

ಮಳೆಹನಿ ಹಲಗೆಗಳ ಮೇಲೆ ಪಟಪಟನೆ ಉದುರುವುದು ಶೋಕಪೂರಿತ ಆಲೋಚನೆಗಳು ಹುಟ್ಟುವಂತೆ ಮಾಡುತ್ತಿದ್ದವು. ಗಾಳಿಯು ಭರ್‍ರನೆ ಬೀಸಿ

ದೋಣಿಯ ಹಲಗೆಯ ಸಂದುಗಳಲ್ಲಿ ತೂರಿ ವಿಪರೀತ ಗಲಾಟೆಮಾಡುತ್ತಿತ್ತು. ಇದರಿಂದ ಚಿತ್ತವು ಚಂಚಲವಾಗುತ್ತಿತ್ತು. ನದಿಯಲೆಗಳು ದಂಡೆಗೆ ಅಪ್ಪಳಿಸುತ್ತಿದ್ದವು. ಇವುಗಳ ಶಬ್ದವಂತೂ ಸಹಿಸಲಸಾಧ್ಯವಾಗುತ್ತಿತ್ತು, ಮನಸ್ಸಿಗೆ ಬಹಳ ಭಾರವಾಗುತ್ತಿತ್ತು. ಮಳೆ, ಬಿಸಿಲು, ಗಾಳಿ, ಕೊರೆತ ಇವುಗಳಿಂದ ತಪ್ತವಾಗಿದ್ದ ಭೂಮಿಯು ಈ ನಿರಂತರ ಶಬ್ದದೊಂದಿಗೆ ತನ್ನ ಸುದೀರ್ಘ ನಿಟ್ಟುಸಿರನ್ನು ಹದವರಿತು ಬೆರೆಸುತ್ತಿತ್ತು. ನೊರೆಯೇಳುತ್ತಿದ್ದ ನದಿಯ ಮೇಲೂ, ಗಾಳಿಯು ಸುಳ್ ಎಂದು ಎಡಬಿಡದೆ ಬೀಸುತ್ತಿತ್ತು .... ತನ್ನ ಶೋಕಗೀತೆಯನ್ನು ಹಾಡುತ್ತಿತ್ತು.

ಮಗುಚಿದ ದೋಣಿಯ ಕೆಳಗೆ ನಮಗೆ ಸಿಕ್ಕ ಆಶ್ರಯ ಸಹ ಅನುಕೂಲರಹಿತವಾಗಿತ್ತು ; ಬಹಳ ಇಕ್ಕಟ್ಟು ಮತ್ತು ಒದ್ದೆ. ಚಿಕ್ಕ ಚಿಕ್ಕ ಮಳೆ ಹನಿಗಳು ಉದುರುತ್ತಿದ್ದವು. ಆಗಾಗ್ಗೆ ಗಾಳಿ ಸಹ ಒತ್ತಡದಿಂದ ನುಗ್ಗುತ್ತಿತ್ತು. ನಾವು ಮಾತನಾಡದೆ ಗಡಗಡನೆ ನಡುಗುತ್ತ ಕುಳಿತೆವು. ನಿದ್ದೆ ಮಾಡಬೇಕೆಂದು ಆಗ ನನಗೆ ನೆನಪಾಯಿತು. ನಟಾಷ ದೋಣಿಯ ಕಡೆಗೆ ಹಾಗೆಯೇ ಒರಗಿ ಒಂದು ಪುಟ್ಟ ಚೆಂಡಿನಂತೆ ಮುದುರಿಕೊಂಡಳು. ತನ್ನ ಕೈಗಳನ್ನು ಮೊಳಕಾಲುಗಳಿಗೆ ಅಪ್ಪಿ ಅದಕ್ಕೆ ಗಡ್ಡವನ್ನು ಆಸರೆಕೊಟ್ಟಳು. ಅರಳಿದ ಕಣ್ಣುಗಳಿಂದ ನದಿಯನ್ನು ಎವೆಯಿಕ್ಕದೆ ನೋಡುತ್ತಿದ್ದಳು ; ಅವಳ ಬಿಳಚು ಮುಖದ ಮೇಲೆ ಆ ಕಣ್ಣುಗಳು ಬಹಳ ದೊಡ್ಡವಾಗಿರುವಂತೆ ಭಾಸವಾಗುತ್ತಿತ್ತು. ನೀಲಿ ಗುರುತುಗಳು ಏನೋ ಒಂದು ರೀತಿಯ ಭಯ ಹುಟ್ಟಿಸುತ್ತಿದ್ದವು. ಆಕೆ ಕೊಂಚವೂ ಅಲುಗಲಿಲ್ಲ, ನಿಶ್ಚೇಷ್ಟಿತಳಾಗಿ ಬಿದ್ದಿದ್ದಳು. ನನ್ನ ಅಪರಿಚಿತ ಸಹಾಯಕಳ ಮೌನ ನನಗೆ ಹೆದರಿಕೆಯುಂಟುಮಾಡಿತು. ಅವಳೊಂದಿಗೆ ಮಾತನಾಡಬೇಕೆನಿಸಿತು, ಆದರೆ ಮಾತಿಗೆ ಹೇಗೆ ಪ್ರಾರಂಭ ಮಾಡಬೇಕೆಂಬುದು ತಿಳಿಯಲಿಲ್ಲ.

ಅವಳೇ ಮಾತನಾಡಿದಳು.

"ಜೀವನವೆಂದರೆ ಎಷ್ಟು ಕೆಟ್ಟದ್ದು !" ಸರಳವಾಗಿ, ನಿರಾಸಕ್ತಿಯಿಂದ ದೃಢತೆಯಿಂದ ಹೇಳಿದಳು.

ಆದರೆ ಇದೊಂದು ದೂರಲ್ಲ. ಈ ಶಬ್ದಗಳಲ್ಲಿ ದೂರುವಾಗ ಇರಬೇಕಾದ ಆಸಕ್ತಿಯಿರಲಿಲ್ಲ. ಈ ಬಡಜೀವ ತನ್ನ ತಿಳುವಳಿಕೆಯ ಮಟ್ಟ

ಕ್ಕನುಗುಣವಾಗಿ ಆಲೋಚಿಸಿತು – ಆಲೋಚಿಸಿ ತಾನೇ ಒಂದು ತೀರ್ಮಾನಕ್ಕೆ ಬಂದು ಅವನ್ನು ಗಟ್ಟಿಯಾಗಿ ಹೇಳಿತು. ಈ ತೀರ್ಮಾನವನ್ನು ನಿರೋಧಿಸುವುದು ನನ್ನಿಂದಾಗಲಿಲ್ಲ. ಏಕೆಂದರೆ ನನ್ನನ್ನು ನಾನೇ ನಿರೋಧಿಸಿಕೊಳ್ಳುವೆನೆಂಬ ದಿಗಿಲಿನಿಂದ. ಆದ್ದರಿಂದ ನಾನು ಸುಮ್ಮನಾದೆ, ಆಕೆ ನನ್ನನ್ನು ಗಮನಕ್ಕೆ ತಾರದೆ, ಅಲುಗಾಡದೆ ಕುಳಿತಿದ್ದಳು.

"ನಾವು ಸತ್ತರೆ .... ಅದರಿಂದೇನಾಗುತ್ತೆ .... ?" ನಟಾಷ ಮತ್ತೆ ಆರಂಭಿಸಿದಳು. ಆದರೆ ಈ ಬಾರಿ ಅವಳು ಸುದೀರ್ಘ ಆಲೋಚನೆಮಾಡಿ ನಿಧಾನವಾಗಿ ಹೇಳಿದಳು. ಈ ಮಾತುಗಳಲ್ಲಿಯೂ ಯಾರನ್ನೂ ದೂರಬೇಕೆಂಬ ಮನಸ್ಸಿಲ್ಲ. ಈ ವ್ಯಕ್ತಿ ತನ್ನ ಜೀವನದ ಸಂಭವಗಳನ್ನು ನೆನಸಿಕೊಂಡು, ತನ್ನನ್ನು ತಾನೇ ನೋಡಿಕೊಂಡು, ಜೀವನದ ಅಣಕಗಳಿಂದ ಪಾರಾಗಲು ಸಾಯುವುದೊಂದೇ ಉಪಾಯವೆಂಬ ನಿರ್ಧಾರಕ್ಕೆ ಬಂದಿತ್ತು.

ಸುಸ್ಪಷ್ಟವಾದ ಅವಳ ಆಲೋಚನಾ ಝರಿ ನನಗೆ ಬಹಳ ನೋವನ್ನುಂಟುಮಾಡಿತು. ನಾನು ಹೀಗೆಯೇ ಸುಮ್ಮನೇ ಇದ್ದಲ್ಲಿ ಅಳುತ್ತೇನೆಂದೆನಿಸಿತು .... ಹೆಂಗಸಿನೆದುರು ಅಳುವುದು ತೀರಾ ಅವಮಾನಕರ, ಏಕೆಂದರೆ ಅವಳೇ ಅಳುತ್ತಿರಲಿಲ್ಲ. ಅವಳೊಡನೆ ಮಾತನಾಡಬೇಕೆಂದು ಸಂಕಲ್ಪಿಸಿದೆ.

"ನಿನ್ನನ್ನು ಹೊಡೆದವರಾರು ?" ನಾನು ಕೇಳಿದೆ. ಆ ಹೊತ್ತಿನಲ್ಲಿ ಅದಕ್ಕಿಂತಲೂ ತಿಳುವಳಿಕೆಯ ಅಥವಾ ಸೂಕ್ಷ್ಮ ಪ್ರಶ್ನೆಯಲ್ಲದೆ ಬೇರಾವುದೂ ನನಗೆ ಹೊಳೆಯಲಿಲ್ಲ.

"ಪಾಷ್ಕಾ ಇಷ್ಟೆಲ್ಲ ಮಾಡಿದ್ದು" ಭಾರವಾದ ಮತ್ತು ನೀರಸವಾದ ದನಿಯಲ್ಲಿ ಹೇಳಿದಳು.

"ಅವನಾರು ?"

"ನನ್ನ ನಲ್ಲ – ಅವನೊಬ್ಬ ರೊಟ್ಟಿ ತಯಾರಿಕ."

"ಹೀಗೆ ಯಾವಾಗಲೂ ಅವನು ಹೊಡೆಯುತ್ತಿದ್ದನೋ ?"

"ಕುಡಿದಾಗಲೆಲ್ಲ ಹೀಗೆ ಹೊಡೆಯುತ್ತಿದ್ದ - ಯಾವಾಗಲೂ"

ತಕ್ಷಣ ನನ್ನ ಕಡೆಗೆ ತಿರುಗಿ ತನ್ನ ಮತ್ತು ಪಾಷ್ಕಾಗೆ ಇದ್ದ ಸಂಬಂಧದ ಬಗ್ಗೆ ಹೇಳಿಕೊಳ್ಳಲು ಮೊದಲುಮಾಡಿದಳು. 'ಅವನೊಬ್ಬ ಕೆಂಪುಮೀಸೆಯ ರೊಟ್ಟಿ ತಯಾರಿಕ, ಬಾಂಜೋ ವಾದ್ಯವನ್ನು ಚೆನ್ನಾಗಿ ನುಡಿಸುತ್ತಿದ್ದ. ಅವ

ಳನ್ನು ಆಗಾಗ್ಗೆ ಅವನು ನೋಡಲು ಬರುತ್ತಿದ್ದುದರಿಂದ ಅವಳಿಗೆ ಬಹಳ ಸಂತೋಷವಾಯಿತು. ಅವನು ಋಷಿಭಾಷೆಯ ಮನುಷ್ಯ. ಮೇಲಾಗಿ ಶುಭ್ರಬಟ್ಟೆಗಳನ್ನು ಹಾಕುತ್ತಿದ್ದ. ಅವನ ಮಖಮಲ್ಲಿನ ಜಾಕೆಟ್‌ಗೆ ೧೫ ರೂಬಲ್ ಬೆಲೆಯಾಗುತ್ತಿತ್ತು. ಅವನ ಬೂಟ್ಸ್‌ಗಳು ಕನ್ನಡಿಯಂತೆ ಮಿರುಗುತ್ತಿದ್ದವು. ಈ ಕಾರಣದಿಂದ ಅವಳು ಅವನಲ್ಲಿ ಅನುರಕ್ತಳಾದಳು. ಇತರ ಸ್ನೇಹಿತರು ಇವಳಿಗೆ ತಿಂಡಿ ತಿನಸು ಮತ್ತು ರಿಬ್ಬನ್, ಟೇಪ್‌ಗಳನ್ನು ಕೊಂಡುಕೊಳ್ಳಲು ಹಣ ಕೊಡುತ್ತಿದ್ದರು. ಪಾಷ್ಕಾ ಇವಳ ಗೆಳೆಯನಾದ್ದರಿಂದ ಆ ಹಣವನ್ನೆಲ್ಲಾ ಕಿತ್ತುಕೊಂಡು ಹೋಗುತ್ತಿದ್ದ. ಈ ಹಣದಿಂದಲೇ ಕುಡಿದು ಇವಳನ್ನೇ ಹೊಡೆಯುತ್ತಿದ್ದ; ಆದರೆ ಇದನ್ನೂ ಹೇಗಾದರೂ ಸಹಿಸಬಹುದಾಗಿತ್ತು. ಅವನು ಅವಳ ಕಣ್ಣೆದಿರೇ ಬೇರೆ ಹುಡುಗಿಯರ ಬೆನ್ನುಬೀಳುತ್ತಿದ್ದ.

"ನೋಡು, ಅದು ಎಂತಹ ಅಪಮಾನಕರವಾದ್ದು. ನಾನು ಇತರ ಹುಡುಗಿಯರಿಗಿಂತ ಕಾಡಾಗಿಲ್ಲ. ನೀಚಕೃತಿಯಿಂದ ಅವನು ನನ್ನನ್ನು ಅಣಕಿಸುವಂತೆ ತೋರಿತು. ನಿನ್ನೆಯಲ್ಲ ಮೊನ್ನೆ ದಿನ ನನ್ನ ಒಡತಿಯಿಂದ ರಜ ಪಡೆದು ಸುತ್ತಲು ಹಾಗೆ ಹೊರಟೆ. ಹಾಗೆಯೇ ಅವನ ಮನೆಗೆ ಹೋದೆ. ಅವನ ಪಕ್ಕದಲ್ಲಿ ಡಿಮ್ಕಾ ಕುಳಿತಿದ್ದಳು, ಕಂಠಪೂರ್ತಿಯಾಗಿ ಕುಡಿದು ಅವನೂ ಸಹ ಅರ್ಧಸಮುದ್ರಕ್ಕಿಂತ ಹೆಚ್ಚಾಗಿಯೇ ಕುಡಿದಿದ್ದ. ನಾನು ಹೇಳಿದೆ 'ಶುದ್ಧಪಾತಕಿ ನೀನು!' ಇದಕ್ಕೆ ನನಗೆ ಅವನು ಪೂರಾ ಏಟು ಕೊಟ್ಟ. ಕಾಲಿನಿಂದೊದೆದು ಕೂದಲು ಹಿಡಿದು ದರದರನೆ ಎಳೆದ. ಈ ಕಥೆ ಇಷ್ಟಕ್ಕೇ ನಿಂತಿದ್ದರೆ ಚೆನ್ನಾಗಿತ್ತು. ನನ್ನ ಬಟ್ಟೆಬರೆಗಳನ್ನು ಹರಿದುಹಾಕಿದ, ಮಣ್ಣು ಮಾಡಿದ. ನನ್ನ ಒಡತಿಯ ಎದುರು ನಾನು ಹೇಗೆ ನಿಲ್ಲಲಿ? ನನ್ನ ಲಂಗ, ಜಾಕೆಟ್ ಎಲ್ಲಾ ಹಾಳುಮಾಡಿದ್ದಾನೆ .... ಅವೆರಡೂ ಹೊಸವು; ಅವಕ್ಕೆ ಐದು ರೂಬಲ್ ಕೊಟ್ಟಿದ್ದೆ .... ತಲೆಗೆ ಸುತ್ತಿದ್ದ ಬಣ್ಣದ ವಸ್ತ್ರವನ್ನೂ ಹರಿದು ಹಾಕಿದ್ದಾನೆ. ಅಯ್ಯೋ ದೇವರೇ! ಇನ್ನೇನು ಗತಿ?" ಹಟಾತ್ತಾಗಿ ಕೀರಲು ದನಿಯಲ್ಲಿ ಗೋಳಿಡಲಾರಂಭಿಸಿದಳು.

ಗಾಳಿಯು ಒಂದೆ ಸಮನಾಗಿ ಅರಚಿತು. ಚಳಿಯ ಕೊರತ ತಡೆಯಲಸಾಧ್ಯವಾಯಿತು. ನನ್ನ ಹಲ್ಲುಗಳು ಮೇಲಿಂದ ಕೆಳಗೆ ನರ್ತನಮಾಡತೊಡಗಿದವು. ಆಕೆ ಚಳಿಯನ್ನು ಹೋಗಲಾಡಿಸಲು ಬಲವಾಗಿ ಬಿಗಿದಪ್ಪಿ

ದಳು. ಆಕೆಯ ಕಣ್ಣುಗಳ ಹೊಳಪನ್ನು ಆ ಕತ್ತಲಿನಲ್ಲಿ ನೋಡಬಹುದಾಗಿತ್ತು.

"ಗಂಡಸರಾದ ನೀವು ಎಂಥಾ ನೀಚರು!" ಒಂದು ಒಲೆಯಲ್ಲಿ ಹಾಕಿ ನಿಮ್ಮನ್ನೆಲ್ಲಾ ಸುಟ್ಟುಬಿಡುತ್ತೇನೆ, ನಿಮ್ಮನ್ನು ತುಂಡುತುಂಡಾಗಿ ಕತ್ತರಿಸಿ ಹಾಕುತ್ತೇನೆ. ನಿಮ್ಮಲ್ಲಿ ಯಾವನಾದರೂ ನಾಯುತ್ತಿದ್ದರೆ ಅವನ ಬಾಯಲ್ಲಿ ಉಗುಳುತ್ತೇನೆ, ಅವನ ಮೇಲೆ ತಿಲಮಾತ್ರವಾದರೂ ಕರುಣೆದೋರುವದಿಲ್ಲ. ನಾಚಿಕೆಗೆಟ್ಟ ನಾಯಿಗಳು! ಬಾಲ ಗುಂಡಾಡಿಸುವ ನೆಕ್ಕುವ ನಾಯಿಗಳಂತೆ ನಮ್ಮ ಸುತ್ತ ಅಲೆಯುವಿರಿ. ಮೂರ್ಖರಾದ ನಾವು ನಮ್ಮ ದೇಹ ಮತ್ತು ಮನಸ್ಸನ್ನು ನಿಮಗೊಪ್ಪಿಸುವೆವು, ಸರಿ, ಅಲ್ಲಿಂದ ನಮ್ಮ ಕಥೆ ಪೂರೈಸಿತು! ಆ ಕ್ಷಣವೇ ನಿಮ್ಮ ಕಾಲಿನಿಂದ ನಮ್ಮನ್ನು ತುಳಿಯುವಿರಿ.... ಹ್ಯಾವವಿಲ್ಲದ ಪೋಲಿಗಳು!"

ತಡೆಬಡೆಯಿಲ್ಲದೆ ಒಂದೇ ಸಮನಾಗಿ ಶಪಿಸಿದಳು, ಆದರೆ ನಾನು ಕೇಳಿದ ಈ ಭರ್ತ್ಸನದಲ್ಲಿ ಬಿಸಿಯಿಲ್ಲ, ಅಸೂಯೆಯಿಲ್ಲ. ವಿಷಯಕ್ಕನುಗುಣವಾದ ಧಾಟಿಯಿರಲಿಲ್ಲ. ವಿರಳಿತಗಳಿಲ್ಲದೆ ಶಬ್ದಪ್ರವಾಹವು ಸುಗಮವಾಗಿ ಸಾಗಿತ್ತು.

ಆದಾಗ್ಯೂ ಅವಳ ಮಾತುಗಳು ನನ್ನ ಮನಸ್ಸಿನ ಮೇಲೆ ಬಹಳ ಪರಿಣಾಮವನ್ನುಂಟು ಮಾಡಿದವು. ನಾನು ಎಂತೆಂಥ ವಾಗ್ಮಿಗಳ ಪರಿಣಾಮಪೂರಿತ ಭಾಷಣಗಳನ್ನು ಕೇಳಿದ್ದೇನೆ ಮತ್ತು ಪುಸ್ತಕಗಳನ್ನು ಓದಿದ್ದೇನೆ, ಇಂದಿಗೂ ಓದುತ್ತಿದ್ದೇನೆ. ಆದರ ಇವು ಯಾವೂ ಅವಳ ಆ ಮಾತುಗಳಿಗೆ ಸಾಟಿಯಾಗಲಾರವು. ಸಾಯುವ ಮನುಷ್ಯನ ನರಳುವಿಕೆ ಮತ್ತು ಸಂಕಟ, ಸಾವಿನ ಅತಿ ಸೂಕ್ಷ್ಮ ವರ್ಣನೆಯ ಬರಹಕ್ಕಿಂತ ಹೃದಯಂಗಮವಾಗಿರುತ್ತೆ ಮತ್ತು ಸಹಜವಾಗಿರುತ್ತೆ.

ಚಳಿಯ ಕೊರತಕ್ಕಿಂತ ನಟಾಷಳ ಮಾತುಗಳು ನನ್ನ ಮೈಯಲ್ಲಿ ನಾಟಿದವು. ಹಲ್ಲು ಕಡಿಯುತ್ತ ನಾನು ಹಾಗೆಯೇ ನರಳಿದೆ.

ಅದೇ ಕ್ಷಣದಲ್ಲಿ ಎರಡು ಪುಟ್ಟ ತೋಳುಗಳು ನನ್ನನ್ನು ಆವರಿಸಿದವು. ಒಂದು ನನ್ನ ಕೊರಳನ್ನು ಸುತ್ತುಹಾಕಿತು, ಇನ್ನೊಂದು ನನ್ನ ಮುಖದ ಮೇಲೆ ಮೆತ್ತಗೆ ಬಿದ್ದಿತು – ಸ್ನೇಹಮಯ, ಕುತೂಹಲಪೂರಿತ, ಮೃದುಮಧುರ ಶಬ್ದಗಳು ನನ್ನ ಕಿವಿಯ ಮೇಲೆ ಬಿದ್ದವು.

"ಹೀಗೇಕೆ ನರಳುತ್ತೀಯೆ ?"

ನಟಾಷಳ ಬಾಯಿಂದ ಈ ಮಾತುಗಳು ಹೊರಬಿದ್ದಿಲ್ಲವೆಂದೂ, ಇತರ ರಾರೋ ಈ ಮಾತುಗಳನ್ನು ಆಡಿರಬೇಕೆಂದು ನಾನು ನಂಬಲು ಸಿದ್ಧನಾಗಿದ್ದೆ. ಏಕೆಂದರೆ ಆಗ ತಾನೇ ನಟಾಷ ಗಂಡಸರೆಲ್ಲರೂ ನೀಚರೆಂದೂ, ಅವರ ವಿನಾಶ ವಾಗಬೇಕೆಂದೂ, ಹೇಳಿದ್ದನ್ನು ಕೇಳಿದ್ದೆ. ಆದರೆ ಅವಳೇ ಮಾತನಾಡಿದವ ಳಾಗಿದ್ದಳು. ಅವಳೇ ಪ್ರಶ್ನೆಗಳ ಸುರಿಮಳೆ ಹಾಕಿದ್ದಳು.

"ಯಾತರಿಂದ ಬಳಲುತ್ತಿರುವೆ ? ಚಳಿಯಾಗುತ್ತಿದೆಯೇ ? ಸೆಟೆದು ಹೋಗಿರುವೆಯಾ ? ಗೂಬೆಯಂತೆ ಹಾಗೇಕೆ ಕೂತುಕೊಂಡಿದ್ದೀಯ ? ಏಕೆ, ಚಳಿ ಆಗುತ್ತದೆಂದು ಆಗಲೇ ನನಗೆ ಹೇಳಬಾರದಾಗಿತ್ತೇನು ? ಬಾ ... ಕಾಲುಚಾಚಿ ನೆಲದ ಮೇಲೆ ಮಲಗು, ನಾನೂ ನಿನ್ನ ಪಕ್ಕದಲ್ಲಿ ಮಲಗು ತ್ತೇನೆ .... ಹಾಗೆ ! ಈಗ ಹೇಗಿವೆ ? ನಿನ್ನ ತೋಳುಗಳನ್ನು ನನ್ನ ಕತ್ತಿಗೆ ಸುತ್ತುಹಾಕು .... ಇನ್ನೂ ಸ್ವಲ್ಪ ಬಿಗಿಯಾಗಿ .... ಈಗ ಹೇಗಿದೆ ? ಸ್ವಲ್ಪ ಹೊತ್ತಿನಲ್ಲಿ ನಿನಗೆ ಬೆಚ್ಚಗಾಗುತ್ತೆ .... ಆಮೇಲೆ ನಾವು ಬೆನ್ನಿಗೆ ಬೆನ್ನು ಹಚ್ಚಿ ಮಲಗೋಣ .... ರಾತ್ರಿ ಬಹಳ ಜಾಗ್ರತೆಯಾಗಿ ಕಳೆದುಹೋಗುತ್ತೆ, ಕಳೆ ಯತ್ತೋ ಇಲ್ಲವೋ ನೀನೇ ನೋಡುವಿ .... ನೀನೂ ಕುಡಿಯುತ್ತೀಯಾ ....? ನಿನ್ನನ್ನು ಕೆಲಸದಿಂದ ವಜಾಮಾಡಿದರೆ ? ಪರವಾಯಿಲ್ಲ, ಯೋಚನೆ ಮಾಡ ಬೇಡ."

ಹಾಗೆ ಆಕೆ ನನ್ನನ್ನು ಸಂತೈಸಿದಳು, ನನಗೆ ಉತ್ತೇಜನಕೊಟ್ಟಳು. ನನಗೆ ಭಯಂಕರ ವಿಪತ್ಸಂಭವಿಸಲಿ ! ಇದೊಂದೇ ವಿಷಯದಲ್ಲಿ ಅದೆಂತಹ ವಿರೋಧಾಭಾಸ ! ಸ್ವಲ್ಪ ಯೋಚಿಸಿ ! ಇದೇ ಕ್ಷಣದಲ್ಲಿ, ಮಾನವಕೋಟಿಯ ಅದೃಷ್ಟ, ಸಾಮಾಜಿಕ ಪುನರ್ವ್ಯವಸ್ಥೆ, ರಾಜಕೀಯ ಕ್ರಾಂತಿಗಳು ಇಂತಹ ನಿಗೂಢ ವಿಷಯಗಳ ಮೇಲೆ ಅಸಹ್ಯವಾಗಿ ಬರೆದ ಮಹಾಗ್ರಂಥಗಳ ವಿಷಯ ವಾಗಿ ಓದಿದ್ದನ್ನು ನಾನು ಜ್ಞಾಪಿಸಿಕೊಂಡು ಮೆಲಕುಹಾಕುತ್ತಿದೆ. ಈ ಗ್ರಂಥ ಕರ್ತರಿಗೆ ತಾವು ಬರೆದಿರುವ ವಿಷಯ ತಮಗೇ ತಿಳಿಯದು. ಇದೇ ಕ್ಷಣದಲ್ಲಿ ನಾನೊಬ್ಬ 'ಗಣ್ಯ ಸಮಾಜ ಸುಧಾರಕ' ನಾಗಬೇಕೆಂದು ಯೋಚಿಸುತ್ತಿದ್ದೆ. ನನ್ನ ಅಭೀಷ್ಟದಲ್ಲಿ ಅರ್ಧಭಾಗದಷ್ಟನ್ನು ಆಗಲೇ ಸಾಧಿಸಿದ್ದಾಯಿತೆಂದು ನಾನು ಭಾವಿಸಿದ್ದೆ ; ಬಾಳಲು ಅಧಿಕಾರ ನನಗಿದೆಯೆಂದು ಸ್ವಪ್ನಲೋಕದಲ್ಲಿ ವಿಹರಿ

ಸಿಪ್ಪೆ, ಐತಿಹಾಸಿಕ ವ್ಯಕ್ತಿಯಾಗುವ ವಿಶಿಷ್ಟಯೋಗ್ಯತೆಗಳು ನನ್ನಲ್ಲಿವೆಯೆಂದು ತಿಳಿದಿದ್ದೆ. ತನ್ನ ದೇಹದಿಂದ ನನ್ನ ದೇಹವನ್ನು ಶಾಖಗೊಳಿಸಿದ ಹೆಂಗಸೊಬ್ಬಳು ಇಲ್ಲಿದ್ದಾಳೆ. ಸಮಾಜಬಾಹಿರಳಾದ, ಎಲ್ಲರಿಂದಲೂ ಧಿಕ್ಕರಿಸಲ್ಪಟ್ಟ ಪ್ರಾಣಿ. ನನಗೆ ಹೀಗೆ ಸಹಾಯ ದೊರಕೀತೆಂದು ನಾನು ಯೋಚಿಸುವಷ್ಟರಲ್ಲಿ ಈಕೆ ನನಗೆ ಸಹಾಯ ನೀಡಿದ್ದಳು. ಇದೇ ಸಂದರ್ಭದಲ್ಲಿ ಬೇರೆಯವರಿಗೆ ಸಹಾಯ ಮಾಡಬೇಕೆಂದು ನನಗೆ ಹೊಳೆದಿದ್ದರೂ, ಯಾವ ರೀತಿ ಸಹಾಯ ಮಾಡಬೇಕೆಂಬುದು ನನಗೆ ಖಂಡಿತವಾಗಿಯೂ ಗೊತ್ತಾಗುತ್ತಿರಲಿಲ್ಲ.

ಛಿ! ಇವೆಲ್ಲವೂ ಸ್ವಪ್ನಸಂಭವಗಳು- ಅಸಹ್ಯ ಮತ್ತು ಬೇಸರ ಸ್ವಪ್ನಗಳು.

ಛಿ! ಛಿ!! ನನಗೆ ಆ ರೀತಿಯಾಗಿ ಆಲೋಚಿಸಲು ಸಾಧ್ಯವೇ ಇರಲಿಲ್ಲ. ಮಳೆಹನಿಗಳು ನನ್ನಮೇಲೆ ಇನ್ನೂ ಬೀಳುತ್ತಲೇ ಇದ್ದವು. ಆ ಹೆಂಗಸು ನನ್ನನ್ನು ಬಲವಾಗಿ ಅಪ್ಪಿಕೊಳ್ಳುತ್ತಿದ್ದಳು. ಅವಳ ಬಿಸಿಯುಸಿರು ನನ್ನ ಮುಖದ ಮೇಲೆ ಹಿತವಾಗಿ ಆಡುತ್ತಿತ್ತು - ಆದರೆ ಅದು ಕೊಂಚ ವೋಡ್ಕಾದಿಂದ ಕೂಡಿತ್ತು. ಅದು ನನಗೆ ಒಳ್ಳೆಯದನ್ನೇ ಮಾಡಿತು. ಗಾಳಿ ಅರಚಿತು, ಆರ್ಭಟಿಸಿತು, ದೋಣಿ ಮಗಚುವಂತೆ ಗಾಳಿ ಹೊಡೆಯುತ್ತಿತ್ತು, ಅಲೆಗಳು ತೀರವನ್ನು ಅಪ್ಪಳಿಸುತ್ತಿದ್ದವು. ಇಬ್ಬರೂ, ಒಬ್ಬರನ್ನೊಬ್ಬರು ಅಪ್ಪಿದ್ದೆವು. ಚಳಿಯಿಂದ ನಮ್ಮ ದೇಹಗಳು ಗಡಗಡನೆ ನಡುಗುತ್ತಿದ್ದವು ಇವೆಲ್ಲವೂ ನಿಜ, ಆದರೆ ನಿಜವಿರುವ ಈ ಭೀಭತ್ಸ ಭೀಕರ ಸ್ವಪ್ನವನ್ನು ಯಾರೂ ನಂಬದಾದರು.

ಆದರೆ ನಟಾಷ ಆಗ ಏನೇನೋ ಮಾತನಾಡುತ್ತಿದ್ದಳು, ಕೇವಲ ಹೆಂಗಸರಿಂದ ಸಾಧ್ಯವಾದ ನಯದಿಂದ, ದಯಾದೃಷ್ಟಿಯಿಂದ ಮಾತನಾಡುತ್ತಿದ್ದಳು. ಅವಳ ಆ ಮೃದುಸ್ವರ ಮತ್ತು ದಯಾಪೂರಿತ ಶಬ್ದಗಳ ಪ್ರಭಾವದಿಂದ ನನ್ನಲ್ಲೊಂದು ಚಿಕ್ಕ ಬೆಂಕಿಯು ಸ್ಫುಟವಾಗುವಂತೆ ತೋರಿತು, ಇದರ ಪರಿಣಾಮವಾಗಿ ನನ್ನ ಎದೆಯಲ್ಲಿನ ಯಾವದೋ ಒಂದಂಶವು ಕರಗುವಂತೆ ಭಾಸವಾಯಿತು.

"ಬಾ, ಬಾ, ಪುಟ್ಟಕೂಸೇ, ಸಾಕುಮಾಡು ನಿನ್ನ ಪೇಚಾಟವನ್ನ! ದೇವರು ನಿನಗೆ ಇನ್ನೊಂದು ಅವಕಾಶ ಕಲ್ಪಿಸಿ ಕೊಡುತ್ತಾನೆ ... ನೀನು ಮೊದಲಿನಂತೆ ಸರಿಹೊಂದಿ ನಿನ್ನ ಸ್ಥಳದಲ್ಲಿ ನೀನು ನಿಲ್ಲುವೆ .... ಆಗ ಎಲ್ಲವೂ

ಸರಿಯಾಗುವುದು.''

ಹಾಗೆ .ಹೇಳುತ್ತ ಆಕೆ ನನ್ನನ್ನು ಮುತ್ತಿಡುತ್ತಿದ್ದಳು .... ಅಂತಹ ಎಷ್ಟೋ ಮುತ್ತುಗಳನ್ನು ನನಗೆ ಕೊಟ್ಟಳು .... ಸುಡಸುಡುವ ಮುತ್ತುಗಳು .... ಉಚಿತವಾಗಿ, ಯಾವ ಪ್ರತಿಫಲಾಪೇಕ್ಷೆಯೂ ಇಲ್ಲದೆ.

ಹೆಂಗಸಿನಿಂದ ಹೊಂದಿದ ಮುತ್ತುಗಳಲ್ಲಿ ಇವೇ ಮೊಟ್ಟ ಮೊದಲನೆಯವು, ಇವೇ ಅತ್ಯುತ್ತಮವಾದವು. ಏಕೆಂದರೆ ಆಮೇಲೆ ನಾನು ಹೊಂದಿದ ಮುತ್ತುಗಳಿಗೆ ನಾನು ವಿಪರೀತ ಬೆಲೆ ಕೊಡಬೇಕಾಯಿತು.

''ಸುಮ್ಮನೆ ಹಾಗೆ ಪೇಚಾಡಬೇಡ ! ನಿನಗೆ ನಾಳೆ ಬೇರೆಲ್ಲಿಯೂ ಸ್ಥಳ ದೊರೆಯದೆ ಹೋದರೆ ನಾನು ನಿನಗೆ ಬೇರೆ ಏರ್ಪಾಡು ಮಾಡುತ್ತೇನೆ." ಅವಳ ಹಿತನುಡಿಗಳು ಯಾವದೋ ಸ್ವಪ್ನಲೋಕದಿಂದ ಬಂದು ನನ್ನ ಕಿವಿಗಳ ಮೇಲೆ ಬಿದ್ದಂತೆ ತೋರಿತು ....

ಉಷಃಕಾಲದವರೆಗೂ ನಾವು ಹಾಗೆಯೇ ಮಲಗಿದ್ದೆವು. ಬೆಳಗಿನ ಜಾವದ ಹೊತ್ತಿಗೆ ಮಗುಚಿದ ಮುರುಕು ದೋಣಿಯಿಂದ ಎದ್ದು ಊರಿನೊಳಕ್ಕೆ ಹೋದೆವು .... ಸ್ನೇಹದಿಂದ ಇಬ್ಬರೂ ಬೀಳ್ಕೊಂಡೆವು. ಆಮೇಲೆ ನಾವು ಇಬ್ಬರೂ ಭೇಟಿಯಾಗಲಿಲ್ಲ. ಅವಳನ್ನು ಆರು ತಿಂಗಳ ಕಾಲ ಹುಡುಕಿದೆ. ಅವಳು ವಾಸವಾಗಿರಬಹುದಾದಂಥ, ಸಿಗಬಹುದಾದಂಥ ಸ್ಥಳಗಳಲ್ಲೆಲ್ಲ ಶಡ ಕಾಡಿದೆ. ಆ ಚಳಿರಾತ್ರಿಯನ್ನು ನನ್ನೊಂದಿಗೆ ಕಳೆದ ದಯಾಮಯಿ ನಟಾಷಾಳಿಗೆ ಎಷ್ಟೆಷ್ಟೋ ಹುಡುಕಿದೆ, ಅವಳು ಸಿಕ್ಕಲಿಲ್ಲ.

ಅವಳು ಸತ್ತೇಹೋಗಿದ್ದರೆ - ಹಾಗೆ ಆಗುವುದೇ ಅವಳಿಗೆ ಒಳ್ಳೆಯದು - ಅವಳ ಆತ್ಮಕ್ಕೆ ಶಾಂತಿ ದೊರೆಯಲಿ ! ಅವಳು ಬದುಕಿದ್ದರೂ ಸರಿಯೆ .... 'ಅವಳ ಆತ್ಮಕ್ಕೆ ಶಾಂತಿ ದೊರೆಯಲಿ !' ಎಂದೇ ಹೇಳುತ್ತೇನೆ. ತಾನೊಬ್ಬ ಪಾಪಿ ಎಂಬರಿವು ಅವಳಿಗಾಗದಿರಲಿ .... ಏಕೆಂದರೆ ಬಾಳನ್ನು ಬಾಳಬೇಕಾದರೆ ಅದೊಂದು ಹೆಚ್ಚಿನ ಮತ್ತು ನಿರರ್ಥಕ ತೊಂದರೆಯೇ ಸರಿ.

——:——

# ತೆಪ್ಪದ ಮೇಲೆ *

ಅನುವಾದಕ : ಸಾಡಿಗೇರ ಕೃಷ್ಣರಾಯ

ದಟ್ಟ ಮೋಡಗಳು ನಿದ್ರಿಸುತ್ತಿದ್ದ ನದಿಯ ಆಚೆ ಇಣಿಕಿ ಹಾಕುತ್ತ ಪ್ರತಿ ಕ್ಷಣಕ್ಕೂ ಹತ್ತಿರ ಹತ್ತಿರ ಬರುತ್ತ ಇನ್ನೂ ಹೆಚ್ಚು ದಟ್ಟವಾಗತೊಡಗಿದವು. ಅತಿ ದೂರದಲ್ಲಿ ಅವುಗಳ ಅಕ್ರಮವಾದ ಬೂದು ಬಣ್ಣದ ಅಂಚುಗಳು ಪ್ರವಾಹದಿಂದ ಉಬ್ಬಿದ ನದಿಯಮಣ್ಣು ನೀರನ್ನು ಮುತ್ತಿಕ್ಕುತ್ತಿದ್ದವು. ನದಿಯ ಮತ್ತು ತೆಪ್ಪದ ಮಾರ್ಗವನ್ನು ಅವು ಅಡ್ಡಿಪಡಿಸುವಂತೆ ತೋರುತ್ತಿತ್ತು.

ಝುರಿಯು ಈ ಗೋಡೆಗೆ ಅಪ್ಪಳಿಸುತ್ತ ನಿರರ್ಥಕವಾಗಿ ' ಸುಂಯ್ ' ಗುಟ್ಟುತ್ತಿತ್ತು. ಇಕ್ಕೆಡೆಗಳಲ್ಲಿ ನೀರನ್ನು ಚೆಲ್ಲಿ ಭರದಿಂದ ಸಾಗುತ್ತಿತ್ತು.

ತೆಪ್ಪವು ಮೋಡವಾದ ಮೋಡಗಳ ಮಧ್ಯೆ ದಾರಿ ಬಿಡಿಸಿಕೊಂಡು ಸಾಗಿತ್ತು. ನದಿಯ ದಂಡೆಗಳು ಕಾಣುತ್ತಿಲ್ಲ : ಕತ್ತಲು ಅವನ್ನು ಆವರಿಸಿದೆ. ಪ್ರವಾಹದ ಅಲೆಗಳು ಅವನ್ನು ಕೊಚ್ಚಿ ಮುಚ್ಚಿದಂತೆ ಭಾಸವಾಗುತ್ತಿತ್ತು.

ಕೆಳಗಿನ ನದಿ ಸಮುದ್ರಕ್ಕೆ ವಿಶಾಲವಾಗಿ ಸೇರುತ್ತಿತ್ತು. ಮೇಲಣ ಆಕಾಶವು ದಟ್ಟವಾದ ಕರಿಮೋಡಗಳಿಂದ ಸೀಸದಂತೆ ಭಾರವಾಗಿತ್ತು. ‡

---

* On the Raft.

‡ ಇದು ಓಲ್ಗಾ ನದಿ. ಇಲ್ಲಿ ತೆಪ್ಪಗಳು ಸಾಲುಸಾಲಾಗಿ ಹೋಗುವದನ್ನು ಕಥಾಲೇಖಕನು ವರ್ಣಿಸಿದ್ದಾನೆ. ಕತೆಯ ಮುಂದಿನ ಭಾಗದಲ್ಲಿ ಹೇಳಲಾಗಿರುವ ಸಹೋದರಮಂಡಲಿ ಅಂದರೆ ಡೌಖೋಬೊರಿ ಜನಗಳು. ಇವರು ರಷ್ಯನ್ ಅಧಿಕಾರಿಗಳ ಅತ್ಯಾಚಾರಗಳನ್ನು ತಾಳಲಾರದೆ ಕೆನಡಾಕ್ಕೆ ಹಿಂಡುಹಿಂಡಾಗಿ ತೆರಳುತ್ತಿದ್ದಾರೆ.

ಈ ಗಾರ್ಕೀ ಕತೆಯ ಸಾಮಾಜಿಕ ಹಿನ್ನೆಲೆಯನ್ನು ಅರ್ಥಮಾಡಿಕೊಳ್ಳಬೇಕಾದರೆ ಒಂದಂಶವನ್ನು ನೆನಪಿನಲ್ಲಿಟ್ಟುಕೊಳ್ಳಬೇಕು. ಏನಂದರೆ, ಪುರಾತನ ಸಾಮಾನ್ಯ ವರ್ಗದ ರಷ್ಯನರು ಎಳೆವಯಸ್ಸಿನಲ್ಲಿಯೇ ತಮ್ಮ ಮಕ್ಕಳಿಗೆ ಮದುವೆ ಮಾಡುತ್ತಿದ್ದರು. ಸೊಸೆಯ ಮೇಲೆ ತಮಗೆ ಸಂಪೂರ್ಣ ಅಧಿಕಾರವಿದೆಯೆಂದು ಭಾವಿಸಿದ್ದರು. ಕೊನೆಕೊನೆಗೆ ಈ ಪದ್ಧತಿಯು ಬಹಳ ಮಟ್ಟಿಗೆ ನಶಿಸುತ್ತಾ ಹೋಗಿದೆ. ಆದರೂ ಇದು ಸಂಪೂರ್ಣವಾಗಿ ಅಳಿದಿಲ್ಲವೆಂಬುದನ್ನು ಪ್ರತಿಭಾವಂತ ಗಾರ್ಕಿ ಈ ಕತೆಯಲ್ಲಿ ಚೆನ್ನಾಗಿ ನಿರೂಪಿಸಿದ್ದಾನೆ.

ಈ ಮಸುಕಾದ ಬೂದುಬಣ್ಣದ ಚಿತ್ರದಲ್ಲಿ ಯಾವ ತರಹೆಯ ವಾತಾವರಣವೂ ಗೋಚರವಾಗುವದಿಲ್ಲ.

ತೆಪ್ಪವು ತೀವ್ರವಾಗಿ ಪ್ರವಾಹದ ಹತ್ತಿರ ಸಾಗುತ್ತಿದೆ. ಹಟಾತ್ತಾಗಿ ಆ ಕತ್ತಲಲ್ಲಿ ಹಡಗೊಂದು ತನ್ನ ಕೊಳವೆಗಳಿಂದ ಚಿನ್ನಾಟವಾಡುವ ಕಿಡಿಗಳನ್ನು ಉಗುಳುತ್ತಿದೆ. ಸಮುದ್ರದ ನೀರನ್ನು ಹಡಗಿನ ದೊಡ್ಡ ತಿರುವು ಗಾಲಿಗಳು ಕಡೆಯುತ್ತಿವೆ.

ಅದರ ಮುಂಬದಿಯ ದೀಪಗಳು ಪ್ರತಿ ನಿಮಿಷದಲ್ಲಿಯೂ ದೊಡ್ಡದಾಗಿ ಹೊಳಪಾಗಿ, ಪ್ರಕಾಶ ಬೀರುತ್ತಿವೆ. ಧ್ವಜಸ್ತಂಭದ ಮೇಲಿನ ಲಾಂದ್ರವು ಪಕ್ಕದಿಂದ ಪಕ್ಕಕ್ಕೆ ಹೊರಳುತ್ತ ಕತ್ತಲನ್ನು ನೋಡಿ ಅರ್ಥಗರ್ಭಿತವಾಗಿ ಕಣ್ಣುಮಿಟುಕಿಸುವಂತೆ ತೋರುತ್ತಿದೆ. ಆ ಪ್ರದೇಶವೆಲ್ಲ ನೀರಿನ ಉಬ್ಬರದ ದನಿಯಿಂದಲೂ ಯಂತ್ರಗಳ ಥಡ್-ಥಡ್ ಶಬ್ದದಿಂದಲೂ ತುಂಬಿಹೋಗಿದೆ.

'ಮುಂದೆ ನೋಡಲ್ಲಿ' ಎಂಬ ಶಬ್ದವು ತೆಪ್ಪದಿಂದ ಕೇಳಬಂದಿತು. ಈ ದನಿಯು ವಿಶಾಲ ಎದೆಯೊಂದರಿಂದ ಬಂದಿರಬಹುದೆಂದು ಊಹಿಸಬಹುದಾಗಿದೆ.

ಇಬ್ಬರು ಕೊಂಚ ದೂರ ದೂರವಾಗಿ ನಿಂತಿದ್ದಾರೆ. ಇಬ್ಬರ ಕೈಯಲ್ಲಿ ಒಂದೊಂದು ಗಳು ಇವೆ. ತೆಪ್ಪ ನಡೆಸುವ ಸಾಧನಗಳಿವು. ತೆಪ್ಪದ ಮಾಲೀಕನ ಮಗ ಮಿಟಿಯಾ. ಇಪ್ಪತ್ತೆರಡು ವರ್ಷ ವಯಸ್ಸಿನ, ಸುಂದರ, ನಿಸ್ತೇಜ ಯುವಕ. ಸೆರ್ಜಿ ರೈತ ವರ್ಗಕ್ಕೆ ಸೇರಿದ ಒಬ್ಬ ಕೂಲಿಯಾಳು. ತೆಪ್ಪ ನಡೆಯಿಸಲು ಕೂಲಿಗಾಗಿ ಬಂದಿದ್ದಾನೆ. ಕೆಂಪುಗಡ್ಡದ ಮನುಷ್ಯ, ಇವನ ಮೇಲ್ತುಟಿಯು ಅಣಕ ಮುದ್ರೆಯನ್ನು ಸೂಚಿಸುತ್ತೆ. ಇವನ ಅಗಲವಾದ ಬಾಯಿಯಲ್ಲಿ ಬಾಚಿಯಂತಿರುವ ಹಲ್ಲುಗಳು ಗಟ್ಟಿಮುಟ್ಟಾಗಿವೆ.

'ಮುಂದೆ ಸಾಗಲಿ' ಎರಡನೆಯ ಸಾರಿ ಧ್ವನಿಯೊಂದು ನಿಶಿಯನ್ನು ಭೇದಿಸಿತು.

'ಯಾಕೆ ಹೀಗೆ ಅರಚುತ್ತೀಯ ; ನಮ್ಮ ಕೆಲಸ ನಮಗೆ ಗೊತ್ತಿದೆ.' ಸೆರ್ಜಿ ಗೊಣಗುತ್ತ ಹೇಳಿದ : ತನ್ನ ಅಗಲವಾದ ಎದೆಗೆ ಗಳುವನ್ನು ಆನಿಸಿ ಗೊಣಗಲಾರಂಭಿಸಿದ. 'ಉಶ್ ! ಗಟ್ಟಿಯಾಗಿ ಮಾಟು ಮಾಟಿಯಾ' ಮಿಟಿಯಾ ತನ್ನ ಕಾಲುಗಳನ್ನು ಒದ್ದೆಯಾದ ಹಲಗೆಗಳಿಗೆ ಆನಿಸಿ ಕೊಟ್ಟು ಗಳ

ವನ್ನು ಮೀಟುತ್ತಾನೆ. ಹೀಗೆ ಮೀಟುವಾಗ ಅವನು ಏದುತ್ತಾ ಕೆಮ್ಮುವನು.

'ಇನ್ನೂ ಜೋರಾಗಿ ಸಾಗಲಿ! ಪೋಲಿ ಭಂಡರಾ!' ಮಾಲೀಕ ಕಿರಚುತ್ತಾನೆ. ಅವನ ದನಿಯಲ್ಲಿ ಕಾತರ ಮತ್ತು ಕೋಪ ಎರಡೂ ಮಿಶ್ರವಾಗಿವೆ.

'ಎಷ್ಟು ಅರಚುತ್ತೀಯೋ ಅರಚು' ಸೆರ್ಜಿ ಗೊಣಗಲುಪಕ್ರಮಿಸಿ ನಿನ್ನ ಮುಟ್ಠಾಳ ಮಗನೇ ಇಲ್ಲಿದಾನೆ, ತನ್ನ ಮೊಣಕಾಲಿನಮೇಲೆ ಒಂದು ಹುಲ್ಲುಕಡ್ಡಿ ಮುರಿಯುವ ಯೋಗ್ಯತೆ ಸಹ ಇವನಿಗಿಲ್ಲ. ಅಂಥವನನ್ನು ತೆಪ್ಪ ನಡೆಸಲು ಬಿಟ್ಟಿದ್ದೀಯ. ಆಮೇಲೆ ಇಡೀ ನದಿಗೇ ಕೇಳಿಸುವಂತೆ ಬೊಗಳುತ್ತೀಯ. ಬೇಕಾದರೆ ನಿನ್ನ ಗಂಟಲು ಹರಿದು ಚೂರು ಚೂರಾಗುವವರೆಗೂ ಕೂಗು, ಯಾರು ಬೇಡವೆನ್ನುತ್ತಾರೆ.'

ಈ ಕೊನೆಯ ಮಾತುಗಳು ಮುಂದುಗಡೆಯಲ್ಲಿದ್ದವರಿಗೆ ಕೇಳುವಂತಿದ್ದವು. ಅವರಿಗೆ ಕೇಳಿಸಲೆಂದೇ ಸೆರ್ಜಿ ಮನಃಪೂರ್ವಕವಾಗಿ ಗಟ್ಟಿಯಾಗೇ ಮಾತನಾಡಿದನು.

ಹಡಗು ತೀವ್ರವಾಗಿ ತೆಪ್ಪದ ಪಕ್ಕದಲ್ಲಿಯೇ ನೊರೆನೀರನ್ನು ರಭಸದಿಂದ ಚೆಲ್ಲುತ್ತ ಹಾದು ಹೋಯಿತು. ಈ ಆಘಾತದಿಂದ ತೆಪ್ಪದ ಹಲಗೆಗಳು ಯಾತನೆಯಿಂದ ನರಳಿದವು.

ಹಡಗಿನ ಒಳಗಡೆಯ ದೀಪಗಳ ಬೆಳಕು ಕ್ಷಣಮಾತ್ರಕಾಲ ನದಿಯನ್ನೂ ತೆಪ್ಪವನ್ನೂ ಬೆಳಗಿಸಿ ತಕ್ಷಣವೇ ಮಾಯವಾಯಿತು.

ಹಡಗಿನ ಚಲನೆಯ ಫಲವಾಗಿ ಎದ್ದ ಅಲೆಗಳು ತೆಪ್ಪಕ್ಕೆ ಬಡಿಯುತ್ತಲೇ ಅದು ಹಿಂದಕ್ಕೂ ಮುಂದಕ್ಕೂ ಉಯ್ಯಾಲೆಯಾಡತೊಡಗಿತು. ಮಿಟಿಯಾ ಬೀಳದಂತೆ ತೆಪ್ಪ ನಡೆಸುವ ಕೋಲನ್ನು ಆಸರೆಯಾಗಿ ಹಿಡಿದುಕೊಂಡು ತೂಗುಯ್ಯಾಲೆಯಾಡುತ್ತಾನೆ.

'ಸರಿ, ಸರಿ' ಸೆರ್ಜಿ ನಗುತ್ತ ಹೇಳಿದ, 'ಆಗಲೇ ಕುಣಿತಕ್ಕಾರಂಭಿಸಿದೆಯೇನು! ನಿಮ್ಮಪ್ಪ ಇನ್ನೂ ಅರಚಲು ಪ್ರಾರಂಭಮಾಡುತ್ತಾನೆ. ಇಲ್ಲವೇ ಪಕ್ಕೆಲಬುಗಳು ಪುಡಿಯಾಗುವಂತೆ ಒದೆ ಕೊಡಬಹುದು. ಆಗ ನೀನು ಬೇರೆ ತರಹ ರಾಗಕ್ಕೆ ಕುಣಿಯಬೇಕಾಗುತ್ತೆ. ಉಶ್!'

ಉಕ್ಕಿನ ತಂತಿಗಳಂತಿರುವ ತನ್ನ ಮಾಂಸಖಂಡಗಳಿಂದ ಸೆರ್ಜಿ

ಕೋಲನ್ನು ನೀರಿನಲ್ಲಿ ಬಹಳ ಆಳವಾಗಿ ಹಾಕಿ ಬಲವಾಗಿ ಮೀಟುತ್ತಾನೆ. ಶಕ್ತಿವಂತ. ಎತ್ತರ ಆಳು, ಗಹಗಹಿಸುವ ತುಂಟ ನಗೆ, ಬರಿಗಾಲಿಂದ ನಿಂತಿದ್ದಾನೆ, ತೆಪ್ಪದ ಒಂದು ಭಾಗದಂತಿದ್ದಾನೆ; ದೃಷ್ಟಿಯೆಲ್ಲಾ ಮುಂದಿದೆ. ಅವಶ್ಯಬಂದಲ್ಲಿ ಕ್ಷಣಾರ್ಧದೊಳಗಾಗಿ ತೆಪ್ಪದ ಓಟದ ದಿಕ್ಕನ್ನೇ ಬದಲಿಸಲು ಸಿದ್ಧನಾಗಿದ್ದಾನೆ.

'ಅಲ್ಲಿ ಸ್ವಲ್ಪ ನೋಡು, ನಿಮ್ಮಪ್ಪ ಮಾರ್ಕಾಳಿಗೆ ಮುತ್ತಿಡುತ್ತಿದ್ದಾನೆ! ಅವರಿಬ್ಬರೂ ಜತೆ ಪಿಶಾಚಿಗಳಂತಿಲ್ಲವೇ! ಸ್ವಲ್ಪವೂ ನಾಚಿಕೆಯಿಲ್ಲ! ಇಬ್ಬರಲ್ಲಿಯೂ ಅಂತರಾತ್ಮವಿಲ್ಲ. ಮಿಟಿಯಾ, ಅವರಿಂದ ದೂರಾಗಿ ನೀನೇಕೆ ಹೋಗಲೊಲ್ಲೆ; ಈ ಧರ್ಮಲಂಡರನ್ನು ತೊರೆಯಲೊಲ್ಲೇಕೆ? ಏಕೆ? ನಾನು ಹೇಳುವುದು ಕೇಳಿಸುವದಿಲ್ಲವೇ?'

'ಕೇಳುತ್ತಿದ್ದೇನೆ' ಅಣಕ ನಗೆನಗುತ್ತ ಹೇಳಿದ.

'ಅರ್ಥಬೆಂದ ಪ್ರಾಣಿ!' ಮಿಟಿಯಾಗೆ ಆದ ದುಃಖದಿಂದ ಉತ್ತೇಜಿತನಾಗಿ ಸರ್ಜಿ ಮತ್ತೆ ಮಾತಿಗೆ ಪ್ರಾರಂಭಿಸಿದ. 'ಆ ಮುದುಕ ಎಂಥ ಪಿಶಾಚಿ! ಅವನು ಮಗನಿಗಾಗಿ ಒಬ್ಬ ಹೆಂಡತಿಯನ್ನು ಹುಡುಕುತ್ತಾನೆ, ಮಗನ ಹೆಂಡತಿಯನ್ನು ತಾನೇ ತೆಗೆದುಕೊಳ್ಳುತ್ತಾನೆ. ವೃದ್ಧ ಪಶು!'

ಮಿಟಿಯಾ ಮೌನವಾಗಿ ಗಂಟು ಮೋರೆಯಿಂದ ನದಿಯಕಡೆ ಎವೆಯಿಕ್ಕದೆ ನೋಡುತ್ತಾನೆ. ಅಲ್ಲೊಂದು ಮಂಜಿನ ಗೋಡೆ ಕಾಣುತ್ತೆ. ಮೋಡಗಳು ಸುತ್ತಲೂ ಮುಸುಗುತ್ತಿವೆ.

ಈಗ ಮೌನವು ಉಸಿರುಗಟ್ಟುವಂತಿವೆ, ಏನೋ ಒಂದು ನಿರೀಕ್ಷಣೆಯಿಂದ ನದಿಯ ನೀರು ಸ್ತಂಭೀಭೂತವಾಗಿದೆ. ಅದೀಗ ತೆಪ್ಪಕ್ಕೆ ನಿದಾನವಾಗಿ ಬಡಿಯುತ್ತಿದೆ. ಆ ದನಿಯಲ್ಲಿ ವ್ಯಸನಪೂರಿತವಾದೊಂದು ವ್ಯಾಪ್ತಪ್ರಶ್ನೆ ಕೇಳಬರುತ್ತಿದೆ- ಅದೊಂದೇ ನಿಶೆಯ ನಿನಾದ- ಇವೇ ಆ ಮೌನವನ್ನು ಹೆಚ್ಚು ಭೀಕರಗೊಳಿಸುತ್ತಿದೆ. 'ಈಗ ನಮಗೆ ಸ್ವಲ್ಪ ಗಾಳಿ ಬೇಕು.' ಸೆರ್ಜಿ ಹೇಳಿದ. 'ಇಲ್ಲ, ಮಳೆ ತರಿಸುವಂಥ ಗಾಳಿ ನಮಗೆ ಬೇಡ' ಅನ್ನುತ್ತಾ ತನ್ನ ನಳಿಗೆಗೆ ತಂಬಾಕು ತುಂಬಲಾರಂಭಿಸಿದ: ನಳಿಗೆಯ ಗುಳುಗುಳು ಶಬ್ದ ಕೇಳಬರುತ್ತಿದೆ. ಅದರ ಕೆಂಡದ ಕೆಂಬೆಳಕು ಸರ್ಜಿಯ ಮುಖದ ಮೇಲೆ ಚೆಲ್ಲಿದೆ, ಆ ಬೆಳಕು ಮಾಯವಾಗುತ್ತ ಹೋದಂತೆ ಸೆರ್ಜಿಯು ಕತ್ತಲಲ್ಲಿ ಕರಗಿ ಹೋಗುತ್ತಾನೆ.

'ಮಿಟಿಯಾ', ಮತ್ತೆ ಸೆರ್ಜಿ ಕೂಗುತ್ತಾನೆ. ಅವನ ದನಿಯಲ್ಲಿ ಹಿಂಸಾ ಪಶುವಿನ ಗಡಸು ಮತ್ತು ಅಣಕ ಕೂಡಿದೆ.

'ಏನದು ?' ಮಿಟಿಯಾ ಉತ್ತರ ಕೊಡುತ್ತಾನೆ. ದಿಗಂತದ ಕಡೆ ನೆಟ್ಟ ದೃಷ್ಟಿಯನ್ನು ಅವನು ತೆಗೆಯಲೇ ಇಲ್ಲ. ಅವನ ದುಃಖಪೂರಿತ ಕಣ್ಣುಗಳು ಏನನ್ನೋ ಅರಸುತ್ತಿವೆ.

'ಅದು ಹೇಗೆ ಸಂಭವಿಸಿತು ಹೇಳು.'

'ಯಾವುದು ?' ಮಿಟಿಯಾನ ಸ್ವರದಲ್ಲಿ ಅತೃಪ್ತಿ ತುಂಬಿದೆ.

'ನೀನು ಮದುವೆಯಾದದ್ದು ಹೇಗೆ? ಇದೆಲ್ಲಾ ಹೇಗೆ ನಡೆಯಿತು. ನಿನ್ನ ಹೆಂಡತಿಯನ್ನು ಮನೆಗೆ ಕರೆತಂದೆ! – ಆಮೇಲೆ, ಹ! ಹ!! ಹ!!!'

'ಏನನು ಮೋಜು ಸಾಕುಮಾಡಿ ಕಾಡುಹರಟೆಯನ್ನ. ಮುಂದೆ ನೋಡುತ್ತಿರಿ.' ಗುಡುಗು ದನಿಯೊಂದು ತೆಪ್ಪದ ಆಚೆ ಕಡೆಯಿಂದ ಕೇಳಬಂದಿತು.

'ಶುದ್ಧ ಪಶು' ಕುಣಿಯುತ್ತ ಸೆರ್ಜಿ ಹೇಳಿ, ತನ್ನ ಮನಸ್ಸಿಗೆ ಆಪ್ಯಾಯಮಾನವಾದ ವಿಷಯದ ಕಡೆ ಮತ್ತೆ ಮಾತಿನ ಝರಿ ಸಾಗಿಸಿದ. 'ಹೇಳು ಮಿಟಿಯಾ, ಎಲ್ಲವನ್ನೂ ಹೇಳು, ವಿಶದವಾಗಿ ಹೇಳು. ಯಾಕೆ ಹೇಳಬಾರದು.'

'ನನ್ನನ್ನು ಸುಮ್ಮನೆ ಕೈಬಿಡು ಸೆರ್ಜಿ' ಮಿಟಿಯಾ ದೀನಸ್ವರದಿಂದ ಕೇಳಿಕೊಳ್ಳುತ್ತಾನೆ. 'ಒಂದು ಸಾರಿ ಆಗಲೇ ಹೇಳಿದ್ದೇನೆ.'

ಸೆರ್ಜಿ ತನ್ನನ್ನು ಸುಮ್ಮನೆ ಇರಗೊಡನೆಂದು ಅವನಿಗೆ ಅನುಭವದಿಂದ ವೇದ್ಯವಾಗಿತ್ತು. ಗಡಬಿಡಿಯಿಂದ ಹೇಳಲನುವಾದ. 'ಸರಿ, ನಾನು ಅವಳನ್ನು ಮನೆಗೆ ಕರೆತಂದೆ – ಅವಳಿಗೆ ಹೇಳಿದೆ 'ಮಾರ್ಶಾ, ನಾನು ನಿನ್ನ ಗಂಡನಾಗಲು ಸಾಧ್ಯವಿಲ್ಲ ; ನೀನು ಬಲಿಷ್ಟ ಹುಡುಗಿ, ನಾನು ನಿಶ್ಶಕ್ತ, ರೋಗಿಷ್ಟ. ನಿನ್ನನ್ನು ಮದುವೆಯಾಗಬೇಕೆಂಬ ಇಚ್ಛೆ ನನಗೆ ಇರಲೇ ಇಲ್ಲ, ಆದರೆ ನನ್ನ ತಂದೆ ಬಹಳ ಬಲವಂತ ಮಾಡಿದ. ಅವನು ಯಾವಾಗಲೂ ನನಗೆ ಹೇಳುತ್ತಿದ್ದ 'ಮದುವೆಯಾಗು ! ಮದುವೆಯಾಗು !' ನನಗೆ ಹೆಂಗಸರನ್ನು ಕಂಡರೆ ಆಗದೆಂದು ನಾನು ಹೇಳಿದೆ. ಅದರಲ್ಲಿಯೂ ನೀನು ಬಹಳ ದಿಟ್ಟಹುಡುಗಿ. ಹೌದು – ಅದೆಲ್ಲಾ ನನ್ನಿಂದ ಸಾಧ್ಯವಿಲ್ಲ – ಅದಕ್ಕೂ ನನಗೂ ಏನೂ ಸಂಬಂಧವಿಲ್ಲ. ಈಗಲಾದರೂ ತಿಳಿಯಿತೇ ? ನನಗಂತೂ ಅದು ತಲೆ ಗಿರ್ರ

ನಿಸುತ್ತೆ. ಅದೊಂದು ಮಹಾಪಾಪ - ಮತ್ತೆ ಮಕ್ಕಳು - ಯಾರೇ ಆಗಲಿ ಮಕ್ಕಳ ಬಗ್ಗೆ ಭಗವಂತನಲ್ಲಿ ಉತ್ತರ ಹೇಳಲೇಬೇಕು.'

'ಬೇಸರ ಬರುತ್ತೋ' ಸೆರ್ಜೆ ಕೇಕೆಹಾಕುತ್ತ ನಗುತ್ತಾನೆ. ಆಯಿತಪ್ಪಾ, ಇದಕ್ಕೆ ಮಾರ್ಕಾ ಏನು ಹೇಳಿದಳು? ಹೇಳು ಆಕೆ ಏನಂದಳು?'

'ಆಕೆ ಹೇಳಿದಳು, 'ಈಗ ನಾನೇನು ಮಾಡಲಿ?' ಅಂದವಳೇ ಅಳತೊಡಗಿದಳು. 'ನನ್ನಲ್ಲಿ ಏನು ಊನ ಕಂಡಿದ್ದೀಯ? ನಾನೇನು ಅಷ್ಟು ಕುರೂಪಿಯೇ?' ಸೆರ್ಜೆ ಅವಳು ನಾಚಿಕೆಗೆಟ್ಟ ನೀಚಹೆಂಗಸು. 'ಇಷ್ಟು ಆರೋಗ್ಯ ಇಷ್ಟು ಶಕ್ತಿಯುಳ್ಳ ನಾನು, ನನ್ನ ಮಾವನ ಬಳಿ ಹೋಗಬೇಕೆ?' ನಾನು ಹೇಳಿದೆ 'ನಿನಗೆ ಇಚ್ಛೆಯಿದ್ದರೆ - ಬೇಕಾದಲ್ಲಿ ಹೋಗು, ಆದರೆ ನನ್ನ ಆತ್ಮಕ್ಕೆ ವಿರೋಧವಾಗಿ ನಾನು ವರ್ತಿಸಲಾರೆ. ನಿನ್ನಲ್ಲಿ ನನಗೆ ಪ್ರೇಮವಿದ್ದಿದ್ದರೆ ಅದೊಂದು ರೀತಿಯಾಗಿರುತ್ತಿತ್ತು. ಆದರೆ ವಸ್ತುಸ್ಥಿತಿ ಬೇರೆ ತೆರನಾಗಿರುವದರಿಂದ ಅದು ಹೇಗೆ ಸಾಧ್ಯ? ಇದು ಮಹತ್ಪಾಪವೆಂದು ಫಾದರ್ ಇವಾನ್ ಹೇಳುತ್ತಾರೆ. ನಾವು ಮೃಗಗಳಲ್ಲ ತಿಳಿಯಿತೇ?' ಆಕೆ ಅಳುತ್ತಲೇ ಇದ್ದಳು. 'ನನ್ನ ಜೀವನದ ಸುಸಂಭವಗಳನ್ನು ನಾಶಪಡಿಸಿದೆ.' ಆಕೆಯನ್ನು ನೋಡಿ ಬಹಳ ಮರುಕವಾಯಿತು ನನಗೆ. ನಾನು ಹೇಳಿದೆ 'ಅದೇನಿಲ್ಲ ಕ್ರಮೇಣ ಎಲ್ಲವೂ ಸರಿಹೋಗುತ್ತೆ. ನಿನಗೆ ಬೇಡವಾದರೆ ನೀನು ಯಾವುದಾದರೂ ಮಠಕ್ಕೆ ಹೋಗಬಹುದು.' ಇದನ್ನು ಕೇಳಿ ಅವಳು ನನ್ನನ್ನು ಹೀನಾಮಾನವಾಗಿ ಶಪಿಸಿದಳು. 'ನೀನೊಬ್ಬ ಶುದ್ಧ ಮುಟ್ಠಾಳ! ಹೇಡಿ' ಎಂದಳು.

'ದೇವರೇ ಗತಿ' ಸೆರ್ಜೆ ಸಂತೋಷಯುಕ್ತ ದನಿಯಲ್ಲಿ ಪಿಸುಗುಟ್ಟಿ 'ಸರಿ ಹಾಗಾದರೆ ಅವಳು ಮಠ ಸೇರಬೇಕೆಂದು ನೇರವಾಗಿ ಹೇಳಿದೆಯೇನು?'

'ಹೌದು, ಹೋಗಲು ಹೇಳಿದೆ' ಮಿಟಿಯಾ ಸರಳವಾಗಿ ಉತ್ತರಕೊಟ್ಟ.

'ನೀನೊಬ್ಬ ಮುಟ್ಠಾಳನೆಂದು ಆಕೆ ಹೇಳಿದಳೋ?' ಸೆರ್ಜೆ ದನಿ ಏರಿಸುತ್ತ ಕೇಳಿದ.

'ಹೌದು ಆಕೆ ನನ್ನನ್ನು ಶಪಿಸಿದಳು.'

'ಮಿತ್ರಾ ಅವಳು ಆ ರೀತಿ ಹೇಳಿದ್ದು ಸರಿಯೇ; ನಿಜ ಆಕೆ ಹೇಳಿದ್ದೆಲ್ಲಾ ಸರಿ! ನಿನಗೆ ಚೆನ್ನಾಗಿ ಬುದ್ಧಿ ಕಲಿಸಿದಳು.' ಸೆರ್ಜೆ ತನ್ನ ದನಿಯನ್ನು ಬದಲಿಸಿ ಅಧಿಕಾರವಾಣಿಯಿಂದ, ದರ್ಪದಿಂದ ಕಟುವಾಗಿ ಹೇಳಿದ 'ನ್ಯಾಯಕ್ಕೆ

ವಿರುದ್ಧವಾಗಿ ಹೋಗಲು ನಿನಗೆ ಅಧಿಕಾರವೆಲ್ಲಿದೆ? ಆದರೆ ನೀನು ವಿರೋಧವಾಗಿ ನಡವೇ ನಡದೆ! ಹೀಗೆ ಹೀಗೇ ನಡೆಯಬೇಕೆಂಬ ಒಂದು ಸಂಕಲ್ಪವಿದೆ, ಅವುಗಳ ಗತಿ ಬವಲಿಸುವದರಿಂದ ಏನೂ ಪ್ರಯೋಜನವಾಗುವದಿಲ್ಲ! ಅವನ್ನು ನೀನು ಚರ್ಚಿಸಲೂ ಬಾರದು. ಆದರೆ ನೀನು ಮಾಡಿದ್ದಾದರೂ ಏನು? ತಲೆಯಲ್ಲಿ ಏನೋ ಹೊಲಸನ್ನು ತುಂಬಿಕೊಂಡೆ. ಮತವಂತೆ ಮತ. ಅಯ್ಯೋ ಮೂರ್ಖ! ಆ ಹುಡುಗಿಗೆ ಬೇಕಾದ್ದಾದರೂ ಏನು? ಆಕೆಗೆ ನಿನ್ನ ಮತ ಬೇಕಾಗಿತ್ತೆ? ಈಗ ಎಂತೆಂತಹ ಮೂರ್ಖರಿದ್ದಾರೆಂಬುದು ಕಾಣಬರುತ್ತಿದೆ! ಸ್ವಲ್ಪ ಆಲೋಚಿಸಿ ನೋಡು ಈಗೇನೇನು ನಡೆದಿದೆ ಎಂಬುದನ್ನ! ನೀನು ಮೃಗವೂ ಅಲ್ಲ, ಮನುಷ್ಯನೂ ಅಲ್ಲ, ಒಂದು ವಿಜಾತಿಯ ಪಶು. ಆ ಹುಡುಗಿಯ ಗತಿ ಮುಗಿಯಿತು! ಅವಳು ಆ ಮುದಿಯನೊಡನೆ ಸಂಸಾರ ಸಾಗಿಸುತ್ತಿದ್ದಾಳೆ. ಆ ಮುದುಕನನ್ನು ನೀನು ಪಾಪಕೂಪಕ್ಕೆ ತಳ್ಳಿದೆ. ನೀನು ಎಷ್ಟೆಷ್ಟು ಧರ್ಮಗಳನ್ನು ಮುರಿದೆ! ಏನು ಬುದ್ಧಿವಂತನಯ್ಯಾ!'

'ಸೆರ್ಜಿ, ಧರ್ಮವು ಆತ್ಮನಲ್ಲಿದೆ. ಎಲ್ಲರಿಗೂ ಇರುವುದು ಒಂದೇ ಧರ್ಮ. ನಿನ್ನ ಆತ್ಮಕ್ಕೆ ವಿರೋಧವಾದ ಯಾವುದನ್ನೂ ನೀನು ಮಾಡಬೇಡ. ಹಾಗೆ ಮಾಡಿದಲ್ಲಿ ಜಗತ್ತಿನಲ್ಲಿ ನೀನು ಯಾವ ಪಾಪವನ್ನೂ ಮಾಡಿದಂತಾಗುವದಿಲ್ಲ', ಮಿಟಿಯಾ ನಿಧಾನವಾಗಿ, ತಲೆದೂಗುತ್ತ ಸ್ನೇಹಮಯವಾಗಿ ಹೇಳಿದ.

'ಆದರೆ ನೀನು ಕೆಟ್ಟದ್ದನ್ನು ಮಾಡಿಯೇ ಬಿಟ್ಟಿದ್ದೀಯ', ಸೆರ್ಜಿ ರಭಸದಿಂದ ಹೇಳಿದ. 'ಆತ್ಮದಲ್ಲಂತೆ! ಒಳ್ಳೆಯ ವಿಷಯ! ಆತ್ಮನಲ್ಲಿ ಅನೇಕ ವಿಷಯಗಳಿವೆ. ಕೆಲವನ್ನು ಕಿತ್ತೊಗೆಯಲೇ ಬೇಕು. ಆತ್ಮ, ಆತ್ಮ, ನೀನು ಅವನ್ನು ಮೊದಲು ಅರ್ಥಮಾಡಿಕೊಳ್ಳಬೇಕು. ಅನಂತರ—'

'ಅದಲ್ಲ ಸೆರ್ಜಿ, ಖಂಡಿತ ಅದಲ್ಲ' ಮಿಟಿಯಾ ಉತ್ಸಾಹದಿಂದ ಹೇಳತೊಡಗಿದ. 'ಆತ್ಮವು ಇಬ್ಬನಿ ಹನಿಯಂತೆ ಯಾವಾಗಲೂ ಸ್ವಚ್ಛವಾದುದು. ಅದು ನಮ್ಮ ಹೃದಯಾಂತರಾಳದಲ್ಲಿದ್ದರೂ ಅದರ ದನಿ ನಮಗೆ ಕೇಳಿಸುವದಿಲ್ಲವೆಂಬ ಅಂಶ ದಿಟವಾದುದು, ಆದರೆ ಅದನ್ನು ಕಿವಿಗೊಟ್ಟು ಆಲಿಸಿದರೆ ಕೇಳಿಸುತ್ತೆ. ನಾವು ಎಂದಿಗೂ ದಾರಿ ತಪ್ಪಲಾರೆವು. ನಮ್ಮ ಆತ್ಮಪ್ರೇರಣೆಯಂತೆ ನಾವು ನಡೆದರೆ, ನಾವು ಯಾವಾಗಲೂ ಪರಮಾತ್ಮನ ಆಜ್ಞೆಗಳನ್ನು ಪಾಲಿಸಿದಂತಾಗುತ್ತದೆ. ಪರಮಾತ್ಮನಲ್ಲಿ ದೇವರಿದ್ದಾನೆ. ಆದ್ದರಿಂದ ಅಲ್ಲಿ ಧರ್ಮ

ವಿರಲೇ ಬೇಕು. ಆತ್ಮವು ದೇವರಿಂದ ಸೃಜಿಸಲ್ಪಟ್ಟು ಆತನಿಂದಲೇ ಮನುಷ್ಯನಲ್ಲಿ ಅದು ಆವಿಷ್ಕರಿಸಲ್ಪಟ್ಟಿದೆ. ಅಲ್ಲಿ ನೋಡುವುದನ್ನು ನಾವು ಕಲಿಯಬೇಕು – ನಮ್ಮ ಅನುಭವಗಳ ಕಡೆ ಲಕ್ಷ್ಯಕೊಡದೆ ಅಲ್ಲಿ ನೋಡುವದನ್ನು ಕಲಿಯಬೇಕು.'

'ಸೋಮಾರಿ ಪಿಶಾಚಿಗಳೇ! ಮುಂದೆ ನೋಡಿ!'

ಈ ಗಡಸು ದನಿಯೊಂದು ತೆಪ್ಪದ ಮುಂಭಾಗದಿಂದ ಕೇಳಬಂದು ನದಿಯಲ್ಲೆಲ್ಲಾ ಪ್ರತಿಧ್ವನಿತವಾಯಿತು. ಆ ದನಿಯನ್ನು ಆಲಿಸಿ ಕೇಳಿ, ವಿವೇಚಿಸಿದಲ್ಲಿ, ಅದು ಯಾರ ಬಾಯಿಂದ ಬಂದಿತೋ ಅವನು ಚೈತನ್ಯಯುತನೂ ದೃಢಕಾಯನೂ ಆದವನೆಂದೂ ತನ್ನ ಜೀವನದ ಬಗ್ಗೆ ತೃಪ್ತಿ ಮತ್ತು ಸಂತೋಷಪಟ್ಟವನೆಂದೂ ಧಾರಾಳವಾಗಿ ಹೇಳಬಹುದಾಗಿತ್ತು. ತೆಪ್ಪ ನಡೆಸುವವರಿಗೆ ಏನಾದರೂ ಆಜ್ಞೆ ಕೊಡಬೇಕೆಂದು ಅವನು ಅಷ್ಟು ದೊಡ್ಡ ದನಿಯಲ್ಲಿ ಅರಚಲಿಲ್ಲ. ಅವನ ಹೃದಯದಲ್ಲಿ ಜೀವನ ಮತ್ತು ಶಕ್ತಿಗಳು ತುಂಬಿ ತುಳುಕುತ್ತಿದ್ದವು. ಈ ಜೀವನ ಮತ್ತು ಶಕ್ತಿಗಳು ತಮ್ಮ ಅಸ್ತಿತ್ವವನ್ನು ಹೊರ ಜಗತ್ತಿಗೆ ಪ್ರದರ್ಶಿಸಲು ಅವನ ಇಚ್ಛೆಯಿಲ್ಲದಿದ್ದರೂ ಅವನ ಬಾಯಿಂದ ಧಾರಾಕಾರವಾಗಿ ಗುಡುಗುಡುಗಿ ಹೊರಬರುತ್ತಿದ್ದವು.

'ಆ ಮುದಿಗೊಡ್ಡು ಅರಚುವದನ್ನಿಷ್ಟು ಕೇಳು.' ಸೆರ್ಜಿ ತೀಕ್ಷ್ಣದೃಷ್ಟಿ ಬೀರುತ್ತ ಆನಂದತುಂದಿಲನಾಗಿ ಹೇಳಿದ. 'ಅವರನ್ನು ನೋಡು, ಎರಡು ಪಾರಿವಾಳಗಳಂತೆ ಹೇಗೆ 'ಕುಂಯ್' ಗುಟ್ಟುತ್ತಿದ್ದಾರೆ! ಮಿಟಿಯಾ, ಅವರನ್ನು ನೋಡಿ ನಿನಗೆ ಅಸೂಯೆಯಾಗುವದಿಲ್ಲವೇ?'

ಮಿಟಿಯಾ ಮೌನವಾಗಿದ್ದ.

'ಹಾಗಾದರೆ ಅವರನ್ನು ಕಂಡರೆ ನಿನಗೆ ಅಸೂಯೆಯಾಗುವದಿಲ್ಲವೇ?' ಸೆರ್ಜಿ, ಮತ್ತೆ ಪ್ರಶ್ನೆ ಹಾಕಿದ.

'ಅದರಿಂದ ನನಗೇನಾಗುತ್ತೆ? ಅದು ಅವರ ಪಾಪ, ಅವಕ್ಕುತ್ತರ ಅವರೇ ಕೊಡಬೇಕು' ಮಿಟಿಯಾ ಮೆತ್ತಗೆ ಉತ್ತರಕೊಟ್ಟ.

'ಹುಂ' ಸೆರ್ಜಿ ಮನಸ್ಸಿನೊಳಗೆ ಅಂದುಕೊಳ್ಳುತ್ತ ತನ್ನ ನಳಿಗೆಗೆ ತಂಬಾಕ ತುಂಬಿದ.

ಮತ್ತೊಂದು ಸಾರಿ ಕೆಂಡದ ಬೆಳಕು ಆ ಕತ್ತಲನ್ನು ಕ್ಷಣಕಾಲ ಭೇದಿ

ಸಿತು; ಕತ್ತಲು ಹೆಚ್ಚಾಗುತ್ತ ಬಂದಿತು, ಬೂದುಬಣ್ಣದ ಮೋಡಗಳು ಉಬ್ಬಿದ ನದಿಯನ್ನು ದಟ್ಟವಾಗಿ ಕೂಡಿಕೊಳ್ಳತೊಡಗಿತು.

ಇಂಥ ವಿಷಯಗಳೆಲ್ಲಾ ನಿನ್ನ ತಲೆಯಲ್ಲಿ ಹೇಗೆ ತುಂಬಿಕೊಂಡವು? ಅಥವಾ ಅವು ನಿನಗೆ ಸಹಜವಾಗಿ ಹೊಳೆಯುತ್ತವೆಯೇ? ಆದರೆ ನೀನು ನಿಮ್ಮಪ್ಪನಂತಲ್ಲ! ಅವನೆಂತಹ ಚೂಟಿ ಮುದುಕ. ನೋಡು ಅವನನ್ನು. ಈಗ ಅವನಿಗೆ ಐವತ್ತೆರಡು ವರ್ಷ ವಯಸ್ಸು, ಆದರೂ ಆ ತುಂಬುಹರೆಯದ ಹುಡುಗಿಯೊಂದಿಗೆ ಹೇಗೆ ಸಂಸಾರ ನಡೆಸುತ್ತಿದ್ದ! ಅವಳಾದರೂ ಎಂತಹ ಸೊಗಸಾದ ಹೆಂಗಸು, ಹೆಣ್ಣೆಂದರೆ ಇವಳೇ ಎಂದು ಬೆರಳುಮಾಡಿ ತೋರುವಂತಿದ್ದಾಳೆ. ಅವಳು ಸಹ ಅವನನ್ನು ಮನಃಪೂರ್ವಕವಾಗಿ ಪ್ರೀತಿಸುತ್ತಾಳೆ. ಅಂಥವನಿಗೆ ಯಾವ ಹೆಂಗಸಾದರೂ ಮರುಳಾಗಲೇ ಬೇಕು. ಯಾವುದಾದರೂ ಕೆಲಸ ಮಾಡುತ್ತಿದ್ದಾಗ ಅವನನ್ನು ನೋಡಬೇಕು. ಇಷ್ಟೇ ಅಲ್ಲ ಅವನು ಶ್ರೀಮಂತ. ನೋಡು, ಜನರು ಅವನಿಗೆ ಎಷ್ಟು ಮರ್ಯಾದೆ ಕೊಡುತ್ತಾರೆಂಬುದನ್ನ! ಜನಗಳು ಯಾವುದು ಸರಿ ಅಂತ ಭಾವಿಸಿದ್ದಾರೋ ಅದನ್ನೇ ಅವನು ಮಾಡುತ್ತಾನೆ. ಅವನು ಎಂದಿಗೂ ತಲೆ ಕೆಡಿಸಿಕೊಂಡವನಲ್ಲ. ಅದು ಯಾವಾಗಲೂ ಅವನ ಅಧೀನದಲ್ಲಿರುತ್ತೆ. ಹೌದು, ಆದರೆ ನೀನು? ನಿಮ್ಮಪ್ಪನನ್ನಾಗಲೀ, ನಿಮ್ಮಮ್ಮನನ್ನಾಗಲೀ ಸ್ವಲ್ಪವೂ ಹೋಲುವುದಿಲ್ಲ. ನಿನ್ನ ಅನ್ಫಿಸಾ ಇಂದು ಬದುಕಿದ್ದುದನ್ನು ನಾನು ನೋಡಬೇಕೆನಿಸುತ್ತೆ. ಅದೊಂದು ಒಳ್ಳೇ ಮೋಜೆನಿಸುತ್ತೆ. ಆಕೆ ನಿಮ್ಮಪ್ಪನಿಗೆ ಶಾಸ್ತಿಮಾಡಿ ತಕ್ಕ ಬುದ್ಧಿ ಕಲಿಸುತ್ತಿದ್ದಳು. ಅವರಿಬ್ಬರದೂ ಒಳ್ಳೆಯ ಜತೆಯಾಗಿತ್ತು!

ತೆಪ್ಪ ನಡೆಸುವ ಕೋಲಿಗೆ ಆತುಕೊಂಡು ಎವೆಯಿಕ್ಕದೆ ನೀರನ್ನು ನೋಡುತ್ತ, ತುಟಿ ಪಿಟಕ್ಕೆನ್ನದೆ ಮಿಟಿಯಾ ನಿಂತಿದ್ದ.

ಸೆರ್ಜಿ ಮಾತು ನಿಲ್ಲಿಸಿದ. ತೆಪ್ಪದ ಅತೀ ಮುಂಭಾಗದಲ್ಲಿ ಹೆಂಗಸೊಬ್ಬಳ ಕೀರಲು ದನಿಯ ನಗುವೂ, ಅದರೊಂದಿಗೆ ಗಂಡಸಿನ ದಪ್ಪ ದನಿಯೂ ಕೇಳಬರುತ್ತಿದ್ದವು. ಅವರ ಆಕೃತಿಗಳು ಮಂಜಿನಿಂದ ಕಾಣುತ್ತಿರಲಿಲ್ಲ. ಆದರೂ ಅವರು ಏನು ಮಾಡುತ್ತಾರೆಂಬುದನ್ನು ನೋಡಲು ಸೆರ್ಜಿ ಬಹುವಾಗಿ ಶ್ರಮಿಸುತ್ತಿದ್ದ. ಎತ್ತರವಾದ ಗಂಡಸೊಬ್ಬನು ಒಂದು ಕೋಲನ್ನು ಅವನಿಗಿಂತಲೂ ಕುಳ್ಳಾದ ಹೆಂಗಸೊಬ್ಬಳ ಕಡೆ ಅರ್ಧ ತಿರುಗಿಸಿ ಮಾತನಾಡು

ತ್ತಿದ್ದಂತೆ ತೋರಿತು. ಆಕೆ ಅವನಿಗಿಂತ ಕೊಂಚ ದೂರದಲ್ಲಿ ನಿಂತು ಆತ ನೊಡನೆ ಲಲ್ಲೆಯಾಡುತ್ತಿದ್ದಳು.

ಸೆರ್ಜಿ ದೀರ್ಘವಾದ ನಿಟ್ಟುಸಿರುಬಿಟ್ಟು, ಕ್ಷಣಕಾಲ ಸುಮ್ಮನಿದ್ದು ಮಾತಿಗೆ ಪ್ರಾರಂಭಿಸಿದ.

'ಅದೆಲ್ಲಾ ಹಾಳಾಗಲಿ, ಆದರೆ ಅವರು ಸಂತೋಷದಿಂದ ನಲಿಯುವುದೇ ಒಂದು ಔತಣದಂತಿದೆ. ನನಗೇಕೆ ಅಂತಹದ್ದೊಂದು ದೊರೆಯಬಾರದು? ನಾನು ನಿಗರ್ತಿಕ, ದಟ್ಟದರಿದ್ರ! ಅಂಥವಳನ್ನು ಎಂದಿಗೂ ಕೈಬಿಡೆನು! ಅವಳನ್ನು ಯಾವಾಗಲೂ ನನ್ನ ತೋಳುಗಳಿಂದ ಸುತ್ತುವೆ. ಆ ಚೆಲುವೆಗೆ ಸದಾ ನನ್ನ ಪ್ರೇಮವನ್ನು ಅರ್ಪಿಸುವೆ! ಹೆಂಗಸರೊಂದಿಗೆ ನನ್ನ ಅದೃಷ್ಟ ಎಂದೂ ಚೆನ್ನಾಗಿಲ್ಲ. ಆ ಹುಡುಗಿ ಜೀವನದ ಸವಿಯನ್ನು ಸವಿಯಬೇಕೆಂಬ ಆಸೆಯಿದೆ! ಮಿಟಿಯಾ, ಆಗಲೇ ನಿದ್ರೆ ಬಂದಿತೆ?'

'ಇಲ್ಲ' ಮಿಟಿಯಾ ನಿದಾನವಾಗಿ ಉತ್ತರಕೊಟ್ಟ.

'ಅದೆಲ್ಲಾ ಹೋಗಲಿ, ನೀನು ಹೇಗೆ ಬಾಳಬೇಕೆಂದಿರುವೆ? ನಿಜ ಹೇಳ ಬೇಕೆಂದರೆ ನೀನು ಒಬ್ಬಂಟಿಗನಾಗಿ ಕಂಬದಂತಿರುವೆ! ನೀನು ಹೋಗುವ ದಾದರೂ ಎಲ್ಲಿಗೆ? ನೀನೊಂದು ಸಮಸ್ಯೆ. ತನ್ನ ಕಾಲುಗಳ ಮೇಲೆ ನಿಲ್ಲದ ಮನುಷ್ಯನಿಂದೇನು ಪ್ರಯೋಜನ? ಈ ಜಗತ್ತಿನಲ್ಲಿ ಮನುಷ್ಯನಿಗೆ ಹಲ್ಲು ಮತ್ತು ಉಗುರುಗಳು ಇರಲೇ ಬೇಕು. ಇಲ್ಲದಿದ್ದರೆ ಎಲ್ಲರೂ ತಿಂದುಹಾಕಲು ಬರುತ್ತಾರೆ. ಅವರನ್ನು ನಾವು ಎದುರಿಸಬೇಕು. ಅದೆಲ್ಲಾ ಹಾಳಾಗಲಿ ನೀನು ಹೋಗುವದಾದರೂ ಎಲ್ಲಿಗೆ?'

'ನಾನು' ನಿದ್ರೆಯಿಂದಚ್ಚತ್ತವನಂತೆ ಥಟ್ಟನೆ ಮಿಟಿಯಾ ಹೇಳಿದ 'ನಾನು ಹೊರಟು ಹೋಗುತ್ತೇನೆ. ಚಳಿಗಾಲ ಬಂದೊಡನೆಯೇ ಕಾಕಸಸ್ ಪರ್ವತ ಗಳಬಳಿ ಹೋಗುತ್ತೇನೆ, ಅದೇ ನನ್ನ ಗಮ್ಯಸ್ಥಾನ. ಓ ದೇವ! ನಿಮ್ಮೆಲ್ಲರಿಂದ ನಾನು ತಪ್ಪಿಸಿಕೊಂಡು ಹೋದರೆ! ಹೃದಯಹೀನ, ದೇವಹೀನ ಮನುಷ್ಯರು! ನಿಮ್ಮಿಂದ ಪಾರಾಗಿ ಹೋಗುವುದೇ ನನ್ನ ಆಕಾಂಕ್ಷೆ. ನೀವು ಏತಕ್ಕಾಗಿ ಬಾಳು ತ್ತೀರಿ. ನಿಮ್ಮ ದೇವರೆಲ್ಲಿದ್ದಾನೆ? ಅವನೊಂದು ಬರೀ ಹೆಸರು ಅಷ್ಟೇ. ನೀವು ಕ್ರಿಸ್ತನಲ್ಲಿ ನಂಬಿಕೆಯಿಟ್ಟಿದ್ದೀರಾ! ನೀವೆಲ್ಲಾ ತೋಳಗಳು, ಅಷ್ಟೇ. ಅಗೋ ಆಚೆ, ಬೇರೆ ಜನಗಳು ವಾಸಿಸುತ್ತಿದ್ದಾರೆ, ಅವರ ಹೃದಯಗಳೆಲ್ಲ

ಕ್ರಿಸ್ತನಲ್ಲಿ ನೆಲಸಿವೆ. ಅವರ ಹೃದಯವು ಪ್ರೇಮದಿಂದ ತುಂಬದೆ, ಜಗತ್ತಿನ ಕಲ್ಯಾಣಕ್ಕಾಗಿ ಅವರು ಕಾತುರರಾಗಿದ್ದಾರೆ. ಆದರೆ ನೀವು – ನೀವೆಲ್ಲಾ ಪಶು ಗಳು, ಕೊಳಚೆಯಲ್ಲಿ ಹೊರಳಾಡುವ ಕ್ರಿಮಿಗಳು. ನಿಜವಾದ ಮನುಷ್ಯ ರೆಂದರೆ ಅವರೇ. ನಾನು ಅವರನ್ನು ನೋಡಿದ್ದೇನೆ. ಅವರು ನನಗೆ ಬರಲು ಹೇಳಿದ್ದಾರೆ, ನಾನು ಅಲ್ಲಿಗೆ ಹೋಗಬೇಕು. ಅವರು ನನಗೆ ಪವಿತ್ರ ಗ್ರಂಥ ವನ್ನು ಕೊಟ್ಟು 'ದೇವರ ಮನುಷ್ಯನೇ ಇದನ್ನು ಓದು, ಸತ್ಯದ ಅರಿವನ್ನು ಮಾಡಿಕೋ' ನಾನು ಅದನ್ನು ಓದಿದೆ, ನನ್ನ ಹೃದಯವು ದೇವವಾಣಿಯಿಂದ ತುಂಬಿದೆ. ನಾನು ಹೋಗುತ್ತೇನೆ. ಒಬ್ಬರನ್ನೊಬ್ಬರು ಹರಿದು ತಿನ್ನುವ ಮಾನವ ರೂಪೀ ತೋಳಗಳಿಂದ ನಾನು ದೂರ ಹೋಗುತ್ತೇನೆ.'

ಮಿಟಿಯಾ ಬಹಳ ಆವೇಶದಿಂದ ಈ ಮಾತುಗಳನ್ನು ಹೇಳಿದ. ಜಗ ದ್ಕಲ್ಯಾಣಕ್ಕಾಗಿ ಹಾತೊರೆಯುತ್ತಿರುವ ಆ ಜನರನ್ನು ತಾನು ಕೂಡುವ ಉತ್ಕ ಟೇಚ್ಛೆಯು ಅವನ ಪ್ರತಿ ಶಬ್ದದಲ್ಲೂ ಸ್ಪಷ್ಟವಾಗಿ ಕಂಡುಬರುತ್ತಿತ್ತು. ಸೆರ್ಜಿ ಈ ಮಾತುಗಳನ್ನು ಕೇಳಿ ಅವಾಕ್ಕಾದ, ಸ್ತಂಭಿತನಾದ. ಬಾಯಲ್ಲಿದ್ದ ನಳಿಗೆ ಯನ್ನು ಕೈಗೆ ತೆಗೆದುಕೊಂಡು, 'ನೀನು ಎಷ್ಟು ಹಾಳಾಗಿ ಹೋಗಿದ್ದೀಯಾ? ಆ ಪುಸ್ತಕವನ್ನು ನೀನೇಕೆ ಓದಿದೆ. ಎಲ್ಲಾದರೂ ಹೋಗು. ಕಾಕಸಸ್ ನಲ್ಲಿರುವ ಆ ಜನರು ಯಾರು? ಸನ್ಯಾಸಿಗಳೇನು?'

ಮಿಟಿಯಾನ ಸ್ಫೂರ್ತಿಜ್ವಾಲೆ ಆರಿಹೋಯಿತು. ಸೆರ್ಜಿಯ ಮಾತಿಗೆ ಅವನು ಉತ್ತರ ಕೊಡಲು ಸಮರ್ಥನಾಗಿರಲಿಲ್ಲ. ಏದುತ್ತ ಅವನು ಊರು ಗೋಲನ್ನು ಮಿಟುಟುತ್ತಿದ್ದ. ಒಬ್ಬನೇ ಅಸ್ಪಷ್ಟವಾಗಿ ಏನೋ ಅಂದುಕೊಳ್ಳು ತ್ತಿದ್ದ.

ಬಾರದಿದ್ದ ಉತ್ತರಕ್ಕಾಗಿ ಸ್ವಲ್ಪ ಹೊತ್ತು ಕಾದು ನೋಡಿದ. ರಾತ್ರಿಯ ಸ್ಮಶಾನಸದೃಶ ಮೌನವು ಅವನ ಕಲ್ಲೆದೆಯನ್ನು ಸಹ ಮೆತ್ತಗೆ ಮಾಡಿತು. ತುಂಬು ಬಾಳಿನ ಸವಿನೆನಪು ತಂದುಕೊಳ್ಳಲು ಸುಖನಿದ್ರೆಯಲ್ಲಿದ್ದ ನದಿಯನ್ನು ಎಬ್ಬಿಸಲು ಪ್ರಯತ್ನಿಸಿದ. ತೆಪ್ಪದ ಆಚೆ ಜೀವನವಿದೆ, ಆ ಜೀವನ ಅಂತಹ ಬಾಳನ್ನು ಬಾಳಬೇಕೆಂದು ಸೆರ್ಜಿಗೆ ಹೇಳುತ್ತಿತ್ತು.

ತೆಪ್ಪದ ಮುಂಭಾಗದಲ್ಲಿ ಕತ್ತಲನ್ನು ಛಿದ್ರಿಸುವ ತೃಪ್ತಿಯ ಕೇಕೆ ಕೇಳ ಬರುತ್ತಿತ್ತು. 'ಈ ದಿನ ಹಡಗುಗಳ ಸಂಚಾರ ಅಷ್ಟಿಲ್ಲ' ಸೆರ್ಜಿ

ಮಾತು ಮುಂದುವರಿಸಿದ ; 'ಇಷ್ಟು ಗಂಟೆಗಳ ವರೆವಿಗೆ ಒಂದೇ ಒಂದು ಹಡಗು ಮಾತ್ರ ಇತ್ತ ಹಾದುಹೋಗಿದೆ' ಈ ಮಾತಿಗೆ ಮಿಟಿಯಾ ಉತ್ತರ ಕೊಡಲು ಅಪೇಕ್ಷೆ ಇಲ್ಲದಿರುವದನ್ನು ಕಂಡು ತನ್ನಲ್ಲಿ ತಾನೇ ಮಾತನಾಡಿ ಕೊಳ್ಳತೊಡಗಿದ. 'ಇಷ್ಟರಲ್ಲಿಯೇ ನಾವು ಕಜಾನ್ ತಲಪುತ್ತೇವೆ ಅಲ್ಲಿ ಓಲ್ಗಾ ರಭಸದಿಂದ ಹರಿಯುತ್ತೆ. ಅದು ನಮ್ಮನ್ನು ನಿರಾಯಾಸವಾಗಿ ಬಹು ದೂರ ತೆಗೆದುಕೊಂಡು ಹೋಗುತ್ತೆ. ಹಾಗೇಕೆ ಸುಮ್ಮನೇ ನಿಂತಿದ್ದೀಯ ? ಹೇಳು.'

'ನಿನಗೇನಾಗಿದೆ' ಮಿಟಿಯಾ ಆರ್ತಧ್ವನಿಯಲ್ಲಿ ಕೇಳಿದ.

'ಏನೂ ಆಗಿಲ್ಲಪ್ಪಾ ; ಆದರೆ ನೀನೇಕೆ ಗೂಬೆಯಂತೆ ತೆಪ್ಪಗಿರುತ್ತೀಯ ? ನೀನು ಯಾವಾಗಲೂ ಯೋಚಿಸಿರುತ್ತಿ. ಯೋಚನೆಯನ್ನು ಬಿಡು ! ಯೋಚಿಸುವುದು ಮನುಷ್ಯನಿಗೆ ಬಲು ಕೆಟ್ಟದ್ದು. ನೀನೊಬ್ಬ ಮಹಾಪಂಡಿತ ! ಒಂದೇ ಸಮನೆ ಯೋಚನೆ ಮಾಡುತ್ತಲೇ ಇರುತೀಯ. ಆದರೆ ಮೂಲತಃ ನೀನೊಬ್ಬ ಮೂರ್ಖನೆಂಬುದನ್ನರಿಯೆ. ಹ ! ಹ !! ಸೆರ್ಜಿ ತಾನೇ ಮಹಾ ಬುದ್ಧಿವಂತನೆಂದು ತಿಳಿದುಕೊಂಡು ಅದೇ ಹೆಮ್ಮೆಯಿಂದ ಒಂದು ಸಾರಿ ಸೀಟಿಹಾಕಿ ತನ್ನ ವಾಕ್ಝರಿಯನ್ನು ಹರಿಯಬಿಟ್ಟ.

'ಆಲೋಚನೆ ? ದುಡಿಯುವ ಮನುಷ್ಯನಿಗೆ ಅದೊಂದು ಕೆಲಸವೇ ? ನಿಮ್ಮಪ್ಪನನ್ನು ನೋಡು ; ಆತನು ಹೆಚ್ಚು ಆಲೋಚಿಸುವುದೇ ಇಲ್ಲ ; ಆತ ಜೀವಿಸುತ್ತಾನೆ. ಅವನು ನಿನ್ನ ಹೆಂಡತಿಯನ್ನು ಪ್ರೀತಿಸುತ್ತಾನೆ. ಅವರಿಬ್ಬರೂ ನಿನ್ನನ್ನು ನೋಡಿ ನಗುತ್ತಾರೆ. ಅವರ ಕೇಕೆಗಳನ್ನಿಷ್ಟು ಕೇಳು. ನೋಡುವದರಲ್ಲಿ ಮಾರ್ಕಾ ಗರ್ಭಿಣಿಯಂತೆ ತೋರುತ್ತೆ. ನೀನೇನು ಗಾಬರಿಗೊಳ್ಳಬೇಕಾಗಿಲ್ಲ. ಆ ಮಗು ಕೊಂಚವಾದರೂ ನಿನ್ನನ್ನು ಹೋಲುವದಿಲ್ಲ. ಅದೊಂದು ದೃಢಕಾಯದ ಒಳ್ಳೆಯ ಚೆಲು ಕೂಸಾಗಿರುತ್ತೆ ! ಆದರೂ ಆ ಮಗು ನಿನ್ನದೇ. ಹ ! ಹ !! ಅದು ನಿನ್ನನ್ನು ಅಪ್ಪಾ ಎಂದು ಕರೆಯುತ್ತೆ. ಆದಾಗ್ಯೂ ಆ ಮಗುವಿನ ತಂದೆ ನೀನಲ್ಲ. ಅದರ ಅಣ್ಣ ನೀನು ; ಮತ್ತು ಅದರ ನಿಜವಾದ ತಂದೆಯೇ ಅದರ ಅಜ್ಜ ! ಬಹಳ ಲಕ್ಷಣವಾಗಿದೆ ! ಎಂಥಾ ಹೊಲಸು ಸಂಸಾರ ! ಆದರೆ ಅದೆಂಥ ಒಪ್ಪವಾದ ಜೋಡಿ ! ಹೇಳು ಮಿಟಿಯಾ ನೀನೇ ಹೇಳು.'

'ಸೆರ್ಜಿ' - ಅಳುವ ದನಿಯಲ್ಲಿ ಮಿಟಿಯಾ ಕೇಳಿಕೊಂಡ. 'ಕ್ರಿಸ್ತನ ಹೆಸರಿ ನಲ್ಲಿ ನಿನ್ನನ್ನು ಅಂಗಲಾಚಿ ಬೇಡಿಕೊಳ್ಳುತ್ತೇನೆ, ನನ್ನ ಹೃದಯವನ್ನು ತುಂಡು ತುಂಡಾಗಿ ಕತ್ತರಿಸಿ ಹಾಕಬೇಡ, ನಿನ್ನ ಬೆಂಕಿಯ ಮಾತುಗಳಿಂದ ನನ್ನನ್ನು ಸುಡಬೇಡ. ಸುಮ್ಮನೆ ಬಿಡು. ಮಾತನಾಡದೆ ಸುಮ್ಮನಿರು. ನನ್ನ ಹೃದಯದ ರಕ್ತವನ್ನು ಹರಿದು ಚೆಲ್ಲಬೇಡ. ನಾನು ನದಿಯಲ್ಲಿ ಹಾರಿಕೊಂಡು ಪ್ರಾಣ ಕಳೆದುಕೊಳ್ಳುತ್ತೇನೆ. ಆ ಪಾಪ ನಿನ್ನ ನೆರಗಿಗೆ ಕಟ್ಟಿಟ್ಟದ್ದೆಂದು ತಿಳಿ. ದೇವರ ಹೆಸರಿನಲ್ಲಿ ನಿನ್ನನ್ನು ಕೇಳಿಕೊಳ್ಳುತ್ತೇನೆ. ನನ್ನ ಪಾಡಿಗೆ ನನ್ನನ್ನು ಬಿಟ್ಟು ಬಿಡು.'

ರಾತ್ರಿಯ ಮೌನವು ಯಾವುದೋ ಒಂದು ವಿಚಿತ್ರ ಚೀತ್ಕಾರದಿಂದ ಭೇದಿಸಲ್ಪಟ್ಟಿತು. ಪ್ರಚಂಡ ಗಾಳಿಯ ಒತ್ತಡಕ್ಕೆ ತುತ್ತಾದವನಂತೆ ಮಿಟಿಯಾ ತೆಪ್ಪದ ಪಕ್ಕಕ್ಕೆ ಬಿದ್ದ.

'ಅಯ್ಯೋ ! ಅಯ್ಯೋ !!' ಎಂದು ಸೆರ್ಜಿ ಕೂಗಿದ. ತನ್ನ ಸಹೋದ್ಯೋಗಿ ಸಂಕಟದಿಂದ ನರಳುವದನ್ನು ಕುತೂಹಲದಿಂದ ನೋಡುತ್ತ 'ಎಂಥಾ ವಿಚಿತ್ರ ಮನುಷ್ಯನಯ್ಯಾ ನೀನು ! ಮೊದಲೇ ಹೇಳಬಾರದಾಗಿತ್ತೆ ನಿನಗೇನಾಗಿದೆಯೆಂಬುದನ್ನು— '

'ಆಗಿನಿಂದಲೂ ನನ್ನನ್ನು ಒಂದೇ ಸಮನಾಗಿ ಹಿಂಸಿಸುತ್ತಿದ್ದೀಯ. ಯಾಕೆ, ಹೇಳು, ನಾನೇನಾದರೂ ನಿನ್ನ ಶತ್ರುವೋ ?' ಮಿಟಿಯಾ ಬಿಕ್ಕಳಿಸುತ್ತ ಹೇಳಿದ.

'ಬಹಳ ವಿಚಿತ್ರ ಹುಡುಗನಯ್ಯಾ. ಇಂಥ ಮಾತುಗಳನ್ನು ಕೇಳುವ ಶಕ್ತಿ ನಿನಗಿದೆಯೆಂದು ತಿಳಿದುಕೊಂಡು ಹೇಳಿದೆನಷ್ಟೆ. ಯಾಕೆ, ಮೊದಲೇ ಹೇಳಬಾರದಾಗಿತ್ತೇನು ?'

'ಹಾಗಾದರೆ ಹೇಳುತ್ತೇನೆ. ಎಲ್ಲವನ್ನೂ ಮರೆತುಬಿಡಬೇಕೆಂದು ನಿರ್ಧರಿಸಿದ್ದೇನೆ. ನನ್ನ ಅವಮಾನ, ನನ್ನ ಭಯಂಕರ ಹಿಂಸೆ, ಎಲ್ಲವನ್ನೂ ಕಡೆಯ ತನಕ ಮರೆಯಬೇಕೆಂದಿದ್ದೇನೆ. ನೀವೆಲ್ಲಾ ಬಹಳ ನೀಚರು. ನಾನು ಹೋಗುತ್ತೇನೆ, ಎಂದೆಂದಿಗೂ ವಾಪಸು ಬರುವುದೇ ಇಲ್ಲ. ಇನ್ನು ಇದನ್ನೆಲ್ಲಾ ಸಹಿಸಲು ನನ್ನಿಂದ ಸಾಧ್ಯವಿಲ್ಲ.'

'ಹೌದು, ಹಾಗಾದರೆ ಮೊದಲು ತೊಲಗು ಇಲ್ಲಿಂದ' ಸೆರ್ಜಿ ಕೈಸನ್ನೆ ಮಾಡುತ್ತ ಕೂಗಿದ. ಆದರೂ ಮುಂದೊದಗುವ ದುರಂತ ನಾಟಕವನ್ನು ನೆನೆದು ಹಾಗೆಯೇ ನಡುಗಿದ.

'ಹೋ! ನಾನು ನಿಮ್ಮನ್ನೇ ಕೂಗುತ್ತಿರುವುದು, ಏನು ಕಿವುಡೋ' ಸೈಲಾನ ಧ್ವನಿ ನದಿಯನ್ನೆಲ್ಲಾ ಆವರಿಸಿತು. 'ಏನು ಮಾಡುತ್ತಿದ್ದೀರಿ? ಕಾಡುಹರಟೆ ನಿಲ್ಲಿಸಿ.'

ಸೈಲಾನನು ತನ್ನ ಅರಚುವಿಕೆಯಿಂದ ಸುಖನಿದ್ರೆಯಲ್ಲಿದ್ದ ನದಿಯನ್ನು ಎಚ್ಚರಗೊಳಿಸುವಂತೆ ತೋರಿತು. ಹೀಗೆ ಒಂದೊಂದು ಸಾರಿಯೂ ಅವನು ಮಿಟಿಯಾನ ನರಗಳನ್ನೆಲ್ಲಾ ಕುಗ್ಗಿಸುತ್ತಿದ್ದ. ಅವನು ಹಾಗೆಯೇ ತಡವರಿಸುತ್ತ ಎದ್ದುನಿಂತ. ಸೆರ್ಜಿ ಗಟ್ಟಿಯಾಗಿ ತನ್ನ ಮಾಲೀಕನ ಪ್ರಶ್ನೆಗಳಿಗೆ ಉತ್ತರಕೊಡುತ್ತ, ಮೆತ್ತಗೆ ಕೆಳದನಿಯಲ್ಲಿ ಅವನನ್ನು ಬಯ್ಯುತ್ತಿದ್ದ.

ಈಗ ಮತ್ತೆ ಮೌನವೇ ಅಂಧಕಾರದ ಮೇಲೆ ಅಧಿಕಾರ ನಡೆಯಿಸುತ್ತಿದೆ.

ತೆಪ್ಪವು ಆ ಕತ್ತಲಲ್ಲಿ ಸದ್ದುಮಾಡದೆ ಭರದಿಂದ ಸಾಗಿತು.

೨

ಸೈಲಾನ್ ಪೆಟ್ರಾಫ್ ಮುಂದುಗಡೆ ತೆಪ್ಪ ನಡೆಯಿಸಲು ನಿಂತಿದ್ದಾನೆ. ಅವನು ಹಾಕಿಕೊಂಡಿದ್ದ ಕೆಂಪು ಅಂಗಿಯು ಕತ್ತಿನ ಭಾಗದಲ್ಲಿ ಬೇರ್ಪಡೆಯಾಗಿದ್ದು ಬಲಯುತವಾದ ಅವನ ಕತ್ತನ್ನೂ, ಕೂದಲಿಂದ ಮುಚ್ಚಿದ ಅವನ ವಿಶಾಲ ಎದೆಯನ್ನೂ ಹೊರಕ್ಕೆ ಕಾಣಸುವಂತೆ ಮಾಡಿದ್ದಿತು. ತೋಳುಗಳನ್ನು ಮೇಲಕ್ಕೆತ್ತಿ ಮಡಿಸಿದ್ದರಿಂದ ಅವನ ತುಂಬುದೋಳುಗಳು ಚೆನ್ನಾಗಿ ಕಾಣಿಸುತ್ತಿದ್ದವು. ಸೈಲಾನನು ಕೊಂಚ ಮುಂದಕ್ಕೆ ಬಾಗಿ ದೂರದಲ್ಲಿ ಏನನ್ನೋ ನೋಡುತ್ತಿದ್ದನು. ಅವನಿಗಿಂತ ಸ್ವಲ್ಪ ದೂರದಲ್ಲಿ ಮಾರ್ಕಾ ನಿಂತಿದ್ದಳು. ತನ್ನ ಪ್ರೇಮಿಯ ಸದೃಢ ಆಕೃತಿಯನ್ನು ನೋಡಿ ಅವಳ ಕಣ್ಣುಗಳಿಂದ ತೃಪ್ತಿ ನಗೆಯ ಕಿಡಿಗಳು ಮಿಂಚುತ್ತಿದ್ದವು. ಅವರಿಬ್ಬರೂ ಮೌನವಾಗಿದ್ದು ತಮ್ಮ ವೈಯಕ್ತಿಕ ಆಲೋಚನೆಗಳಲ್ಲಿ ಮಗ್ನರಾಗಿದ್ದರು. ಅವನು ದಿಗಂತದಲ್ಲಿ ಏನನ್ನೋ ನೋಡುತ್ತಿದ್ದನು. ಅವಳು ಅವನ ದೃಷ್ಟಿಯನ್ನೇ ಹಿಂಬಾಲಿಸುತ್ತಿದ್ದಳು.

'ಅದು ಮೀನು ಬೇಟೆಯಾಡುವವರು ಹಾಕಿಕೊಂಡಿರುವ ಬೆಂಕಿಯಂತೆ ತೋರುತ್ತೆ.' ಅವನು ಅವಳ ಕಡೆ ತಿರುಗಿ ಹೇಳಿದ.

'ಸರಿ, ನಮ್ಮ ತೆಪ್ಪ ಸರಿಯಾದ ಮಾರ್ಗದಲ್ಲೇ ಸಾಗಿದೆ' ಬಿಸಿಯುಸಿರು ಬಿಡುತ್ತಾ ಒಂದು ಸಾರಿ ಹುಟ್ಟನ್ನು ಮಿಾಟಿದ.

'ಸುಮ್ಮನೇ ಆಯಾಸಮಾಡಿಕೊಳ್ಳಬೇಡ, ಚಿನ್ನಾ' ಆಕೆ ಒಂದು ಸಾರಿ ಹುಟ್ಟನ್ನು ಮಿಾಟಿದಾಗ ಅವಳ ಕಡೆ ದೃಷ್ಟಿ ಹೊರಳಿಸಿ ಹೇಳಿದ.

ಆಕೆ ದುಂಡು ದುಂಡಾಗಿದ್ದಳು, ಕಪ್ಪನೆಯ ಹೊಳಪಿನ ಕಣ್ಣುಗಳು, ಕೆಂಪೇರಿದ ಕೆನ್ನೆಗಳು. ಬರಿಗಾಲು, ಮೆತ್ತಗೆ ಹತ್ತನಾಗಿ ಅಂಟಿಕೊಂಡ ಒದ್ದೆಯಾದ ಒಂದು ಲಂಗ, ಅದು ಅವಳ ಪ್ರತಿಯೊಂದು ಅಂಗದ ರೂಪುರೇಖೆಗಳನ್ನೂ ಸ್ಪಷ್ಟವಾಗಿ ತೋರುತ್ತಿದೆ. ಮುಗುಳ್ನಗೆ ನಗೆನಗುತ್ತ ಆಕೆ ಸ್ಟೈಲಾನನ ಕಡೆ ತಿರುಗಿ 'ನನ್ನ ವಿಷಯದಲ್ಲಿ ನೀನು ತುಂಬಾ ಆಸಕ್ತಿ ವಹಿಸುತ್ತೀಯ. ನನಗೇನೂ ಆಗಿಲ್ಲ, ನೀನು ಯೋಚನೆ ಮಾಡಬೇಡ!'

'ನಾನು ನಿನ್ನ ಮುದ್ದಿಸುತ್ತೇನೆ, ಆದರೆ ನಿನ್ನನ್ನು ಕಾಪಾಡುತ್ತಿಲ್ಲ' ಸ್ಟೈಲಾನನ್ನು ತನ್ನ ಭುಜಗಳನ್ನು ಕುಣಿಸುತ್ತ ಹೇಳಿದ.

'ಅದು ಸರಿಯಲ್ಲ!' ತುಂಟ ನಗೆಯೊಂದನ್ನು ಬೀರುತ್ತ ಅವಳು ಹೇಳಿದಳು. ಈಗ ಅವರಿಬ್ಬರೂ ಮೌನವಾಗಿ ಆಕಾಂಕ್ಷಾಪೂರಿತ ದೃಷ್ಟಿಯಿಂದ ಒಬ್ಬರನ್ನೊಬ್ಬರು ನೋಡುತ್ತಿದ್ದಾರೆ.

ತೆಪ್ಪದ ಕೆಳಗೆ ನೀರು ಸಂಗೀತ ಮಿಶ್ರಧ್ವನಿಯಲ್ಲಿ ಗುಳುಗುಳನೆ ಹರಿಯುತ್ತಿದೆ. ಬಲಗಡೆಯ ತೀರದಲ್ಲಿ – ಬಹು ದೂರದಲ್ಲಿ ಹುಂಜವೊಂದು ಕೂಗಿತು. ತೆಪ್ಪವು ಕತ್ತಲನ್ನು ಭೇದಿಸಿಕೊಂಡು ಕೊಂಚ ಮುಸುಕಾಗಿರುವ ಬೆಳಕಿನ ಕಡೆ ನಿದಾನವಾಗಿ ಸಾಗಿದೆ.

'ಸ್ಟೈಲಾನ್ ಪೆಟ್ರೋವಿಚ್, ಅವರು ಅಲ್ಲಿ ಅಷ್ಟು ಗಟ್ಟಿಯಾಗಿ ಏನು ಮಾತನಾಡಿಕೊಳ್ಳುತ್ತಿದ್ದರೆಂಬುದನ್ನು ಬಲ್ಲೆಯಾ? ನನಗೆ ಗೊತ್ತಿದೆ. ನಿನಗೆ ಗೊತ್ತಿದೆಯೆಂದು ನಾನು ಪಂದ್ಯ ಕಟ್ಟಲು ಸಿದ್ಧಳಿದ್ದೇನೆ. ಮಿಟಿಯಾ, ಸೆರ್ಜಿಯ ಎದುರಿಗೆ ನಮ್ಮ ವಿಷಯವಾಗಿ ದೂರು ಹೇಳಿಕೊಳ್ಳುತ್ತಿದ್ದ. ಅದನ್ನು ಕೇಳಿಯೇ ಸೆರ್ಜಿ ನಮ್ಮನ್ನು ಶಪಿಸುತ್ತಿದ್ದ.'

ಮಾರ್ಕಾ ಈ ಪ್ರಶ್ನೆಯನ್ನು ಬಿಗಿದು ಸ್ಟೈಲಾನನ ಮುಖವನ್ನು ದುರ

ದುರನೆ ನೋಡಿದಳು. ಸ್ಟೈಲಾನನ ಮುಖ ಗಂಟಿಕ್ಕಿದೆ.

'ಸರಿ' ಸ್ವಲ್ಪ ಹೊತ್ತಾದ ಮೇಲೆ ಹೇಳಿದ.

'ಸರಿ, ಅಷ್ಟೇ'

'ಅಷ್ಟೆ ಅದರೆ ಇನ್ನೇನು?'

'ಸಿಟ್ಟಾಗಬೇಡ.'

'ನಿನ್ನ ಮೇಲೆ ಸಿಟ್ಟೇ? ನಿನ್ನ ಮೇಲೆ ಸಿಟ್ಟಾಗಬೇಕೆಂದು ಆಸೆಯಾಗುತ್ತೆ, ಆದರೆ ಅದು ಸಾಧ್ಯವಿಲ್ಲ.'

'ಸ್ಟೈಲಾನ್, ಹಾಗಾದರೆ ನನ್ನನ್ನು ಪ್ರೀತಿಸುತ್ತೀಯಾ?' ಪಿಸುದನಿಯಲ್ಲಿ ಹೇಳಿ ಅವನ ಕಡೆ ಒಯ್ಯಾರದಿಂದ ಬಾಗಿದಳು.

'ನಿಶ್ಚಯವಾಗಿಯೂ' ಸ್ಟೈಲಾನನ ದನಿ ಕಂಚಿನ ಗಂಟೆಯಂತಿತ್ತು. ಅವಳ ಕಡೆ ಬಾಗಿ ತನ್ನ ಶಕ್ತಿಯ ತೋಳುಗಳನ್ನು ಮುಂದಕ್ಕೆ ಚಾಚಿ 'ಇನ್ನು ಸುಮ್ಮನೇ ಬಾ, ನನಗೆ ಹಿಂಸೆ ಕೊಡಬೇಡ.'

ಅವಳು ಬೆಕ್ಕಿನಂತೆ ದೇಹವನ್ನೆಲ್ಲಾ ಮುದುರಿ ಟಣ್ಣನೆ ಅವನ ತೋಳುಗಳ ಬಳಿ ಜಿಗಿದಳು.

'ನಾವು ತೆಪ್ಪಗಳನ್ನು ಉರುಳಿಸಿ ಬಿಡುತ್ತೇವೆ.' ಅವಳ ಕಿವಿಯಲ್ಲಿಯೇ ಹೇಳುತ್ತಾ, ಅವಳ ತುಟಿಗಳಿಗೆ ತನ್ನ ತುಟಿ ಹಚ್ಚಿ ಮುತ್ತಿಕ್ಕಿದ.

'ಸಾಕು ಮಾಡು ನಿನ್ನ ಒರಟು ಚೇಷ್ಟೆಯನ್ನ! ಅವರು ನಮ್ಮನ್ನು ನೋಡಬಹುದು. 'ಅವನ ತೋಳ್ಬಿಗಿತದಿಂದ ತಪ್ಪಿಸಿಕೊಳ್ಳಲು ಹೆಣಗಿದಳು. ಆದರೆ ಅವನು ಬಿಗಿತವನ್ನು ಹೆಚ್ಚುಮಾಡಿ, ಒಂದೇ ತೋಳಿನಿಂದ ಅವಳನ್ನು ಬಿಗಿದಪ್ಪಿ, ಇನ್ನೊಂದು ಕೈಯಿಂದಲೇ ತೆಪ್ಪ ನಡೆಸುತ್ತಿದ್ದ.

'ಅವರು ನಮ್ಮನ್ನು ನೋಡುತ್ತಾರೋ? ನೋಡಲೀ ಬಿಡು. ಅವರ ಮೇಲೆ ಚೆನ್ನಾಗಿ ನಾನು ಪಾಪ ಮಾಡುತ್ತಿದ್ದೇನೆ, ಅದು ನಿಜ. ಅದು ನನಗೆ ಗೊತ್ತಿದೆ; ದೇವರೆದುರು ಅದಕ್ಕೆ ಉತ್ತರಕೊಡಬೇಕೆನ್ನುವುದು ಸಹ ನನಗೆ ತಿಳಿದಿದೆ. ಏನೇ ಆದರೂ ನೀನು ಅವನ ಹೆಂಡತಿಯಲ್ಲ; ನೀನು ಸ್ವತಂತ್ರಳಾಗಿದ್ದಿ, ನಿನ್ನ ಮೇಲೆ ಯಾರಿಗೂ ಅಧಿಕಾರವಿಲ್ಲ. ಅವನು ಯಾತನೆ ಅನುಭವಿಸುತ್ತಿದ್ದಾನೆಂಬುದನ್ನೂ ಬಲ್ಲೆ. ಆದರೆ ನನ್ನ ಬಗೆ ಏನಾಗಿದೆ? ನನ್ನ ಸ್ಥಿತಿ ಏನಾದರೂ ನೆಮ್ಮದಿಯಾಗಿದೆಯೇ? ಅವನ ಹೆಂಡತಿ ನೀನಲ್ಲ ಎಂಬುದು

ನಿಜವಾದರೂ, ನಾನಿರುವ ಸ್ಥಿತಿಯಲ್ಲಿ ನನ್ನ ಗತಿ ಏನಾಗಿದೆಯೆಂಬು ಗೊತ್ತೇ' ದೇವರೆದುರು ಪಾಪಕೃತ್ಯವಾಚರಿಸುವುದು ಪಾತಕವಲ್ಲವೇ ? ಅದು ಮಹಾಪಾಪ ಅದೆಲ್ಲಾ ನನಗೆ ಗೊತ್ತಿದೆ, ಎಲ್ಲವನ್ನೂ ಅನುಭವದ ಮೂಲಕ ತಿಳಿದಿದ್ದೇನೆ. ಆದರೆ ಅದು ಮಾಡಲು ಯೋಗ್ಯವಾದ ಕೆಲಸ ! ನಾವು ಪ್ರೀತಿಸುವುದು ಒಂದೇ ಸಾರಿ, ಆದರೆ ಯಾವ ದಿನವೆಂದರೆ ಆ ದಿನ ಸಾಯಬಹುದು. ಮಿಟಿಯಾಗೆ ನಿನ್ನನ್ನು ಮದುವೆ ಮಾಡಲು ಒಂದು ತಿಂಗಳು ನಾನು ತಡೆದಿದ್ದರೆ, ಇದೆಲ್ಲಾ ಸಂಭವಿಸುತ್ತಲೇ ಇರಲಿಲ್ಲ. ಆನ್ನಿಸಾ ಸತ್ತ ಕೂಡಲೇ ನನ್ನ ಸ್ನೇಹಿತರನ್ನು ನಿಮ್ಮವರ ಬಳಿ ಕಳುಹಿಸಿ ನಿನ್ನನ್ನು ಮದುವೆಯಾಗಲು ಏರ್ಪಾಡುಗಳನ್ನು ಮಾಡಿ ಬಿಡುತ್ತಿದ್ದೆ. ಧರ್ಮದ ಎದುರಿನಲ್ಲಿ ಯಾವ ಪಾಪಕ್ಕೂ ಅಂಜದೆ, ಯಾವ ನಾಚಿಕೆ ಹೆದರಿಕೆ ಇಲ್ಲದೆ ನಿನ್ನ ಕೈ ಹಿಡಿಯುತ್ತಿದ್ದೆ. ಅದು ನನ್ನ ತಪ್ಪು ಮತ್ತು ಆ ತಪ್ಪು ನನ್ನ ಆಯಸ್ಸಿನಲ್ಲಿ ಐದು ಅಥವಾ ಹತ್ತು ವರ್ಷ ವರ್ಷಗಳನ್ನು ತೆಗೆದುಕೊಂಡು ಬಿಡುತ್ತೆ. ಇಂಥ ಒಂದು ತಪ್ಪು ಯಾವನಿಗಾಗಲಿ ಅಕಾಲ ವಾರ್ಧಿಕ್ಯವನ್ನು ತರುತ್ತದೆ.'

ಸ್ಟೈಲಾನ್ ಪ್ರೆಟ್ರಾಫನು ನಿರ್ಧಾರದಿಂದ ಹೇಳಿದ. ಅವನ ಮುಖದಲ್ಲಿ ಆತ್ಮವಿಶ್ವಾಸದ ಒಂದು ಹೊಳಪು ಹೊಳೆಯಿತು. ಪ್ರೇಮಿಸುವ ತನ್ನ ಹಕ್ಕಿಗಾಗಿ ಯಾರೊಂದಿಗಾದರೂ ಸರಿಯೇ ಅಲ್ಲಿಯೇ ಹೋರಾಟ ನಡೆಸಲು ಅವನು ಸಿದ್ಧನಿದ್ದಂತೆ ತೋರಿತು.

'ಎಲ್ಲಾ ಸರಿಹೋಯಿತು, ಇನ್ನು ಈ ಬಗ್ಗೆ ಚಿಂತಿಸಬೇಡ. ನಾವು ಇದನ್ನು ಕುರಿತು ಈಗಾಗಲೇ ಒಂದು ಸಾರಿ ಮಾತನಾಡಿದ್ದೇವೆ.' ಮಾರ್ಕಾ ಮೆಲುದನಿಯಲ್ಲಿ ಹೇಳುತ್ತಾ, ನಿಧಾನವಾಗಿ ಅವನ ಬಿಗಿತದಿಂದ ಬಿಡಿಸಿಕೊಂಡು ತನ್ನ ಹುಟ್ಟಿನ ಕಡೆ ಹೊರಟಳು.

ಅವನು ತನ್ನ ಹುಟ್ಟನ್ನು ಚುರುಕಾಗಿ ಆಡಿಸುತ್ತಿದ್ದಾನೆ. ತನ್ನ ಹೃದಯದಲ್ಲಿ ಅವಿತಿಟ್ಟುಕೊಂಡಿರುವ ಭಾರವನ್ನೆಲ್ಲಾ ಈ ಮೂಲಕವಾಗಿಯೇ ಕಳಚಿ ಹಾಕಲು ಯತ್ನಿಸಿದಂತೆ ತೋರಿತು.

ಬೆಳಕು ಹರಿಯಲಾರಂಭವಾಯಿತು.

ಸೂರ್ಯನಿಗೆ ಮೋಡಗಳು ದಾರಿ ಮಾಡಿಕೊಟ್ಟು ಅವನ ಬೆಳಕು ಜಗತ್ತಿಗೆ ಬೀಳಲು ಅನುಕೂಲ ಮಾಡಿಕೊಟ್ಟವು. ನದಿಯ ನೀರು ಉಕ್ಕಿನ ಹಾಳೆ

ಯಂತೆ ಪಳಪಳನೆ ಹೊಳೆಯುತ್ತಿದೆ.

'ಈಗ್ಗೆ ಸ್ವಲ್ಪ ಹೊತ್ತಿಗೆ ಮುಂಚೆ ಅವನು ನನ್ನೊಡನೆ ಈ ಬಗ್ಗೆ ಮಾತ ನಾಡಿದನು. 'ಅಪ್ಪಾ, ನಿನಗೂ ನನಗೂ ಈ ಪಾಪ ತಟ್ಟದಿರುವುದೇ? ಅವ ಳನ್ನು ಬಿಟ್ಟುಬಿಡು! ಅವನು ಹೇಳಿದ್ದು ನಿನ್ನನ್ನು ಕುರಿತು.' ಸೈಲಾನ್ ನಗುತ್ತ ಹೇಳಿದ. 'ಸರಿಯಾದ ಮಾರ್ಗದಲ್ಲಿ ನಡೆ!' 'ಮಗನೇ, ನಿನಗೆ ಪ್ರಾಣ ಬೇಕಿ ದ್ದರೆ ಸುಮ್ಮನೇ ಹೊರಟು ಹೋಗು. ನಿನ್ನನ್ನು ಚೂರು ಚೂರಾಗಿ ಸಿಗಿದು ಹಾಕುತ್ತೇನೆ. ನಿನ್ನ ಆ ಸದ್ಗುಣಗಳು ಒಂದೂ ಉಳಿಯಲಿಕ್ಕಿಲ್ಲ. ನಾನು ನಿನ್ನಪ್ಪನೆಂಬ ವಿಷಯ ನೆನಪಾದಾಗ ನನಗೆ ಬಹಳ ದುಃಖವಾಗುತ್ತೆ. ಹೇಡಿ ಹುಡುಗ.' ಅವನು ನಡುಗಿದ.'

ಅಪ್ಪಾ, ನಾನು ಹೇಳಿದ್ದು ತಪ್ಪೇ' 'ಹೌದು ನೀನು ಹೇಳುವುದು ತಪ್ಪು' ನಾನು ಹೇಳಿದೆ 'ಅಪ್ರಯೋಜಕ ಪಶು, ಏಕೆಂದರೆ ನನ್ನ ಮಾರ್ಗ ಮಧ್ಯದಲ್ಲಿ ನೀನಿರುವೆ. ನೀನೇ ನಿನ್ನ ಕಾಲುಗಳ ಮೇಲೆ ನಿಲ್ಲಲಾರೆ. ನೀನೊಂದು ಜೀವ ಶ್ರವ. ಬಲಿಷ್ಟನಾಗಿದ್ದರೆ ನಿನ್ನನ್ನು ಕೊಲ್ಲಬಹುದಾಗಿತ್ತು, ಆದರೆ ಅದು ಸಹ ಸಾಧ್ಯವಿಲ್ಲ. ನಿನ್ನ ನೋಡಿದರೆ ಕನಿಕರ ಬರುತ್ತೆ' ಅವನು ಸುಮ್ಮನೇ ಅತ್ತ. 'ಓ ಮಾರ್ಕಾ, ಏನೋ ಒಂದು ವಿಪತ್ತು ಹತ್ತಿರದಲ್ಲಿಯೇ ಇದ್ದಂತೆ ತೋರುತ್ತೆ'

'ಏನು ಹೇಳುತ್ತಿದ್ದಿಯಾ?' ಮಾರ್ಕಾ ಗಾಬರಿಯಾಗಿ ಅವನ ಕಡೆ ನೋಡಿದಳು. ಅವನು ಅಲುಗದೆ ಪ್ರತಿಮೆ ನಿಂತ ಹಾಗೆ ನಿಂತಿದ್ದ.

'ಏನೂ ಇಲ್ಲ! ಅವನು ಸಾಯಬೇಕು. ಅಷ್ಟೆ! ಅವನು ಸತ್ತರೆ ಎಷ್ಟು ಅನುಕೂಲವಾಗುತ್ತೆ. ಆಗ ಎಲ್ಲವೂ ಸರಿ ಹೋಗುತ್ತೆ. ನನ್ನ ಭೂಮಿ ಕಾಣಿಕೆಯನ್ನೆಲ್ಲಾ ನಿನ್ನ ಮನೆಯುವರಿಗೆ ಕೊಟ್ಟು ಬಿಡುತ್ತೇನೆ. ಆಗ ಅವರ ಬಾಯಿಗಳು ತೆಪ್ಪಗಾಗುತ್ತವೆ. ನಾವಿಬ್ಬರೂ ಸೈಬೀರಿಯಾ ಅಥವಾ ಇನ್ನಾವ ದಾದರೂ ದೂರದೇಶಕ್ಕೆ ಹೋಗಿ ಬಿಡಬಹುದು. ಅವರು ಅಲ್ಲಿ ಕೇಳಬಹುದು. 'ಅವಳು ಯಾರು!' 'ನನ್ನ ಹೆಂಡತಿ, ತಿಳಿಯಿತೇ?' ಒಂದು ಅಂಗಡಿ ತೆರೆದು ನಾವು ಜೀವಿಸಬಹುದು. ನಮ್ಮ ಪಾಪ ಕಳೆದುಕೊಳ್ಳಲು ಪ್ರಾಯಶ್ಚಿತ್ತ ಮಾಡಿ ಕೊಳ್ಳಬಹುದು. ಇತರರು ಜೀವಿಸಲು ನಾವು ನೆರವಾಗಬಹುದು ನಾನು ಹೇಳಿದ್ದೆ ಸರಿಯೆ ಮಾರ್ಕಾ'

'ಹೌದು' ದೀರ್ಘವಾದ ನಿಟ್ಟುಸಿರೊಂದು ಬಿಟ್ಟು ಯೋಚನೆಯಲ್ಲಿರು

ವಂತೆ ಕಣ್ಣುಮುಚ್ಚಿದಳು.

ಅವರು ಕೆಲ ಹೊತ್ತು ಮೌನವಾಗಿದ್ದರು. ನದಿಯ ನೀರು ಸದ್ದಿಲ್ಲದೆ ಹರಿಯುತ್ತಿತ್ತು.

'ಅವನು ರೋಗಿಷ್ಟ, ಇಷ್ಟರಲ್ಲೇ ಸಾಯಬಹುದು' ಸ್ವಲ್ಪ ಹೊತ್ತಾದ ನಂತರ ಸೈಲಾನ್ ಹೇಳಿದ

'ಓ ದೇವರೇ, ಅದು ಜಾಗ್ರತೆ ಆದರೆ ಸಾಕು' ಮಾರ್ಕಾ ಹೇಳಿದಳು.

ವಸಂತ ಸೂರ್ಯನ ಕಿರಣಗಳು ಮೋಡಗಳಿಂದ ಹಾದು ನೀರಿನ ಮೇಲೆ ಬಿದ್ದವು. ಸುಳಿಗಾಳಿ ಬೀಸಿತು. ಇದರ ಸ್ಪರ್ಶದಿಂದ ಪ್ರಕೃತಿ ಎಚ್ಚೆತ್ತು ನಸುನಗತೊಡಗಿತು.

ಸೆರ್ಜಿ ಮತ್ತು ಮಿಟಿಯೂ ತಮ್ಮ ಹುಟ್ಟುಗಳಿಗೆ ಆತುಕೊಂಡು ನಿಶ್ಚೇಷ್ಟಿತರಾಗಿ ನಿಂತಿದ್ದಾರೆ. ಅವರ ಮುಖ ಲಕ್ಷಣ ಹೇಗಿತ್ತೆಂಬುದು ತೆಪ್ಪದ ಮುಂಭಾಗದಲ್ಲಿರುವವರಿಗೆ ಕಾಣುವಂತಿಲ್ಲ.

ಸೈಲಾನ್ ಮಾರ್ಕಾಕಡೆ ಕಡೆಗಣ್ಣಿನಿಂದ ನೋಡಿದ.

ಆಕೆ ತಣ್ಣಗಾಗಿದ್ದಾಳೆ. ಹುಟ್ಟಿನಮೇಲೆ ಬಾಗಿದ್ದಾಳೆ. ಕಣ್ಣುಗಳಲ್ಲಿ ಆಶಾದಾಯಕ ಬೆಳಕು ಹರಿಯುತ್ತಿದೆ. ತೃಪ್ತಿಯ ಹುಸಿನಗೆ ತುಟಿಯಮೇಲೆ ಆಡುತ್ತಿದೆ. ಆ ನಗೆ ಎಂತಹ ಕುರೂಪಿ ಹೆಂಗಸನ್ನಾದರೂ ಸುರೂಪಿಯಾಗಿ ಮಾರ್ಪಡಿಸಬಲ್ಲದು.

'ಹುಡುಗರೇ ಮುಂದಕ್ಕೆ ನೋಡಿ, ಹೋ ! ಹೋ ! ! ' ಸೈಲಾನನು ನಾಲಗೆ ಹರಿದು ಹೋಗುವಂತೆ ಕೂಗಿದ. ಆ ಕೂಗಿನಲ್ಲಿ ಆತ್ಮವಿಶ್ವಾಸದ ಕೆಚ್ಚು ತಾನೇ ತಾನಾಗಿ ತುಂಬಿತ್ತು.

ಅವನ ಗುಡುಗಿನಿಂದ ಪ್ರಕೃತಿ ನಡುಗುವಂತೆ ತೋರಿತು. ಅದರ ಪ್ರತಿಧ್ವನಿ ನದಿಯ ಎರಡು ದಡಗಳನ್ನೂ ತುಂಬಿತು.

———:———

# ಬೊಲೆಸ್ಲೊ *

ಅನುವಾದಕ: ಎಂ. ವಿ. ಸೀತಾರಾಮಯ್ಯ

ಒಂದು ದಿನ ನನ್ನ ಗೆಳೆಯನೊಬ್ಬ ನನಗೆ ಹೇಳಿದ್ದು ಇದು:

ನಾನು ಮಾಸ್ಕೊದಲ್ಲಿ ವ್ಯಾಸಂಗ ಮಾಡುತ್ತಿದ್ದಾಗ ಒಂದು ಸಣ್ಣಮನೆ ವಾಸಮಾಡಿಕೊಂಡಿದ್ದೆ. ಅಲ್ಲಿ ನನ್ನ ನೆರೆಯವಳು ಒಬ್ಬಳು ವಿಚಿತ್ರ ಹೆಣ್ಣು ಮಗಳು. ಅವಳು ಪೋಲಿಷರವಳು; ಹೆಸರು ಟೆರಿಸ. ಎತ್ತರವಾಗಿ ಬಲ ವಾಗಿದ್ದಳು. ಬಣ್ಣ ಕಂದು; ಕೊಡಲಿಯಿಂದ ಕೆತ್ತಿಮಾಡಿದವೋ ಎಂಬ ತಿದ್ದುವು ಅವಳ ದಪ್ಪನೆಯ ತುರುಗುಹುಬ್ಬುಗಳು, ಒರಟು ಮುಖಲಕ್ಷಣಗಳು. ಅವಳ ಕಣ್ಣುಗಳು ಮಂಕಾಗಿದ್ದುವು, ದನಿ ಜೋರಾಗಿತ್ತು. ನಡೆ ನುಡಿ ಮುಷ್ಟಿ ಕಾಳಗದಲ್ಲಿ ಹಣಕ್ಕಾಗಿ ಹೋರಾಡುವ ಹೋರಾಳುವಿನ ನಡೆ ನುಡಿಯನ್ನು ನೆನಪಿಗೆ ತರುತ್ತಿದ್ದುವು. ಅವಳ ಕಾಯ ಸ್ಥೂಲವಾಗಿಯೂ ಬಲಿಷ್ಠವಾಗಿಯೂ ಇದ್ದು, ಅವಳ ಒಟ್ಟು ಸ್ವರೂಪ ಭಯ ಹುಟ್ಟಿಸುವಷ್ಟು ವಿಕಾರವಾಗಿತ್ತು. ಕಡೆ ಯುಪ್ಪರಿಗೆಯಲ್ಲಿ ನಮ್ಮ ಕೋಣೆಗಳು ಎದುರುಬದುರಾಗಿದ್ದುವು. ಅವಳು ಮನೆಯಲ್ಲಿರುವುದಾಗಿ ನನಗೆ ತಿಳಿದಿದ್ದರೆ ನಾನು ನನ್ನ ಕೋಣೆಯ ಬಾಗಿಲನ್ನೇ ತೆಗೆಯುತ್ತಿರಲಿಲ್ಲ. ಕೆಲವು ವೇಳೆ ಮಹಡಿ ಮೆಟ್ಟಲುಗಳ ಮೇಲೋ ಇಲ್ಲವೆ ಅಂಗಳದಲ್ಲೋ ಅವಳನ್ನು ಸಂಧಿಸುತ್ತಿದ್ದೆ; ಅಂದು ಅವಳು ನನ್ನನ್ನು ನೋಡಿ ವ್ಯಂಗ್ಯವಾಗಿ ನಗುತ್ತಿದ್ದಳು. ಅನೇಕ ವೇಳೆ ಅವಳು ಮನೆಗೆ ಹಿಂದಿರುಗಿ ಬರುತ್ತಿದ್ದಾಗ ಅವಳನ್ನು ಸಂಧಿಸುತ್ತಿದ್ದೆ; ಆಗ ಅವಳ ಕಣ್ಣುಗಳು ಕೆಂಪ ಗಿರುತ್ತಿದ್ದುವು, ತಲೆಗೂದಲು ಕೆದರಿರುತ್ತಿತ್ತು. ಅಂಥ ಸಮಯಗಳಲ್ಲಿ ಅವಳು ನನ್ನನ್ನು ಲಜ್ಜೆಯಿಲ್ಲದೆ, ಮರ್ಯಾದೆಯಿಲ್ಲದೆ, ದಿಟ್ಟಿಸಿ ನೋಡುತ್ತಿದ್ದಳು. ತರುವಾಯ ಹೀಗೆ ಸಂಬೋಧಿಸುತ್ತಿದ್ದಳು: "ಓಹೋ, ವಿದ್ಯಾರ್ಥಿಗಳೇ!"

ಅವಳ ಪೆದ್ದು ನಗೆ ಅಸಹ್ಯಕರವಾಗಿತ್ತು. ನನ್ನ ಕೋಣೆ ಬೇಕಾದರೂ ಬದಲಾಯಿಸಲು ಸಿದ್ಧನಾಗಿದ್ದೆ—ಅವಳಿಗೆ ಕಾಣಿಸಿಕೊಳ್ಳದೆ ಇರುವುದಕ್ಕಾಗಿ. ಆದರೆ, ಸ್ಥಳ ಬಹು ಸೊಗಸಾಗಿತ್ತು: ನಗರದ ನೋಟಕ್ಕೆ ಯಾವ ಅಡ

---

* Boleslo.

ಚಣೆಯೂ ಇರಲಿಲ್ಲ, ಬೀದಿ ಶಾಂತವಾಗಿತ್ತು ; ಆದ್ದರಿಂದ ಅಲ್ಲಿಯೇ ಉಳಿದಿದ್ದೆ.

ಒಂದು ದಿನ ಬೆಳಗ್ಗೆ, ಉಡುಪು ಹಾಕಿಕೊಂಡು ಹಾಸಿಗೆಯ ಮೇಲೆ ಬಿದ್ದುಕೊಂಡಿದ್ದಾಗ, ಇದ್ದಕ್ಕಿದ್ದಹಾಗೆ ಬಾಗಿಲು ತೆರೆಯಿತು ; ಹೊಸಿಲ ಮೇಲೆ ಟೆರಿಸ ಕಾಣಿಸಿಕೊಂಡಳು.

"ಏನು, ವಿದ್ಯಾರ್ಥಿಗಳೇ" ಎಂದು ಸಂಬೋಧಿಸಿದಳು ಅವಳು ತನ್ನ ಹೆದ್ದನಿಯಲ್ಲಿ.

"ನಿನಗೇನು ಬೇಕಮ್ಮಾ ?"—ನಾನು ಕೇಳಿದೆ.

ಅವಳನ್ನು ನೋಡಿದೆ : ಕಲಕುಗೊಂಡು ಲಜ್ಜಾಭಾವದ ಮುದ್ರೆಯನ್ನು ತಳೆದಿತ್ತು ಅವಳ ಮುಖ ; ಆ ಭಾವವನ್ನು ನಾನು ಹಿಂದೆಂದೂ ಕಂಡಿರಲಿಲ್ಲ ಅವಳ ಮುಖದಲ್ಲಿ.

"ನಿಮ್ಮಿಂದ ಒಂದು ಉಪಕಾರ ಆಗಬೇಕೆಂದು ಕೇಳಬೇಕೆಂದಿದ್ದೇನೆ. ದಯನಿಟ್ಟು ಅದನ್ನು ಇಲ್ಲವೆನ್ನಬೇಡಿ !"

'ಇದೊಂದು ನೆವ' ಎಂದು ನನ್ನಷ್ಟಕ್ಕೆ ನಾನೇ ಅಂದುಕೊಂಡೆ, ಹಾಸಿಗೆಯ ಮೇಲೆ ಮಲಗಿ. ಆದರೆ ಬಾಯಿ ಬಿಡಲಿಲ್ಲ.

"ಮನೆಗೊಂದು ಕಾಗದ ಬರೆಯಬೇಕಾಗಿದೆ" ಎಂದು ಮುಂದುವರಿಸಿದಳವಳು.

'ಅವಳ ಮನಸ್ಸಿನಲ್ಲಿ ಏನಿರಬಹುದೊ' ಎಂದು ಯೋಚಿಸಿದೆ ನಾನು. ಹಾಸಿಗೆಯಿಂದ ನೆಗೆದೆದ್ದೆ, ಮೇಜಿನ ಮುಂದೆ ಕುಳಿತುಕೊಂಡೆ, ಕಾಗದ ಮಸಿ ಹವಣಿಸಿಕೊಂಡೆ, "ಒಳಕ್ಕೆ ಬಾರಮ್ಮ ; ಕುಳಿತುಕೊ ; ಬೇಕಾದ್ದನ್ನು ಹೇಳು, ಬರೆದು ಕೊಡುತ್ತೇನೆ" ಎಂದೆ.

ಅವಳು ಒಳಕ್ಕೆ ಬಂದು, ಎಚ್ಚರಿಕೆಯಿಂದ ಕುಳಿತುಕೊಂಡಳು ; ನನ್ನ ಕಣ್ಣುಗಳ ಕಡೆ ಸೂಕ್ಷ್ಮದೃಷ್ಟಿಯಿಂದ ನೋಡಿದಳು.

"ಒಳ್ಳೆಯದು ಕಾಗದ ಯಾರಿಗೆ ಬರೆಯಲಿ ?" ಎಂದು ಕೇಳಿದೆ.

"ವಾರ್ಸಾ ರೈಲು ರಸ್ತೆಯ ಮೇಲೆ ಸ್ವೆನ್ಸಿಯಾನಿ ಇದೆಯಲ್ಲ, ಅಲ್ಲಿ ವಾಸ ಮಾಡುತ್ತಾರಲ್ಲ ಬೊಲೆಸ್ಲೊ ಕಾಷ್ಪು, ಅವರಿಗೆ."

"ಅವರಿಗೆ ಏನು ಬರೆಯಲಿ? ಹೇಳು."

" 'ನನ್ನ ಪ್ರಿಯ ಬೊಲೆಸ್ – ನನ್ನ ಪ್ರಿಯತಮಾ– ನನ್ನ ಪ್ರೇಮವೇ – ನನ್ನ ಪ್ರಾಣಪದಕವೇ – ಮೇರಿ ಮಹಾತಾಯಿ ನಿನ್ನನ್ನು ಕಾಪಾಡಲಿ! ನನ್ನ ಪ್ರಿಯನೇ, ಇಷ್ಟು ದೀರ್ಘಕಾಲವಾದರೂ ನಿನ್ನ ಮುದ್ದು ಪಾರಿವಾಳಕ್ಕೆ, ಇಷ್ಟೊಂದು ವ್ಯಸನಪಡುತ್ತಿರುವ ನಿನ್ನ ಟೆರಿಸಾಗೆ, ಏಕೆ ಇನ್ನೂ ಬರೆದಿಲ್ಲ."

ಅವಳನ್ನು ನೋಡಿ ನಗದೆ ಇರಲಾಗಲಿಲ್ಲ. "ವ್ಯಸನಪಡುತ್ತಿರುವ ಚಿಕ್ಕ ಪಾರಿವಾಳ!"—ಸುಮಾರು ಆರು ಅಡಿ ಎತ್ತರದ, ಗಟ್ಟಿಮುಟ್ಟಾದ ಮೈಕಟ್ಟನ್ನೂ ವ್ಯಾಯಾಮಪಟುವಿನ ಮುಷ್ಟಿಗಳನ್ನೂ ಹೊಂದಿದ್ದ 'ಪಾರಿವಾಳ' ತನ್ನ ಬದುಕಿನಲ್ಲಿ ಸದಾಕಾಲವೂ ಹೊಗೆಕೊಳವೆ (Chimney) ಗಳೊಳಕ್ಕೆ ನುಗ್ಗಿ ಅವನ್ನು ಝಾಡಿಸುವುದಲ್ಲದೆ ಬೇರೆ ಇನ್ನೇನೂ ಕೆಲಸ ಕಾಣದೋ ಎಂಬಂತೆ ಕಪ್ಪಗಿದ್ದ ಮುಖವುಳ್ಳ ಈ ಚಿಕ್ಕ ಪಾರಿವಾಳವನ್ನು ನೆನೆದರೆ ನಗು ಬರದೆ ಇನ್ನೇನು!

ಆದರೆ, ಗಂಭೀರ ಮುಖಭಾವದಿಂದಲೇ ಕೇಳಿದೆ: "ಈ ಬೊಲೆಸ್ಲೊ ಯಾರು?"

"ಬೊಲೆಸ್ಲೆ, ಅಣ್ಣಾ?" ಎಂದು ಆಶ್ಚರ್ಯಭಾವದಿಂದ ಕೇಳಿದಳು: ಬೊಲೆಸ್ಲೊ ಯಾರಿಗೂ ಗೊತ್ತಿಲ್ಲ ಎಂದರೆ ನಂಬಲಾಗದ ಮಾತು ಎನ್ನುವಂತೆ. "ಬೊಲೆಸ್, ನನ್ನನ್ನು ಮದುವೆಯಾಗಲು ಮಾತುಕೊಟ್ಟಿರುವ ನನ್ನ ಪ್ರಿಯ—"

"ಮದುವೆಯಾಗಲು ಮಾತು ಕೊಟ್ಟಿರುವವನೆ?"

"ಯಾತಕ್ಕಪ್ಪ, ಇಷ್ಟೊಂದು ಆಶ್ಚರ್ಯಪಡುತ್ತೀರಿ? ನನ್ನಂಥ ಎಳೆಯ ಹುಡುಗಿಗೆ ನಲ್ಲನಿರಕೂಡದೆ?"

"ಎಳೆಯ ಹುಡುಗಿ!" — ಎಂಥ ವಿನೋದ!"

ನಾನು ಹೇಳಿದೆ "ಇರಬಹುದು; ಏನು ಬೇಕಾದರೂ ಸಂಭವ. ಮದುವೆಯ ನಿಶ್ಚಿತಾರ್ಥವಾಗಿ ಎಷ್ಟು ಕಾಲವಾಯಿತು?"

"ಹತ್ತು ವರ್ಷ."

ಅಂತೂ ಕೊನೆಗೊಂದು ಕಾಗದ ಬರೆದುಕೊಟ್ಟೆ ಅವಳಿಗೆ: ಅದು ಎಷ್ಟು ಪ್ರೇಮಪೂರ್ಣವಾಗಿ, ಮರುಕ ಹುಟ್ಟಿಸುವುದಾಗಿತ್ತೆಂದರೆ, ಟೆರಿಸ ಅಲ್ಲದೆ

ಬೇರೆ ಇನ್ನಾವಳಿಂದ ಆ ಪ್ರೇಮಸಂದೇಶ ಬರುವುದಾಗಿದ್ದರೂ ಬೊಲೆಸ್ಲೋ ವಿನ ಸ್ಥಾನದಲ್ಲಿರಬಯಸುತ್ತಿದ್ದೆ ನಾನು: ಅಷ್ಟು ಪ್ರೇಮಸೂಸುವ, ಎದೆ ಕರಗಿಸುವ ಪತ್ರವಾಗಿತ್ತು ನಾನು ಬರೆದುಕೊಟ್ಟದ್ದು.

ಟೆರಿಸ ಹೇಳಿದಳು: "ನಿಮಗೆ ಮನಸಾರ ವಂದನೆಗಳು. ನಿನಗೇ ನಾದರೂ ಪ್ರತ್ಯುಪಕಾರ ಮಾಡುವುದಿದೆಯೆ?" ಬಹಳ ಉದ್ವೇಗಗೊಂಡವ ಳಂತೆ ಕಾಣುತ್ತಿದ್ದಳು ಅವಳು.

"ಏನೂ ಇಲ್ಲ, ಪರವಾಯಿಲ್ಲ."

"ನಿಮ್ಮ ಷರಟುಗಳನ್ನೂ ಬಟ್ಟೆಬರೆಗಳನ್ನೂ ಹರಿದಿದ್ದರೆ ಹೊಲಿದು ಸರಿ ಮಾಡಿ ಕೊಡಬಲ್ಲೆ." ಈ ಮಾತು ನನ್ನನ್ನು ತುಸ ಬೇಸರಪಡಿಸಿತು. ನನಗೆ ಖಂಡಿತವಾಗಿಯೂ ಅವಳಿಂದ ಯಾವ ಬಗೆಯ ಪ್ರತಿಫಲವೂ ಬೇಕಿಲ್ಲವೆಂದು ಅವಳಿಗೆ ಸಂಕ್ಷೇಪವಾಗಿ ಒತ್ತಿ ಹೇಳಿದೆ. ಅವಳು ಹೊರಟು ಹೋದಳು.

ಎರಡು ವಾರಗಳು ಕಳೆದುವು. ಒಂದು ದಿನ ಸಂಜೆ, ಬೇಸರ ಕಳೆಯು ವುದಕ್ಕಾಗಿ ಏನು ಮಾಡುವುದೆಂದು ಯೋಚಿಸುತ್ತ, ಶೀಟಿ ಹಾಕುತ್ತ ಕಿಟಕಿಯ ಬಳಿ ಕುಳಿತಿದ್ದೆ. ಹೊರಗಡೆ ಹವಾ ಅಧ್ವಾನವಾಗಿತ್ತು; ಹೊರಕ್ಕೆ ಹೊರಡಲು ನನಗೆ ಇಷ್ಟವಿರಲಿಲ್ಲ. ತಟ್ಟನೆ ಬಾಗಿಲು ತೆರೆಯಿತು.

"ಅಯ್ಯೋ ದೇವರೆ! ಯಾರೋ ಬರುತ್ತಿರುವ ಹಾಗಿದೆಯೆ!" ಎಂದು ಕೊಂಡೆ.

"ನಿಮಗೆ ಈಗ ತುಂಬ ಕೆಲಸವೆಂದು ಕಾಣುತ್ತೆ?" ಬಂದವಳು ಟೆರಿಸ. ಇವಳಲ್ಲವೆ ಬೇರೆ ಯಾರು ಬಂದಿದ್ದರೂ ಪರವಾಯಿರಲಿಲ್ಲ.

"ಏನೂ ಇಲ್ಲ. ಯಾಕೆ?"

"ನನಗೆ ಇನ್ನೊಂದು ಕಾಗದ ಬರೆದುಕೊಡುತ್ತೀರ?"

"ಆಗಬಹುದು. ಬೊಲೆಸ್ಲಿಗೊ?"

"ಅಲ್ಲ; ನನಗೆ."

"ನಿನಗೆ!"

"ಹೌದು. ನನಗೆ, ಅವನ ಉತ್ತರ .... "

"ಏನು!"

"ದಯವಿಟ್ಟು ಕ್ಷಮಿಸಿ; ನಾನು ತಿಳಿಗೇಡಿ. ನಾನು ನಿಮಗೆ ತಿಳಿಯುವ ಹಾಗೆ ಮಾತಾಡಲಿಲ್ಲ. ಕಾಗದ ನನಗಲ್ಲ; ನನ್ನ ಸ್ನೇಹಿತರ ಪೈಕಿ ಒಬ್ಬರಿಗೆ–ಅಂದರೆ, ಅಂಥ ಸ್ನೇಹಿತರೇನಲ್ಲ, ಒಬ್ಬರು ಪರಿಚಯಸ್ಥರು. ಆತನಿಗೆ ಬರೆಯುವುದಕ್ಕೆ ಬರುವುದಿಲ್ಲ - ನನ್ನ ಹಾಗೆ ಒಬ್ಬಾಕೆಗೆ ಮದುವೆಯ ವಾಗ್ದಾನ ಮಾಡಿದ್ದಾನೆ .... "

ನಾನು ಒಮ್ಮೆ ಅವಳ ಕಡೆ ನೋಡಿದೆ. ಅವಳು ನಾಚಿಕೆಗೊಂಡವಳಂತೆ ಕಾಣುತ್ತಿದ್ದಳು; ಅವಳ ಕೈಗಳು ನಡುಗುತ್ತಿದ್ದುವು; ಅವಳು ಕಕ್ಕಾಬಿಕ್ಕಿಯಾಗಿದ್ದಳು. ಅವಳ ವಿಚಾರ ನನಗೆ ಗೊತ್ತಾದಂತೆ ಬಗೆದೆ.

ಅವಳಿಗೆ ಎಚ್ಚರಿಕೆ ಕೊಟ್ಟೆ: "ಇಲ್ಲಿ ಕೇಳು. ನಿನ್ನ ವಿಚಾರ, ನಿನ್ನ ಬೋಲೆಸ್ಲೊ ವಿಚಾರ - ಮುಂತಾಗಿ ನೀನು ನನ್ನೊಡನೆ ಹೇಳುತ್ತಿರುವುದೆಲ್ಲ ಶುದ್ಧಾಂಗವಾಗಿ ನಿನ್ನ ಸೃಷ್ಟನೆ; ನೀನು ನನಗೆ ಸುಳ್ಳು ಹೇಳುತ್ತಿದ್ದೀಯೆ. ನೀನು ಇಲ್ಲಿಗೆ ಬರುವುದಕ್ಕೆ ಅದೆಲ್ಲಾ ಒಂದು ನೆಪ. ಇನ್ನು ಮೇಲೆ ನಿನ್ನ ಮುಖ ಕೂಡ ನೋಡಲು ಇಷ್ಟವಿಲ್ಲ ನನಗೆ, ತಿಳಿಯಿತೋ ?"

ಅವಳು ಬೆದರಿದಂತೆ ಕಂಡುಬಂತು. ಅವಳ ಮುಖ ಕೆಂಪೇರಿತು; ಏನನ್ನೋ ಹೇಳಬೇಕೆಂದು ಬಹು ಕಷ್ಟದಿಂದ ಪ್ರಯತ್ನಪಡುತ್ತಿದ್ದಳು. ಅವಳ ವಿಷಯವಾಗಿ ತಪ್ಪು ತಿಳಿದಿದ್ದೇನೆಂದು ತೋರತೊಡಗಿತು ನನಗೆ. ಅಂತೂ, ಒಳ್ಳೆಯ ನಡತೆಯ ದಾರಿಯಿಂದ ಕೆಟ್ಟದಾರಿಗೆ ನನ್ನನ್ನು ಸೆಳೆಯುವ ದುರ್ಭಾವನೆಯಿಂದ ಅವಳು ಬಂದಿರಲಿಲ್ಲ. ಆದರೆ, ಅವಳು ಹೀಗೆ ಬರುತ್ತಿದ್ದುದರಲ್ಲಿ ಏನೋ ಉದ್ದೇಶವಿತ್ತು. ಅದು ಏನೊ?

"ವಿದ್ಯಾರ್ಥಿಗಳೇ—" ಎಂದು ಮೊದಲು ಮಾಡಿದಳು; ಆದರೆ, ಇದ್ದಕ್ಕಿದ್ದಹಾಗೆಯೇ ಮುಖ ತಿರುಗಿಸಿ, ಕೋಣೆಯಿಂದ ಹಿಂದಿರುಗಿ ಹೊರಟು ಹೋದಳು.

ನನ್ನ ಹೃದಯದಲ್ಲಿ ಏನೋ ತಳಮಳವಾದಂತಾಯಿತು. ಅವಳು ತನ್ನ ಕೋಣೆಯ ಬಾಗಿಲನ್ನು ಧಡಾರನೆ ಹಾಕಿಕೊಂಡದ್ದು ನನಗೆ ಕೇಳಬಂತು. ಅವಳು ಕೋಪಗೊಂಡಿದ್ದಳು. ಒಂದು ಕ್ಷಣ ಹಾಗೆಯೇ ಯೋಚಿಸಿ, ಅವಳನ್ನು ಹಿಂದಕ್ಕೆ ಕರೆಯುವುದೆಂದು ತೀರ್ಮಾನಿಸಿದೆ. ಅವಳಿಗೆ ಕಾಗದ ಬರೆದು

ಕೊಡೋಣವೆನ್ನಿಸಿತು. ಅವಳಿಗಾಗಿ ವ್ಯಥೆಯುಂಟಾಯಿತು.

ಅವಳ ಕೋಣೆಗೆ ಹೋದೆ. ಅವಳು ಕೈಗಳಿಂದ ಮುಖ ಮುಚ್ಚಿಕೊಂಡು ಕುಳಿತಿದ್ದಳು.

"ಅಯ್ಯೋ, ಹುಡುಗೀ! ನೀನು — " ಎಂದು ಅವಳನ್ನು ಸಂತೈಸ ಹೋದೆ.

ಕಥೆಯಲ್ಲಿ ಈ ಭಾಗಕ್ಕೆ ಬಂದಾಗ ನನ್ನ ಮನಸ್ಸು ಕರಗಿಹೋಗುತ್ತದೆ. ಅವಳು ತಟ್ಟನೆ ಎದ್ದು, ನೆಟ್ಟಗೆ ನನ್ನ ಬಳಿಗೆ ಬಂದಳು; ಕಣ್ಣುಗಳು ಹೊಳೆಯುತ್ತಿದ್ದವು; ನನ್ನ ಹೆಗಲ ಮೇಲೆ ತನ್ನ ತೋಳುಹಾಕಿ, ಎದೆ ಬಿರಿಯುವಂತೆ ಅಳತೊಡಗಿದಳು.

"ಈ – ಕೆಲವು – ಕೆಲವು ಪಂಕ್ತಿಗಳನ್ನು – ಬರೆದುಕೊಡಲು – ನಿಮಗೆ – ಏನು ತೊಂದರೆ? ಯಾರಿಗೆ – ಆಪರೆ – ನಿಮಗೇನು ಬಾಧಕ? ಮೊದಲು - ಮೊದಲು ಅಷ್ಟು - ಅಷ್ಟು ಒಳ್ಳೆಯವರಾಗಿ ಕಂಡಿರಿ! ಹೌದು - ಬೊಲೆಸ್ಲೊ ಎಂಬವರು ಯಾರೂ ಇಲ್ಲ - ಟೆರಿಸ - ಟೆರಿಸಾನೂ ಇಲ್ಲ. ಇರುವವಳು ನಾನು ಮಾತ್ರ – ನಾನೇ – ನಾನೊಬ್ಬಳೇ!"

ಅವಳ ಮಾತುಗಳನ್ನು ಕೇಳಿ ಕ್ಷಣಕಾಲ ದಂಗುಬಡಿದು ಹೋದೆ ಅಚ್ಚರಿಯಿಂದ. ''ಏನು! ಬೊಲೆಸ್ - ಬೊಲೆಸ್ಲೊ ಎಂಬಾತ ಇಲ್ಲವೇ ಇಲ್ಲವೆ?'' ಎಂದೆ.

"ಇಲ್ಲ."

"ಟೆರಿಸಾನೂ ಇಲ್ಲವೆ?"

"ಇಲ್ಲ - ಅಂದರೆ – ಆದರೆ – ನಾನೇ ಟೆರಿಸ."

ನನ್ನ ತಲೆ ಗಿರ್ರನೆ ತಿರುಗತೊಡಗಿತು. ಬೆರಗು ನೋಟದಿಂದ ಅವಳ ಕಡೆ ನೋಡಿದೆ. ನಮ್ಮಿಬ್ಬರಲ್ಲಿ ಯಾರದೋ ಒಬ್ಬರ ತಲೆ ಕೆಟ್ಟಿರಬೇಕು; ಅದು ಖಂಡಿತ. ಅವಳು ಮೇಜಿನ ಬಳಿ ಹೋಗಿ, ಸೆಳೆಖಾನೆಯಲ್ಲಿ ತಡಕಾಡಿ, ಒಂದು ಚೂರು ಕಾಗದ ತಂದಳು.

"ಇದೋ ನೋಡಿ, ನೀವು ಬರೆದುಕೊಟ್ಟ ಕಾಗದ; ಅದನ್ನು ಹಿಂದಕ್ಕೆ

ತೆಗೆದುಕೊಳ್ಳಿ. ಇನ್ನೊಂದು ಕಾಗದ ಬರೆದುಕೊಡಲು ನಿಮಗೆ ಇಷ್ಟವಿಲ್ಲ. ನಿಮಗಿಂತ ಹೆಚ್ಚು ಕರುಣೆಯುಳ್ಳವರು ಯಾರನ್ನಾದರೂ ಕೇಳಿಕೊಂಡರೆ ಬರೆದುಕೊಟ್ಟಾರು.''

ಅವಳ ಬೊಲೆಸ್ಲೋವಿಗೆ ಅವಳಿಗಾಗಿ ನಾನು ಬರೆದುಕೊಟ್ಟಿದ್ದ ಕಾಗದ ವನ್ನು ಅವಳು ಕೈಲಿ ಹಿಡಿದಿದ್ದಳು. ಇದರ ಅರ್ಥವೇನೋ ದೇವರೇ ಬಲ್ಲ ಎಂದುಕೊಂಡೆ.

"ಟೆರಿಸಾ ಇಲ್ಲಿ ಕೇಳು. ಇದು ಏನು? ಇದನ್ನು ನೀನು ಅಂಚೆಗೆ ಹಾಕದೆ ಇರುವಾಗ, ಬೇರೆಯವರೇಕೆ ನಿನಗಾಗಿ ಕಾಗದಗಳನ್ನು ಬರೆದು ಕೊಡ ಬೇಕು?"

"ಇದನ್ನು ಯಾರಿಗೆ ಅಂಚೆಗೆ ಹಾಕಲಿ?"

"ಯಾರಿಗೆ ಅಂದರೆ! ಬೊಲೆಸ್ಲೋವಿಗೆ – ನಿನ್ನನ್ನು ಮದುವೆಯಾಗುತ್ತೇ ನೆಂದು ಹೇಳಿರುವವನಿಗೆ.''

"ಆದರೆ - ಅಂಥವನೊಬ್ಬನು ಯಾರೂ ಇಲ್ಲ.''

ನನಗೆ ಏನು ಹೇಳುವುದಕ್ಕೂ ತೋರಲಿಲ್ಲ, ಸುಮ್ಮನಾದೆ. ಹೊರಟು ಹೋಗುವುದಲ್ಲದೆ ಬೇರೆ ಮಾರ್ಗವೇ ಇರಲಿಲ್ಲ. ಆದರೆ ಅವಳು ಮತ್ತೆ ಮೊದಲು ಮಾಡಿದಳು:

"ಇಲ್ಲ, ಅವನು – ಇಲ್ಲ; ಬೊಲೆಸ್ಲೊ ಇಲ್ಲ'' ಎಂದು ಒಂದು ಬಗೆಯ ಕೈಗಳ ಚೇಷ್ಟೆಯೊಡನೆ ಹೇಳಿದಳು; ಹೇಳಬೇಕೆಂದಿದ್ದುದನ್ನು ವಿವರಿಸುವುದು ಅಸಾಧ್ಯವೆಂಬುದು ಅದರಿಂದ ವ್ಯಕ್ತವಾಗುತ್ತಿತ್ತು.

ಅವಳು ಮುಂದುವರಿಸಿದಳು: ''ಆದರೆ ಅವನು ಬದುಕಿದ್ದಿರಬೇಕೆಂದು ನನ್ನ ಆಸೆ; ನಾನು ಇತರರಂತಲ್ಲ, ನನಗೆ ಗೊತ್ತು-ನಾನು ಎಂಥವಳೆಂಬುದು ನನಗೆ ಗೊತ್ತು - ಆದರೆ, ನಾನು ಅವನಿಗೆ ಬರೆಯುವುದರಿಂದ ಯಾರಿಗೂ ತೊಂದರೆಯಾಗುವುದಿಲ್ಲ.''

''ಹಾಗಂದರೆ? ಯಾರಿಗೆ?''

''ಯಾರಿಗೆ! ಮತ್ತೆ ಯಾರಿಗೆ, ಬೊಲೆಸ್ಲೋಗೆ!''

"ಆದರೆ ಈಗ ತಾನೆ ನೀನು ಹೇಳಿದೆ, ಅಂಥ ವ್ಯಕ್ತಿ ಯಾರೂ ಇಲ್ಲ ವೆಂದು !" ಎಂದೆ ಮೊದಲಿನಂತೆಯೇ ಕಕ್ಕಾಬಿಕ್ಕಿಯಾಗಿ.

"ಅಯ್ಯೋ, ದೇವರೇ! ಇಲ್ಲದೆಹೋದರೆ ಆದರಿಂದ ನನಗೇನು! ಯಾರೂ **ಇಲ್ಲ,** ನಿಜ; ಆದರೆ, ಬೊಲೆಸ್ಲೊ ಇದ್ದಾನೆಂದು ನನ್ನ **ಕಲ್ಪನೆ.** ಅವನು ವಾಸ್ತವವಾಗಿ ಬದುಕಿದ್ದಿದ್ದರೆ ಹೇಗೋ ಹಾಗೆ ಆತನಿಗೆ ಬರೆಯು ತ್ತೇನೆ; ಆತ ನನಗೆ ಉತ್ತರ ಕೊಡುತ್ತಾನೆ; ನಾನು ಮತ್ತೆ ಬರೆಯುತ್ತೇನೆ, ಮತ್ತೆ ಆತ ಮಾರುತ್ತರ ಕೊಡುತ್ತಾನೆ — ." ಕಟ್ಟಕಡೆಗೆ ನನಗೆ ಅರ್ಥವಾ ಯಿತು. ದೇಹದ ನೋವಿನಿಂದ ಹೇಗೋ ಹಾಗೆ ಧಕ್ಕೆ ತಗುಲಿದಂತಾಗಿ, ಏನೋ ಅಪರಾಧವೆಸಗಿದಂತೆ ಭಾವನೆಯಾಯಿತು, ನಾಚಿಕೆಯಾಯಿತು. ನನ್ನ ಬಳಿಯಲ್ಲಿ, ತೋಳುಚಾಚಿನಷ್ಟು ಹತ್ತಿರದಲ್ಲಿ, ಇದ್ದ ಈ ಮಾನವ ಪ್ರಾಣಿಗೆ ಪ್ರೀತಿಯ ಲವಲೇಶವನ್ನು ತೋರುವವರೊಬ್ಬರಿರಲಿಲ್ಲ ಪ್ರಪಂಚದಲ್ಲಿ; ತಂದೆ ತಾಯಿಯಿಲ್ಲ, ಕೆಳೆಯರಿಲ್ಲ, ಯಾರೂ ಇಲ್ಲ! ಈ ಬಡಪ್ರಾಣಿ ತನಗಾಗಿ ಒಬ್ಬ ಇನಿಯನನ್ನು, ಮದುಮಗನನ್ನು, ಸೃಷ್ಟಿಸಿಕೊಂಡಿತ್ತು!

ಅವಳು ಬೇಸರ ಹಿಡಿಸುವ ಗೊರಗು ದನಿಯಲ್ಲಿ ಮುಂದುವರಿಸಿದಳು: "ಈ ಕಾಗದವನ್ನು ನೀವು ನನಗಾಗಿ ಬೊಲೆಸ್ಲೋಗೆ ಬರೆದಿರಿ - ಅದನ್ನು ನನಗೆ ಗಟ್ಟಿಯಾಗಿ ಓದಿಹೇಳುವಂತೆ ಬೇರೊಬ್ಬರನ್ನು ಕೇಳಿಕೊಂಡೆ. ಕಾಗದ ಕೇಳಿ, ಬೊಲೆಸ್ಲೊ ಬದುಕಿದ್ದಾನೆಂದು ಬಗೆದೆ. ಆಮೇಲೆ, ಬೊಲೆಸ್ಲೋವಿನಿಂದ ಟೆರಿಸ್ಸಾಗೆ - ಅಂದರೆ ನನಗೆ - ಉತ್ತರ ಬೇಕೆಂದು ಕೋರಿದೆ. ಬೊಲೆಸ್ಲೊ ಎಲ್ಲಿಯೋ ಬದುಕಿರಬೇಕೆಂದು ನನಗೆ ಖಂಡಿತವಾಗಿ ಅನ್ನಿಸುತ್ತಿದೆ; ಎಲ್ಲೋ ನಾನರಿಯೆ. —ಹೀಗೆ, ನನಗೆ ಜೀವದಿಂದಿರಲು ಸಾಧ್ಯವಾಗಿದೆ. ಅಷ್ಟೊಂದು ಕಷ್ಟವಾಗಿಲ್ಲ, ಅಷ್ಟೊಂದು ಭಯಂಕರವಾಗಿಲ್ಲ, ಅಷ್ಟೊಂದು ಒಂಟಿಯಾಗಿಲ್ಲ!"

ಅಂತೂ, ಅಂದಿನಿಂದ ಮೊದಲ್ಗೊಂಡು, ವಾರಕ್ಕೆ ಎರಡು ದಿನ ಕ್ರಮ ವಾಗಿ, ಟೆರಿಸಾ ಇಂದ ಬೊಲೆಸ್ಲೋವಿಗೂ ಬೊಲೆಸ್ಲೋವಿನಿಂದ ಟೆರಿಸ್ಸಾಗೂ ಕಾಗದಗಳನ್ನು ಬರೆದೆ. ನಾನು ಅವುಗಳನ್ನು ಮನಃಪೂರ್ವಕವಾಗಿ ಬರೆದೆ; ಅವು, - ಅದರಲ್ಲೂ ಉತ್ತರಗಳು, - ಭಾವಾವೇಶದಿಂದ ತುಂಬಿ ತುಳುಕು ತ್ತಿದ್ದುವು. ಅವಳು ಕಾಗದಗಳನ್ನು ಓದಿಸಿ ಕೇಳುತ್ತಿದ್ದಳು. ಕೇಳಿ ಅಳು

ತ್ತಿದ್ದಳು, ನಗುತ್ತಿದ್ದಳು, ಸುಖಪಡುತ್ತಿದ್ದಳು. ಇದಕ್ಕೆಲ್ಲ ಪ್ರತಿಯಾಗಿ, ನನ್ನ ಬಟ್ಟೆಬರೆಗಳ ಉಸ್ತುವಾರಿ ನೋಡಿಕೊಳ್ಳುತ್ತಿದ್ದಳು. ನನ್ನ ಷರಟುಗಳನ್ನೂ ಕಾಲುಚೀಲಗಳನ್ನೂ ಹರಿದಿದ್ದರೆ ಸರಿಪಡಿಸಿಕೊಡುತ್ತಿದ್ದಳು; ಜೋಡುಗಳನ್ನು ಒರಸಿ, ಟೋಪಿಯ ಧೂಳು ಝಾಡಿಸಿಡುತ್ತಿದ್ದಳು.

ಮೂರು ತಿಂಗಳ ತರುವಾಯ ಏನೋ ಗುಮಾನಿಯ ಮೇಲೆ ಅವಳನ್ನು ದಸ್ತಗಿರಿಮಾಡಿ ಜೈಲಿಗೆ ಹಾಕಿದರು. ಅವಳನ್ನು ಮತ್ತೆ ಕಾಣಲಾಗಲಿಲ್ಲ. ಅವಳು ಸತ್ತುಹೋಗಿರಬೇಕು.

———:———

# ಇಪ್ಪತ್ತಾರು ಗಂಡಸರು ಮತ್ತು ಒಬ್ಬ ಹುಡುಗಿ *

ಅನುವಾದಕ : ಕೆ. ಜಿ. ರಾಮಚಂದ್ರರಾಯ

ನಾವಿದ್ದವರು ಇಪ್ಪತ್ತಾರು ಜನ ಜೀವ - ಯಂತ್ರಗಳು. ಒಂದು ತಗ್ಗಿನ ಮನೆಯಲ್ಲಿ ಕೂಡುಹಾಕಲ್ಪಟ್ಟಿದ್ದೆವು. ಬೆಳಗಿನಿಂದ ಸಂಜೆಯವರೆಗೆ ಒಂದೇ ಸಮನಾದ ದುಡಿತ. ಬ್ರೆಡ್ಡು ಬಿಸ್ಕತ್ತು ಮಾಡುವ ಮನೆ ನಮ್ಮದು. ಮನೆಗೆ ಇದ್ದುದು ಒಂದು ಕಿಟಿಕಿ. ಅದೂ ಹಿಟ್ಟಿನಿಂದ ತುಂಬಿ ಸೂರ್ಯನ ರಶ್ಮಿಯನ್ನು ತಡೆಯುತ್ತಿತ್ತು. ಜತೆಗೆ ಕಿಟಕಿಗೆ ಕಬ್ಬಿಣದ ಸಲಾಕೆಗಳು. ಮಾಡುತ್ತಿರುವ ರೊಟ್ಟಿಯನ್ನು ಹೊಟ್ಟೆಗಿಲ್ಲದಿರುವ ಹೊರಗಿನವರಿಗೆ ನಾವೆಲ್ಲಿ ಕೊಡುವೆವೊ ಎಂಬ ಹೆದರಿಕೆ ನಮ್ಮ ಯಜಮಾನನಿಗೆ. ನಮಗೆ ಆತನು ಕೊಡುತ್ತಿದ್ದುದು - ಹರಕು ಮುರುಕು, ಕೆಟ್ಟದ್ದು.

ಬೆಳಿಗ್ಗೆ ೫ ಗಂಟೆಗೆ ಮುಂಚೆಯೇ ಏಳಬೇಕು. ಸರಿಯಾಗಿ ನಿದ್ದೆಯನ್ನಂತೂ ಮಾಡುವ ಹಾಗಿಲ್ಲ. ೬ ಗಂಟೆಯ ಒಳಗಾಗಿ ಕೆಲಸಗಳನ್ನು ಆರಂಭಿಸಬೇಕು. ರಾತ್ರಿ ಸುಮಾರು ೧೦ ಗಂಟೆಯವರೆಗೆ ಈ ರೀತಿ ದುಡಿಯಬೇಕು. ದಿನವಹಿ ಬರುವಾಗ ಕಾಲಿನ ಜತೆಯಲ್ಲಿ ಬರುವ ಧೂಳು, ಗಾಳಿ ತರುತ್ತಿದ್ದ ಧೂಳು ಇದರ ಜತೆಗೆ ಹಿಟ್ಟು ಕಲಿಸುವಾಗ ಮೈಯಿಂದ ಬರುತ್ತಿದ್ದ ಬೆವರು ಮೂರೂ ಸೇರುತ್ತಿದ್ದವು. ನಾವು ಮಾಡುತ್ತಿದ್ದ ಕೆಲಸದಲ್ಲಿ ನಮಗೇ ಅಸಹ್ಯ. ನಾವು ಮಾಡಿದ ರೊಟ್ಟಿಯನ್ನು ನಾವೆಂದೂ ತಿನ್ನುತ್ತಿರಲಿಲ್ಲ. ನಾವೊಬ್ಬರಿಗೊಬ್ಬರು ಮಾತನಾಡುತ್ತಿರಲಿಲ್ಲ. ಏನು ಮಾತನಾಡಬೇಕೆಂದು ತಿಳಿಯದೆ ಮೌನವಾಗಿರುತ್ತಿದ್ದೆವು. ಜಗಳವಾದ ಹೊರತೂ ನಮ್ಮಲ್ಲಿ ಶಬ್ದವಾಗುತ್ತಿರಲಿಲ್ಲ. ಜಗಳವಾಡುವದಕ್ಕೂ ಕಾರಣ ಬೇಕು. ಅದಕ್ಕೂ ಸಹಾ ಕಾರಣವಿರಲಿಲ್ಲ. ಮನುಷ್ಯನು ಅರ್ಧ ಸತ್ತಮೇಲೆ ಯಾವ ಕೆಲಸವನ್ನು ಮಾಡಲು ಉತ್ಸಾಹ ಪಡುತ್ತಾನೆ ; ಆ ಸ್ಥಿತಿ ನಮ್ಮದಾಗಿತ್ತು. ದಿನವೂ ದುಡಿದು ದುಡಿದು ಒಂದೊಂದು ವೇಳೆ ನಮ್ಮಷ್ಟಕ್ಕೆ ನಾವೇ ಹಾಡಿಕೊಳ್ಳುತ್ತಿದ್ದೆವು. ಕೆಲವು ವೇಳೆ ಯಾವದಾದರೊಂದು ಪದವನ್ನು

---

* Twenty six men and a girl.

ಒಟ್ಟಿಗೆ ಹೇಳುತ್ತಿದ್ದೆವು. ಇಲ್ಲವೆ ಒಬ್ಬರು ಯಾರಾದರೂ ಹಾಡುವುದು ಮಿಕ್ಕವರು ಕೇಳುತ್ತಾ ತಮ್ಮ ಕೆಲಸವನ್ನು ಮಾಡುವದು. ನಾವು ಹಾಡಿದ್ದು ಹೊರಗೆ ಹೋಗಲು ಸಹ ಹೆಚ್ಚು ಸಂದಿರಲಿಲ್ಲ. ಹಾಡುತ್ತಿರುವೆವೆಂದು ಆಗುವ ಕೆಲಸ ನಿಲ್ಲುವಂತಿಲ್ಲ. ಉರಿಯುವ ಬೆಂಕಿ ಉರಿಯಬೇಕು, ಹೋಗುವ ಹೊಗೆ ಹೋಗಬೇಕು, ಕುದಿಯುವ ನೀರು ಕುದಿಯಬೇಕು, ಆಗುವ ರೊಟ್ಟಿ ಆಗಲೇ ಬೇಕು.

ಆದರೆ ಹಾಡುವ ಜತೆಗೆ ನಮಗೆ ಮತ್ತೊಂದು ಅನುಕೂಲವಿತ್ತು. ನಾವು ಕೆಲಸ ಮಾಡುತ್ತಿದ್ದ ಕೋಣೆಯ ಮಹಡಿಯ ಮೇಲೆ ಕಸೂತಿ ಕೆಲಸಗಳ ಕಾರ್ಖಾನೆ ಇತ್ತು. ಅಲ್ಲಿ ಕೆಲಸಕ್ಕೆ ಇರುವ ಹುಡುಗಿಯರಲ್ಲಿ ೧೬-೧೭ ವರ್ಷದ ಬಾಲೆಯೊಬ್ಬಳಿದ್ದಳು. ಪ್ರತಿ ದಿನವೂ ಮುಂಜಾನೆ ಬಂದು ಕಿಟಕಿಯ ಬಳಿ ಬಾಗಿ ನೋಡುವಳು. ಮುದ್ದಾದ ಗುಂಡನೆಯ ಮುಖ. ಮುಖಕ್ಕೆ ತಕ್ಕ ತುಟಿಗಳು, ನೀಲಿಯ ಕಣ್ಣುಗಳು. ತನ್ನ ಇಂಪಾದ ದನಿಯಲ್ಲಿ “ಬಂದಿಗಳೇ, ಅಯ್ಯೋ! ಪಾಪ” ಎಂದು ಪಶ್ಚಾತ್ತಾಪ ತೋರಿ “ರೊಟ್ಟಿ ಕೊಡಿ” ಎಂದು ಕೇಳುತ್ತಿದ್ದಳು. ಆ ಧ್ವನಿ ನಮ್ಮ ಕಿವಿಗೆ ಬೀಳುತ್ತಲೇ ಎಲ್ಲರೂ ಆ ಕಡೆ ತಿರುಗಿ ನೋಡಿ ಬಾಗಿಲು ತೆಗೆಯಲು ನಾನು ಮುಂದು ತಾನು ಮುಂದೆಂದು ಹೋಗುತ್ತಿದ್ದೆವು. ಅವಳು ನಗುತ್ತಾ ಒಳಗೆ ಬಂದು ಹೊಸಲಿನ ಮೇಲೆ ನಿಲ್ಲುತ್ತಿದ್ದಳು. ನಾವೆಲ್ಲರೂ ತಗ್ಗಿನಲ್ಲಿದ್ದುದರಿಂದ ತಲೆಯೆತ್ತಿ ಅವಳನ್ನು ನೋಡುತ್ತಿದ್ದೆವು. ಮಾತನಾಡಿಸುವುದರಲ್ಲೂ ನಾವು ಮರ್ಯಾದೆ ತೋರುತ್ತಿದ್ದೆವು. ಧ್ವನಿಯು ಸಹ ಮೊದಲಿಗಿಂತಲೂ ಕುಗ್ಗಿ ಮೃದುವಾಗುತ್ತಿತ್ತು. ಅವಳು ಬಂದಾಗ ಮಾತ್ರ ನಮ್ಮ ರೀತಿ ನೀತಿಗಳನ್ನೆಲ್ಲಾ ಬಹಳ ಬದಲಾಯಿಸುತ್ತಿದ್ದೆವು. ಒಂದು ತಟ್ಟೆಯ ತುಂಬ ಚೆನ್ನಾಗಿ ಬೆಂದ ರೊಟ್ಟಿಯನ್ನು ಅವಳ ಸೆರಗಿಗೆ ಹಾಕುತ್ತಿದ್ದೆವು. “ಯಜಮಾನನ ಕೈಗೆ ಸಿಕ್ಕು ಬಿದ್ದೀಯೆ ಜೋಕೆ” ಎಂದು ಎಷ್ಟೋ ವೇಳೆ ಅವಳಿಗೆ ಎಚ್ಚರಿಕೆ ಕೊಡುತ್ತಿದ್ದೆವು. ಅವಳು ಅದನ್ನು ಲಕ್ಷಿಸದೆ ನಗುತ್ತಾ ಮಿಂಚಿನಂತೆ ಹಾರಿ ಹೋಗುತ್ತಿದ್ದಳು.

ಅವಳು ತೆರಳಿದ ಎಷ್ಟೋ ಹೊತ್ತಿನ ಮೇಲೆ ಅವಳ ವಿಷಯವಾಗಿ ನಮ್ಮ ನಮ್ಮಲ್ಲಿಯೇ ಮಾತನಾಡಿಕೊಳ್ಳುತ್ತಿದ್ದೆವು. ಅವಳ ವಿಷಯದಲ್ಲಿ ನಮ್ಮೆಲ್ಲರಿಗೂ ಇದ್ದುದು ಒಂದೇ ಅಭಿಪ್ರಾಯ. ಕೆಲವರು ಮುಂಚೆ ಹೇಳುತ್ತಿದ್ದೆವು

ಮತ್ತೆ ಕೆಲವರು ಆಮೇಲೆ. ಅಷ್ಟೆ. ಹೆಂಗಸಿನ ಮಾತು ಬಂದಾಗ ಎಷ್ಟೋ ವೇಳೆ ಹದವಿಾರಿ ಮಾತನಾಡುತ್ತಿದ್ದೆವು. ಆದರೆ ಒಂದು ವೇಳೆಯೂ ಅವಳ ವಿಷಯದಲ್ಲಿ ಆ ಭಾವನೆಗಳಾವುವೂ ಬರುತ್ತಿರಲಿಲ್ಲ. ಅವಳ ವಿಷಯವಾಗಿ ಹಾಸ್ಯಮಾಡಲು ಸಹಾ ಯಾರಿಗೂ ಧೈರ್ಯವಿರಲಿಲ್ಲ. ಹೆಚ್ಚುಹೊತ್ತು ನಮ್ಮಲ್ಲಿ ೞವಳು ನಿಲ್ಲದೇ ಇದ್ದುದೇ ಇದಕ್ಕೆ ಕಾರಣವಿರಬಹುದೆಂದು ಈಗ ಭಾವಿಸುತ್ತೇನೆ. ನಮ್ಮಗಳೆದುರಿಗೆ ಮಿಂಚುಹುಳದ ಬೆಳಕಿನಂತೆ ತೋರಿ ಮಾಯವಾಗುತ್ತಿದ್ದಳು. ಚಿಕ್ಕವಳೂ, ಸ್ಫುರದ್ರೂಪಿಯೂ ಆದುದರಿಂದಲೇ ನಾವೆಲ್ಲರೂ ಅವಳನ್ನು ಅಷ್ಟು ಗೌರವಿಸುತ್ತಿದ್ದೆವು. ಸುಂದರವಾದ ವಸ್ತುಗಳನ್ನು ನೋಡಿದಾಗಲೆಲ್ಲಾ ಹಾಗೆಯೇ ಇರಬಹುದು ಎಂದು ಭಾಸವಾಗುತ್ತದೆ. ಮತ್ತೊಂದೇನೆಂದರೆ, ನಾವುಗಳು ಒರಟು ಕೆಲಸಗಳಲ್ಲಿದ್ದವರಾದಾಗ್ಯೂ, ಮನುಷ್ಯರಾಗಿದ್ದೆವು. ಆ ಮಾನುಷತ್ವದ ದೆಸೆಯಿಂದ ಯಾವುದಾದರೊಂದು ವಸ್ತುವನ್ನು ಪೂಜಿಸದಿರಲು ನಮ್ಮಿಂದ ಆಗುತ್ತಿರಲಿಲ್ಲ. ಹಾಗೆ ಪೂಜಿಸಲು ನಮಗೆ 'ಅವಳು' ಬಿಟ್ಟರೆ ಬೇರೆ ಇಲ್ಲ. ಅವಳನ್ನು ಬಿಟ್ಟು, ಅಲ್ಲಿದ್ದವರಲ್ಲಿ ಮತ್ತೆ ಯಾರೂ ನಮ್ಮನ್ನು ವಿಚಾರಿಸುತ್ತಿರಲಿಲ್ಲ. ಆದುದರಿಂದಲೆ ಅವಳಲ್ಲಿ ನಮಗೆ ಅಷ್ಟು ಗೌರವ. ದಿನವೂ ಅವಳನ್ನು ಕಾಣುವುದು ಅವಳಿಗೆ ಬೇಕಾದಷ್ಟು ರೊಟ್ಟಿಯನ್ನು ಕೊಡುವದು ನಮ್ಮ ದಿನಚರಿಗಳಲ್ಲಿ ಒಂದಾಯಿತು. ನಾವು ಹೇಳುತ್ತಿದ್ದ ಎಲ್ಲ ಬುದ್ಧಿ ಮಾತುಗಳನ್ನು ಆದರದಿಂದ, ನಗುತ್ತಾ ಕೇಳುತ್ತಿದ್ದಳು. ಆದರೆ ಎಂದೂ ಆದರಂತೆ ನಡೆಯುತ್ತಿರಲಿಲ್ಲ. ನಮ್ಮ ಮನಸ್ಸಿಗೆ ಅದು ಅಷ್ಟು ಅಸಮಾಧಾನವನ್ನುಂಟುಮಾಡುತ್ತಿರಲಿಲ್ಲ. ಅವಳು ಹೇಳಿದುದೆಲ್ಲವನ್ನೂ ಶಿರಸಾವಹಿಸಿ ಇಲ್ಲವೆನ್ನದೆ ಮಾಡುತ್ತಿದ್ದೆವು.

ಒಂದು ಸಲ ನಮ್ಮಲ್ಲಿ ಒಬ್ಬನು ತನ್ನ ಕೊಳಕು ಷರಟನ್ನು ಸ್ವಲ್ಪ ಹೊಲಿದು ಕೊಡೆಂದು ಕೇಳಿದನು. ಅವಳು ರೇಗಿ "ನನಗೆ ಬೇರೆ ಉತ್ತಮ ಕೆಲಸವಿದೆ" ಎಂದು ತಿರಸ್ಕಾರದಿಂದ ನುಡಿದು ಬಿಟ್ಟಳು. ನಮಗೆಲ್ಲರಿಗೂ ಅವನ ಪೆಚ್ಚುತನಕ್ಕೆ ನಗು ಬಂತು. ಅಂದಿನಿಂದ ನಾವು ಅವಳಿಗೆ ಯಾವ ಕೆಲಸವನ್ನೂ ಹೇಳುತ್ತಿರಲಿಲ್ಲ. ಒಂದು ಮಾತಿನಲ್ಲಿ ಹೇಳುವದಾದರೆ, ಅವಳಲ್ಲಿ ನಮ್ಮೆಲ್ಲರಿಗೂ "ನಿಷ್ಕಾಮ ಪ್ರೇಮ."

ಒಂದೊಂದು ಸಲ ನಮ್ಮಲ್ಲಿಯೇ ಯಾರಿಗಾದರೂ "ಏಕೆ ಅವಳಲ್ಲಿ

ನಮಗಷ್ಟು ಪ್ರೀತಿ, ಅವಳನ್ನೇಕೆ ಹೀಗೆ ಉಬ್ಬಿಸಿ ಕೆಡಿಸುತ್ತಿದ್ದೇವೆ. ಅವಳಲ್ಲಿ ರುವ ವಿಶೇಷವಾದರೂ ಏನು ? ಅವಳ ವಿಷಯ ವಿಪರೀತ ಮಾಡುತ್ತಲಿದ್ದೇವೆ" ಎಂದೆನಿಸುವಂತಿತ್ತು.

ನಮಗೆ ಪ್ರೀತಿಸಲು ಒಂದು ವಸ್ತು ಬೇಕಿತ್ತು. ನಮಗೆ ಬೇಕಾದ ಗುಣ ಗಳನ್ನು ಅವಳಲ್ಲಿ ಕಂಡೆವು. ಆದ್ದರಿಂದಲೆ ಅವಳನ್ನು ಅಷ್ಟು ಪ್ರೀತಿಸು ತ್ತಿದ್ದೆವು. ನಮ್ಮೆಲ್ಲರಿಗೂ ಅವಳು ದೇವಿಯಾಗಿದ್ದಳು. ಇದನ್ನು ವಿರೋಧಿಸು ತ್ತಿದ್ದವರೆಲ್ಲರನ್ನೂ ನಮ್ಮ ಶತ್ರುಗಳೆಂದು ಭಾವಿಸುತ್ತಿದ್ದೆವು. ನಾವು ಯಾವು ದನ್ನು ಪ್ರೀತಿಸುತ್ತಿದ್ದೆವೊ ಅದನ್ನು ಇತರರು ಗೌರವಿಸುವಂತೆ ಮಾಡುತ್ತಿದ್ದೆವು.

* * * *

ನಮ್ಮ ರೊಟ್ಟಿಯ ಕಾರ್ಖಾನೆಯ ಜತೆಗೆ ನಮ್ಮ ಯಜಮಾನ ಪಕ್ಕ ದಲ್ಲಿಯೇ ಒಂದು ಅಲಂಕಾರದ ಅಂಗಡಿಯನ್ನೂ ಇಟ್ಟಿದ್ದ. ಅಲ್ಲಿಯೂ ನಾಲ್ವರು ಕೆಲಸಗಾರರಿದ್ದರು. ನಮಗಿಂತಲೂ ಚೊಕ್ಕಟವಾದ ಕೆಲಸ ಅವ ರದು. ನಮ್ಮನ್ನು ಅವರ ಜತೆಗೆ ಸೇರಿಸುತ್ತಿರಲಿಲ್ಲ, ಇದರಿಂದ ಅವರಿಗೆ ತಾವು ನಮಗಿಂತಲೂ ಉತ್ತಮರೆಂಬ ಜಂಭ. ಅವರೊಡನೆ ನಾವೂ ಮಾತನಾಡು ತ್ತಿರಲಿಲ್ಲ. ಅವರ ಸುಖವನ್ನು ಕಂಡರೆ ನಮಗೆ ಅವರ ಮೇಲೆ ಹೊಟ್ಟೆಯ ಕಿಚ್ಚು. ಅವರಿಗೆ ನಮಗಿಂತಲೂ ಕೆಲಸ ಕಡಿಮೆ ಸಂಬಳ ಜಾಸ್ತಿ. ಒಳ್ಳೆಯ ತಿಂಡಿಯ ಪದಾರ್ಥ ಅವರಿಗೆ. ಜತೆಗೆ ಇರಲು ಉತ್ತಮವಾದ ಮನೆ- ಅಂಗಡಿ. ಆದುದರಿಂದಲೇ ಅವರು ಅಷ್ಟು ಆರೋಗ್ಯವಾಗಿಯೂ ಚೊಕ್ಕಟ ವಾಗಿಯೂ ಇದ್ದುದು. ನಾವೆಲ್ಲರೂ ಬಿಳಚಿಕೊಂಡಿದ್ದೆವು. ಕೆಲವರಿಗೆ ಅಂಟು ರೋಗಗಳು ಮತ್ತೆ ಕೆಲವರಿಗೆ ಕ್ಷಯ ಹೀಗಿತ್ತು ನಮ್ಮ ಸ್ಥಿತಿ.

ಹಬ್ಬ, ರಜಾದಿನಗಳಲ್ಲಿ ಅವರಿಗೆ ರಜಾ. ಬಣ್ಣಬಣ್ಣದ ಬಟ್ಟೆಗಳನ್ನು ಹಾಕಿಕೊಂಡು ಸುತ್ತಾಡಲು ಅವರು ಹೋಗುತ್ತಿದ್ದರು. ನಾವು ಕೊಳೆಯಲ್ಲಿ ಉತ್ತಮವಾದುವುಗಳನ್ನು ಧರಿಸಿ ಹೊರಗೆ ಬರಬೇಕಾಗಿತ್ತು. ನಮ್ಮನ್ನು ನೋಡಿ ದರೆ ಪೋಲೀಸಿನವರು ಕೂಡ ದೂರ ತಳ್ಳುತ್ತಿದ್ದರು.

ಅವರ ಪೈಕಿ ಒಬ್ಬನನ್ನು 'ಕುಡುಕ' ನೆಂದು ತಿಳಿದು ನಮ್ಮ ಯಜಮಾನ ಕಳುಹಿಸಿಬಿಟ್ಟನಂತೆ. ಇನ್ನುಳಿದವನೊಬ್ಬ 'ಸಿಪಾಯಿ.' ಅವನ ಶಿಸ್ತೇ ಶಿಸ್ತು. ಒಂದೊಂದು ವೇಳೆ ಒಂದೊಂದು ವೇಷ ಹಾಕುತ್ತಿದ್ದನು. ಅವನನ್ನು ನೋಡಲು

ನಮ್ಮೆಲ್ಲರಿಗೂ ಉತ್ಸಾಹ. ಒಂದೊಂದು ಸಲ ಅವನೇ ನಮ್ಮ ಕಾರ್ಖಾನೆಗೆ ಬರುತ್ತಿದ್ದ.

ಮೊದಲೇ ಸಿಪಾಯಿ. ದಪ್ಪನೆಯ ಗುಂಡು ಮುಖ. ಮುಖಕ್ಕೆ ತಕ್ಕ ಮೀಸೆ. ಹಾಕಿರುವದು ಒಳಗೆ ಒಂದು 'ವೇಸ್ಟ್' ಕೋಟು, ಕೋಟಿಗೆಲ್ಲಾ ಚಮಕಿಯ ಅಲಂಕಾರ, ಹೊಳೆಯುವ ಮುತ್ತಿನ ಚಿಪ್ಪಿನ ಗುಂಡಿ, ಬಣ್ಣದ ಕರ ವಸ್ತ್ರ, ಅವನ ಠೀವಿಯೇ ಠೀವಿ.

ಅವನು ನಮ್ಮನ್ನು ಸ್ವಲ್ಪ ಕನಿಕರದಿಂದ ಕಾಣುತ್ತಿದ್ದನೆಂದೇ ಹೇಳ ಬೇಕು. ಅನೇಕ ವೇಳೆ ಬಂದು ನಮ್ಮನ್ನು ವಿಚಾರಿಸುತ್ತಿದ್ದ. ಅವನ ಸಂಗಡ ನಮ್ಮ ಕಷ್ಟ ಸುಖಗಳನ್ನು ಹೇಳಿಕೊಳ್ಳುತ್ತಿದ್ದೆವು. ನಮ್ಮ ಯಜಮಾನ ನನ್ನು ಅವನ ಮುಂದೆ ಹೀನಾಮಾನವಾಗಿ ಬಯ್ದು ಹೇಳುತ್ತಿದ್ದೆವು. ಅದೆಲ್ಲ ವನ್ನೂ ಇಲ್ಲಿ ಹೇಳುವದು ಸಾಧ್ಯವಿಲ್ಲ. ಬರೆಯುವುದು ತರವಲ್ಲ. ಸಿಪಾಯಿ ಮೀಸೆ ತಿರುವುತ್ತಾ ಎಲ್ಲವನ್ನೂ ಕೇಳಿದ.

"ಸುತ್ತಮುತ್ತಲೂ ಅನೇಕ ಹುಡುಗಿಯರಿದ್ದಾರಲ್ಲವೇ" ಎಂದು ಆರಂಭಿ ಸಿದ. ಯಾರಿಗೂ ಏನು ಹೇಳಲೂ ತೋರಲಿಲ್ಲ. ಕೆಲವರು ಮುಸಿ ಮುಸಿ ನಕ್ಕರು. ನಮ್ಮಲ್ಲಿ ಒಬ್ಬನು ಮಾತ್ರ 'ಹೌದು' ಎಂದುತ್ತರಕೊಟ್ಟ.

"ನಿಮಗೂ ಆನಂದವಲ್ಲವೆ" ಎಂದು ಪಿಳಿಪಿಳನೆ ಕಣ್ಣು ಮಿಟಕಿಸುತ್ತಾ ಸಿಪಾಯಿ ಕೇಳಿದ. ಎಲ್ಲರಿಗೂ ನಗು ಬಂತು. ಒಳಗೊಳಗೇ ಒಬ್ಬರ ಮುಖ ವನ್ನೊಬ್ಬರು ನೋಡುತ್ತಾ ನಕ್ಕೆವು. ಸಿಪಾಯಿಗಿಂತಲೂ ಶೂರರು ನಾವೆಂದು ತೋರಿಸಿಕೊಳ್ಳಬೇಕೆಂಬ ಆಶೆ ನಮಗಿದ್ದರೂ ಧೈರ್ಯವಿರಲಿಲ್ಲ.

"ಪಾಪ, ನೀವು ಹೇಗೆ ತಾನೆ ಅನುಭವಿಸಬಲ್ಲಿರಿ. ಹೆಂಗಸರು ಯಾವಾ ಗಲೂ ಶೂರರನ್ನು ಕಂಡರೆ ಪ್ರೀತಿಸುತ್ತಾರೆ. ಮನುಷ್ಯ ಚೊಕ್ಕಟವಾಗಿ ಕಾಮಣ್ಣನಂತಿರಬೇಕು ಅವರಿಗೆ. ನಿಮ್ಮಿಂದ ಅದು ಎಲ್ಲಿ ಸಾಧ್ಯ. ನೋಡಿ ಹೀಗಿರಬೇಕು ಎಂದು ತನ್ನ ತೋಳಿನ ಮಾಂಸ ಖಂಡವನ್ನು ತೋರಿಸಿದ. ಬಿಳಿಯ ದೇಹ, ಉಬ್ಬಿದ ಮಾಂಸಖಂಡ, ಬಂಗಾರದಂತಹ ಕೂದಲು-ಜತೆಗೆ ಅವನು ಹಾಕುತ್ತಿದ್ದುದು ಸುಂದರವಾದ ಬಟ್ಟೆಗಳು.

"ನೋಡಿ, ಮನುಷ್ಯನಿಗೆ ಇವೆಲ್ಲವೂ ಬೇಕು. ಆಗಲೇ ಹೆಂಗಸು ತಾನಾಗಿ

ಮೆಚ್ಚುತ್ತಾಳೆ. ಎಲ್ಲಾ ಹೆಂಗಸರೂ ನನ್ನ ಪ್ರೀತಿಸುವುದು ಇದಕ್ಕಾಗಿ. ಗುಂಪು ಗುಂಪಾಗಿ, ನಾನು ಮುಂದು ತಾನು ಮುಂದೆಂದು ಸ್ಪರ್ಧೆ ಮಾಡುತ್ತಾರೆ" ಎಂದು ಹೇಳುತ್ತಾ ಸರಿಯಾಗಿ ಹೊಸಲ ಮೇಲೆ ಕೂತು ತನ್ನ ಕಥೆಯನ್ನು ಹೇಳುವದಕ್ಕೆ ಆರಂಭಿಸಿದ. ತಾನು ಪ್ರೀತಿಸಿದುದೆಷ್ಟು ಮಂದಿ, ತಾವಾಗಿ ಬಂದವು ಎಷ್ಟು, ತಾನು ತಿರಸ್ಕರಿಸಿದುದೆಷ್ಟು ಎಲ್ಲವನ್ನೂ ಸುಮಾರು ಒಂದು ಗಂಟೆಯ ಕಾಲ ಹೇಳಿದ. ಕೇಳಲು ಚೆನ್ನಾಗಿತ್ತು ; ಹೊತ್ತೂ ಕಳೆಯಿತು.

ಅವನು ಹೊರಟು ಹೋದ ಮೇಲೆ, ನಾವು ಅವನ ವಿಷಯವಾಗಿ ಹಾಗೆಯೇ ಆಲೋಚಿಸಿದೆವು. "ಎಷ್ಟು ಒಳ್ಳೆಯವನವನು. ನಮ್ಮಲ್ಲಿ ಒಬ್ಬ ನಂತೆ ನಡೆದುಕೊಳ್ಳುತ್ತಿದ್ದಾನೆ" ಎಂದು ಎಲ್ಲರಿಗೂ ಅವನ ಮೇಲೆ ಅಭಿಮಾನ ಹುಟ್ಟಿತು. ಇನ್ನು ಕೊಂಚ ಹೊತ್ತು ಅವನ ಮತ್ತು ಅವನ ಪ್ರೇಮ ಪ್ರಸಂಗಗಳ ವಿಷಯ ಹಾಗೆಯೇ ಮಾತನಾಡತೊಡಗಿದೆವು. ನಮ್ಮ ಸುತ್ತ ಮುತ್ತಲೂ ಅನೇಕ ಸುಂದರಿಯರಿದ್ದರು. ಈ ಹುಡುಗಿಯರು ನಮ್ಮನ್ನು ಕಂಡಾಗ ಮಾತ್ರ ಏಕೆ ಅಷ್ಟು ತಿರಸ್ಕಾರ ಭಾವದಿಂದ ಕಾಣುತ್ತಿದ್ದರೆಂದು ಈಗ ತಿಳಿಯ ಬಂತು. ಹೀಗೆ ಮಾತನಾಡುತ್ತಾ ನಮ್ಮ ಹುಡುಗಿಯ ಜ್ಞಾಪಕ ಬಂತು. "ಸದ್ಯ ಅವಳನ್ನು ಮಾತ್ರ ಮುಟ್ಟದಿರಲಿ" ಎಂದು ನಮ್ಮಲ್ಲಿ ಯೊಬ್ಬ ನುಡಿದ. ಅವಳ ವಿಷಯ ಎಲ್ಲರಿಗೂ ಈವರೆಗೂ ಮರೆತು ಹೋಗಿತ್ತು. ಈಗ ಎಲ್ಲರಿಗೂ ಅದೇ ಯೋಚನೆ. "ಅವನು ಹಾಗೆ ಮಾಡ ಲಾರ" ನೆಂದು ಕೆಲವರೂ "ಒಂದು ವೇಳೆ ಅವನು ಹಾಗೆ ಪ್ರಯತ್ನಪಟ್ಟರೂ ಅವಳು ಇಂತಹ ಹೇಸಿಗೆಯ ಕೆಲಸಕ್ಕೆ ಒಪ್ಪಲಾರಳೆಂದು" ಕೆಲವರೂ "ಏನೋ, ಹೇಗೋ" ಎಂದು ಮತ್ತೆ ಕೆಲವರೂ, "ಅವನೇನಾದರೂ ಅವಳ ಮೇಲೆ ಕೈ ಮಾಡಿದರೆ ಅವನ ತಲೆಯನ್ನು ಚಂಡಾಡುತ್ತೇವೆ" ಎಂದು ಕೆಲವರೂ ಗುಸ ಗುಸ ಮಾತನಾಡಿಕೊಂಡರು. ಕೊನೆಗೆ ಎಲ್ಲರೂ ಸೇರಿ ಅವನನ್ನು ಹೊಂಚು ಕಾಯಬೇಕೆಂದು ನಿರ್ಧರಿಸಿಕೊಂಡೆವು.

* * * *

ಒಂದು ತಿಂಗಳು ಕಳೆಯಿತು. ದಿನವೂ ಸಿಪಾಯಿ ಮೊದಲಿ ನಂತೆಯೇ ಪೋಕಿಯಿಂದ ಹುಡುಗಿಯರ ಜತೆಯಲ್ಲಿ ಓಡಾಡುತ್ತಿದ್ದ. ಎಂದಾದ ರೊಂದೊಂದು ದಿನ ನಮ್ಮನ್ನು ವಿಚಾರಿಸುತ್ತಿದ್ದ.

ನಮ್ಮ ಹುಡುಗಿ ದಿನವೂ ಎಂದಿನಂತೆ ರೊಟ್ಟಿಗಾಗಿ ಬರುತ್ತಿದ್ದಳು. ಆಗಾಗ ಅವಳೊಡನೆ ಶಿಪಾಯಿಯ ವಿಷಯ ಮಾತನಾಡುತ್ತಿದ್ದೆವು. "ಮೆಳ್ಳ ಗಣ್ಣಿನ ಮಿಾನೆ ಶಿಪಾಯಿ'' ಎಂದು ಹಾಸ್ಯಮಾಡಿ ನಗುತ್ತಿದ್ದಳು. ನಮ್ಮ ಹುಡುಗಿಯ ವಿಷಯದಲ್ಲಿ ನಮಗೆಲ್ಲರಿಗೂ ಎಲ್ಲೂ ಇಲ್ಲದ ಹೆಮ್ಮೆ. ನಮಗೆ ಬೇಕಾದಂತೆ ಅವಳು ಇರುವದನ್ನು ತಿಳಿದು ಅಂದಿನಿಂದ ಆ ಶಿಪಾಯಿಯನ್ನು ತಿರಸ್ಕಾರದಿಂದ ನೋಡಹತ್ತಿದೆವು. ಇವಳ ಮೇಲಿನ ಪ್ರೀತಿ ದಿನೇ ದಿನೇ ಹೆಚ್ಚಿತು.

ಒಂದು ದಿನ ಎಂದಿನಂತೆ ಶಿಪಾಯಿ ನಮ್ಮ ಬಳಿ ಬಂದು "ನೋಡಿ ನನಗಾಗಿ ಆ ಹುಡುಗಿಯರು ಜುಟ್ಟು ಹಿಡಿದು ಜಗಳವಾಡುತ್ತಿರುವರು" ಎಂದು ತೋರಿಸಿ ಗಹಿಗಹಿಸಿ ನಕ್ಕ. ಅವನೇನೋ ಅದರಲ್ಲಿ ಸುಖವನ್ನು ಕಂಡು ಅನುಭವಿಸುತ್ತಿದ್ದ. ಆದರೆ ನಮಗೆ ಸರಿಬೀಳಲಿಲ್ಲ.

"ನನಗೆ ಅರ್ಥವಾಗುವುದಿಲ್ಲ. ನನ್ನದೇನು ಅದೃಷ್ಟ – ಸುಮ್ಮನೆ ಕಣ್ಣು ಸಂಜ್ಞೆಮಾಡಿದರೆ ಸಾಕು. ಹುಡುಗಿಯರು ನನ್ನ ಬಳಿ ಬರುತ್ತಾರೆ" ಎಂದು ಆನಂದದಿಂದ ಜಂಭ ಕೊಚ್ಚಿ, ಮಿಾಸೆಯನ್ನು ತಿರುವಿದ. ನಮ್ಮಲ್ಲಿ ಒಬ್ಬನಿಗೆ ಅದು ಏಕೋ ಸರಿಬೀಳಲಿಲ್ಲವೆಂದು ಕಾಣುತ್ತೆ. "ಸಸಿಗಳನ್ನು ಕೀಳುವದು ಸುಲಭ. ಆದರೆ ಬಲಿತ ದೊಡ್ಡಮರವನ್ನು ಕೆಳಕ್ಕುರುಳಿಸಿದಾಗಲ್ಲವೆ ನಿನ್ನ ಶೌರ್ಯ" ಎಂದು ಬಿಟ್ಟ. ಶಿಪಾಯಿ ಕಕ್ಕಾಬಿಕ್ಕಿಯಾಗಿ "ಅದು ನನಗೆ ಹೇಳಿದಿರಾ" ಎಂದ. "ಹೌದು" ಎಂದು ಮತ್ತೊಬ್ಬ ಉತ್ತರ ಕೊಟ್ಟ.

"ಹಾ ! ನನಗೇಯೆ ?" ಎಂದು ಆಶ್ಚರ್ಯದಿಂದ ಮತ್ತೊಮ್ಮೆ ಕೇಳಿದ. ನೆರೆದಿದ್ದವರ ಪೈಕಿ ಕೆಲವರು ''ಹೋಗಲಿ ಬಿಡಿ, ಆಗಿಹೋಯಿತಲ್ಲ'' ಎಂದು ಸಮಾಧಾನ ಪಡಿಸಹೋದರು.

"ಏನು ಅದು ಹೇಳಿ, ನನ್ನನ್ನು ಅಪಮಾನಪಡಿಸಲು ನೀವು ಮಸಲತ್ತು ಮಾಡುತ್ತಿರುವಂತೆ ಕಾಣುತ್ತೆ" ಎಂದು ಮಲ್ಲಯುದ್ಧ ಮಾಡಲು ಸಿದ್ಧನಾಗುವವನಂತೆ ಕೈತೋಳುಗಳನ್ನು ಸರಿಪಡಿಸಿಕೊಂಡು ನಿಂತ.

ಇದೊಂದು ಗುಣ—ಸ್ತ್ರೀಯರನ್ನು ವಶಪಡಿಸಿಕೊಳ್ಳುವದು, ಬಿಟ್ಟರೆ ಬೇರೆ ಯಾವ ಗುಣವೂ ಅವನಲ್ಲಿರಲಿಲ್ಲ. ಹೀಗೆಂದ ಕೂಡಲೆ ಅವನಿಗೆ

ರೇಗಿತು. ಎದ್ದು ಬಂದು ಕುತ್ತಿಗೆಯನ್ನು ಹಿಡಿದು "ಅದೇನು ಹೇಳು ಇಲ್ಲ ವಾದರೆ ಜೀವಸಹಿತ ನಿನ್ನ ಬಿಡುವದಿಲ್ಲ" ಎಂದ. ನಮ್ಮವನಿಗೂ ಅಧೈರ್ಯ ವಾಯಿತು, ಸ್ವಲ್ಪ ಸಮಾಧಾನದಿಂದ "ಹಾಗೆಯೆ ? ನಿನಗೆ ನಮ್ಮಲ್ಲಿ ಬರುವ ಹುಡುಗಿ ಗೊತ್ತಷ್ಟೆ. ಎಲ್ಲಿ ನೋಡೋಣ ಅವಳ ಮೇಲೆ ನೀನು ಕೈಮಾಡು" "ಅಷ್ಟೇ ತಾನೇ ಅದೊಂದು ದೊಡ್ಡ ಕೆಲಸವೆ ನನಗೆ."

"ಎಲ್ಲಿ ನೋಡೋಣ ?"

"ಹಾಗೆಯೆ ? ಒಂದು ತಿಂಗಳು ಅವಧಿ. ಬೇಡ, ಹದಿನೈದು ದಿನ ಸಾಕು. ಆಮೇಲೆ ನಿಮ್ಮನ್ನು ಕಾಣುತ್ತೇನೆ" ಎಂದು ತಟ್ಟನೆ ಎದ್ದು ಹೊರಟೇ ಹೋದ.

ಇವರಿಬ್ಬರ ವಾಗ್ಯುದ್ಧ ನಡೆಯುತ್ತಿದ್ದಾಗ ನಾವೆಲ್ಲರೂ ಸದ್ದುಮಾಡದೆ ಕೇಳುತ್ತಿದ್ದೆವು. ಅವನು ಹೊರಟು ಹೋದನಂತರ "ಒಳ್ಳೆಯ ಕೆಲಸ ಮಾಡಿದೆ" ಎಂದು ಒಬ್ಬನಂದ. ಮನಸ್ಸಿನಲ್ಲಿ ಎಲ್ಲರಿಗೂ ಗಾಬರಿ. ಶಿಪಾಯಿ ಛಲದಿಂದ ಎಲ್ಲಿ ಹುಡುಗಿಗೆ ಅಪಾಯ ತಂದಿಡುವನೊ ಎಂದು. ಆದರೂ ನಮ್ಮ ಹುಡುಗಿಯ ಧೈರ್ಯ ನೋಡಬೇಕೆಂಬ ಆಶೆ. ಖಂಡಿತ ವಾಗಿಯೂ ಅವನ ಬಲೆಗೆ ಬೀಳಲಾರಳೆಂದು – ತನ್ನ ಮಾನವನ್ನು ಕಾಪಾಡಿ ಕೊಳ್ಳುವಳೆಂಬ ಧೈರ್ಯ. ಆದರೂ ಆ ಹುಡುಗಿಯನ್ನು ಇಂತಹ ತೊಂದರೆಗೆ ನಾವೇ ಸಿಲುಕಿಸಿದೆವಲ್ಲಾ ಎಂದು ಕಸಿಕರ. ಕಾರ್ಯ ಮಿಂಚಿ ಹೋಗಿತ್ತು. ಆಡಿದುದನ್ನು ನಡಸಬೇಕೆಂದು ಹಟ ತೊಟ್ಟೆವು. ಶಿಪಾಯಿಯು ಆ ಕಡೆ ಬಂದಾಗಲೆಲ್ಲಾ ಹಾಸ್ಯಮಾಡತೊಡಗಿದೆವು. ಕೆಲವು ದಿನಗಳಾ ನಂತರ ಆ ಹುಡುಗಿಯ ಮೇಲೆ ಕಣ್ಣುಹಾಕಿ, ಹಿಂದೆ ಹೋಗಲು ಪ್ರಯತ್ನಪಡುತ್ತಿದ್ದಾ ನೆಂದು ವರ್ತಮಾನ ಬಂತು. ಅವಳಲ್ಲಿ ನಾವಿಟ್ಟಿದ್ದ ನಂಬಿಕೆಗೆ ಒಂದಿಷ್ಟೂ ಕುಂದಕ ಬರಲಿಲ್ಲ. ಎಂದಿನಂತೆ ಅವಳು ದಿನವೂ ನಮ್ಮಲ್ಲಿಗೆ ಬರುತ್ತಿದ್ದಳು. ಈ ಸುದ್ದಿಯನ್ನು ಅವಳ ಬಳಿ ಹೇಳಲಿಲ್ಲ. ಆದರೂ ಇತ್ತೀಚೆಗೆ ಅವಳ ನಡೆ ಯಲ್ಲಿ ಒಂದು ವಿಲಕ್ಷಣತೆ ಕಾಣಬರುತ್ತಿತ್ತು. ಅದನ್ನು ನಾವು ಲೆಕ್ಕಿಸಲಿಲ್ಲ.

ಕೆಲವು ದಿನ ಕಳೆಯಿತು. ಇತ್ತೀಚೆಗೆ ಶಿಪಾಯಿ ಅವಳಿಗೆ ವಿಪರೀತ ತೊಂದರೆ ಕೊಡುತ್ತಿದ್ದಾನೆಂದು ಕೇಳಿದೆವು. ಮನಸ್ಸಿಗೆ ಬಹಳ ಸಂಕಟವಾ

ಯಿತು. ಇಂತಹ ಕೆಲಸಕ್ಕೇಕೆ ಕೈಹಾಕಿದೆವು. ಏನೂ ಅರಿಯದ ಬಾಲಕಿಗೆ ತೊಂದರೆಯಾಗಲು ನಾವುಗಳು ಕಾರಣಕರ್ತರಾದೆವಲ್ಲ ಎಂದೆನಿಸಿತು. ವಾಯಿದೆಯ ದಿನಗಳು ಹತ್ತಿರ ಬಂದಂತೆಲ್ಲಾ ನಮ್ಮ ಮನಸ್ಸಿನ ಉದ್ವೇಗವೂ ಹೆಚ್ಚಾಯಿತು. ಅವಳು ಬಂದಾಗ ಮಾತ್ರ ಅವಳ ಬಳಿ ಈ ಸುದ್ದಿಯನ್ನು ಆಡುವುದಾಗಲಿ, ಇಲ್ಲವೆ ಅವಳಿಗೂ ಅವನಿಗೂ ಇರುವ ಸಂಬಂಧವೇನೆಂದು ಕೇಳುವುದಾಗಲಿ ಆಗುತ್ತಿರಲಿಲ್ಲ. ಈ ದಿನವೂ ಅವಳು ಎಂದಿನಂತೆ ನಮ್ಮ ಕೋಣೆಗೆ ಬಂದಳು. ಈ ದಿನದ ರೀತಿ, ವರ್ತನಗಳೇ ಬೇರೆ. ಎಲ್ಲರೂ ಮೌನ. ಎಲ್ಲರ ಕಣ್ಣುಗಳೂ ಅವಳನ್ನೇ ದೃಷ್ಟಿಸಿ ನೋಡುತ್ತಿದ್ದವು. ಏನು ಹೇಳಬೇಕು, ಏನು ಕೇಳಬೇಕೆಂದು ಯಾರಿಗೂ ತೋರದು. ನಮ್ಮ ಈ ವರ್ತನೆಯನ್ನು ನೋಡಿ ಅವಳಿಗೂ ಆಶ್ಚರ್ಯವಾಗಿರಬೇಕು, ಮುಖ ಬಿಳುಪೇರಿತು. ಅನರುವ ಧ್ವನಿಯಿಂದ ''ಇಂದು ಏನು ಸಮಾಚಾರ'' ಎಂದಳು.

ನೆಟ್ಟ ದೃಷ್ಟಿಯಿಂದ ನೋಡುತ್ತಲೇ ಇದ್ದ ನಮ್ಮ ಯಜಮಾನನು ''ನಿನ್ನ ಸಮಾಚಾರವೇನು'' ಎಂದು ತಟ್ಟನೆ ಕೇಳಿದ.

''ನನ್ನ ಸಮಾಚಾರವೆ ? ಏನು ಇಲ್ಲವಲ್ಲಾ'' ಎಂದವಳು ಆಶ್ಚರ್ಯಪಟ್ಟಳು.

''ಏನಿಲ್ಲ, ಏನಿಲ್ಲ'' ಎಂದು ಮತ್ತೆ ಕೆಲವರು ಮಾತು ಹೊರಳಿಸಿದರು. ಅವಳಿಗೆ ಏನೂ ತೋರದೆ ಪೆಚ್ಚಾದಳು.

"ನನ್ನ ರೊಟ್ಟಿ ಕೊಡಿ, ನಾನು ಹೋಗುತ್ತೇನೆ.''

"ಬಹಳ ಆತುರವೇ ? ಈಗಲೇ ಹೋಗಬೇಕೆ" ಅವಳಿಗೆ ಈ ರೀತಿಯಾದ ವರ್ತನೆ ಗಾಬರಿ ಬಡಿಸಿತೇನೋ ಅಲ್ಲಿಂದ ನಿಲ್ಲದೆ ಓಡಿಬಿಟ್ಟಳು. ನಮಗೆಲ್ಲರಿಗೂ ಅನುಮಾನವಾರಂಭವಾಯಿತು. ನಮ್ಮ ಯಜಮಾನ "ಅವಳು........ಅವನ ಬಲೆಗೆ........ಪ್ರೇಮಿ........ಕಳ್ಳ........ದ್ರೋಹಿ......" ಎಂದು ಆರಂಭ ಮಾಡಿದ.

ನಾವು ಕುರಿಗಳಂತೆ ಒಬ್ಬರ ಮೈ ಮತ್ತೊಬ್ಬರಿಗೆ ತಾಕಿಸಿಕೊಂಡು ನಮ್ಮ ಕೆಲಸಗಳ ಮುಂದೆ ಕೂತೆವು. ''ಇದು ಸಾಧ್ಯವೇ'' ಎಂದೆನಿಸುತ್ತಲೇ ಇತ್ತು. "ಪುನಃ ಅವನ್ನು ಯೋಚಿಸಿ ಪ್ರಯೋಜನವಿಲ್ಲ. ಅವನು ನಮ್ಮೆಲ್ಲರಿಗಿಂತಲೂ

ಬುದ್ಧಿವಂತ. ಹಿಡಿದ ಹಟವನ್ನು ಸಾಧಿಸಿರಬೇಕು. ಹಿಂದೆ ಅವನು ಬಂದಾಗಿನ ವರ್ತನೆಯನ್ನು ಜ್ಞಾಪಿಸಿಕೊಂಡರೆ ವ್ಯೈಸಡುಗುತ್ತದೆ" ಎಂದು ಕೊಂಡೆವು.

ಸುಮಾರು ೧೨ ಗಂಟೆಯ ಸಮಯಕ್ಕೆ ಶಿಪಾಯಿ ಬಂದೇ ಬಂದ. ಎಂದಿನಂತೆಯೇ ಅವನ ಆಗಿನ ರೀತಿಯು ಇದ್ದಾಗ್ಯೂ, ನಮಗೆ ಅವನನ್ನು ದೃಷ್ಟಿಸಿ ನೋಡಲು ಆಗಲಿಲ್ಲ.

"ಎಲ್ಲಿ, ನಿಮಗೆ ಇಷ್ಟವಿದ್ದರೆ ಹೊರಗೆ ಬಂದು ನಿಂತು ನೋಡಿ. ನನ್ನ ಶೌರ್ಯವನ್ನು ಪ್ರದರ್ಶಿಸುವೆನು" ಎಂದು ಉತ್ಸಾಹದಿಂದ ಹೇಳಿದ.

ಕುರಿಗಳಂತೆ ಒಬ್ಬರಹಿಂದೆ ಒಬ್ಬರು ಹೊರಟು ಕಂಡಿಗಳಿಂದ ನೋಡುತ್ತ ನಿಂತೆವು. ಕೊಂಚ ಹೊತ್ತಿನಲ್ಲೆ, ಹಾರುತ್ತ, ಕುಣಿಯುತ್ತ ಅವಳು ಹಿಂದಿನ ಸಣ್ಣ ತೋಟಕ್ಕೆ ಬಂದಳು. ಹಿಂದೆಯೇ ಶಿಪಾಯಿಯು ನಗುಮುಖದಿಂದ ಬಾಯಿಯಲ್ಲಿ ಶೀಟಿ ಹಾಕುತ್ತ ಬಂದು ಅವಳ ಹಿಂದೆಯೇ ನಡೆದ. ಹಿಂದೆಯೇ ಅವರಿಬ್ಬರೂ ಮಾತನಾಡಿಕೊಂಡು ಹೊರಟಂತೆ ಇತ್ತು. ಇಬ್ಬರೂ ಮರೆಯಾದರು. ಮಳೆ ಸುರಿಯಲು ಆರಂಭವಾಯಿತು. ಆದರೂ ಹಾಗೆಯೇ ನೋಡುತ್ತ ನಿಂತೆವು. ಕೊಂಚ ಹೊತ್ತಿನಲ್ಲಿ ಮಳೆ ಕಡಮೆಯಾಗುತ್ತ ಬಂತು. ಅವಳೇ ನಮ್ಮ ದೈವವೆಂದು ನಂಬಿದ್ದ ನಮಗೆ ಮೋಸಮಾಡಿ ಆ ಶಿಪಾಯಿಯೊಬ್ಬನಿಗೋಸ್ಕರ ನಮ್ಮನ್ನು ದೂರಮಾಡಿದಳಲ್ಲಾ ಎಂದು ನಮಗೆ ರೋಷ ಬಂತು.

ಕೊಂಚ ಹೊತ್ತಾದ ಮೇಲೆ ಅವಳು ಹಿಂತಿರುಗುತ್ತಿರುವದನ್ನು ನೋಡಿದೆವು, ಅವಳ ಕಣ್ಣುಗಳು ಸುಖ ಸಂತೋಷಗಳಿಂದ ಹೊಳೆಯುತ್ತಿದ್ದವು. ತುಟಿಗಳು ನಮ್ಮನ್ನು ನೋಡಿ ಕಿಲಕಿಲನೆ ನಗುತ್ತಿದ್ದಂತೆ ಭಾಸವಾಯಿತು. ಈ ಪ್ರಪಂಚವನ್ನೇ ಮರೆತವಳಂತೆ ಪ್ರೈಮರೆತು ಓಲಾಡುತ್ತಾ ತಪ್ಪು ತಪ್ಪು ಹೆಜ್ಜೆಗಳನ್ನು ಹಾಕುತ್ತಾ ನಡೆಯುತ್ತಿದ್ದಳು.

ನಮಗೆ ಇದನ್ನು ನೋಡಲು ಅಸಹ್ಯವಾಯಿತು. ರೋಷದಿಂದ ಅಲ್ಲಿ ಇದ್ದವರೆಲ್ಲರೂ ಒಟ್ಟಿಗೆ ಒಂದೇ ಉಸುರಿನಲ್ಲಿ ಅವಳ ಮುಂದೆ ಹೋಗಿ ಅಣಕಿಸಿದೆವು. ಪಾಪ! ನಮ್ಮನ್ನು ನೋಡಿ ಬೆದರಿದಳು. ನಡುಗಿ ಬಾಡಿದ ಎಳೆಯ ಸಸಿಯಂತೆ ಕುಸಿದುಬಿಟ್ಟಳು ನಾವು ಸುತ್ತುಗಟ್ಟಿ ಮನಸ್ಸಿಗೆ ಬಂದಷ್ಟು

ಅಪಮಾನಕರವಾದ ಮಾತುಗಳನ್ನಾಡಿದೆವು. ಅವಳಿಗೇನೂ ತೋರಲಿಲ್ಲ. ನಮ್ಮ ನಡುವೆಯೇ ನಿಂತಿದ್ದಳು. ಓಡಿ ಹೋಗಲು ಆಸ್ಪದವಿರಲಿಲ್ಲ. ಆದರೂ ಅವಳ ಮೇಲೆ ಎಷ್ಟೇ ರೋಷವಿದ್ದರೂ ಕೈಮಾಡಲು ಯಾರಿಗೂ ಶಕ್ತಿ ಇಲ್ಲ. ಒಂದು ನಿಮಿಷದ ಹಿಂದೆ ಸಂತೋಷದಿಂದ ಉಕ್ಕಿ ಹೊಳೆಯುತ್ತಿದ್ದ ಕಣ್ಣುಗಳು ಕಾಂತಿಹೀನವಾದವು. ಮುಖದ ಬಣ್ಣ ಬದಲಾಯಿಸಿತು. ತುಟಿಗಳು ನಡುಗುತ್ತಿದ್ದವು.

ಮೋಸ ಮಾಡಿದವಳಲ್ಲಾ ಎಂದು ನಮಗೆ ಸಂಕಟ. ನಮ್ಮ ಸರ್ವಸ್ವವನ್ನೂ ಅವಳಿಗಾಗಿ ಧಾರೆಯೆರೆದಿದ್ದೆವು. ಅವಳೊಬ್ಬಳ ಯೋಚನೆಯಲ್ಲಿ ನಾವಿಪ್ಪತ್ತಾರು ಮಂದಿಯೂ ದೊಡ್ಡ ಗಾಳಿ ಗೋಪುರಗಳನ್ನು ಕಟ್ಟಿದ್ದೆವು. ಎಲ್ಲವೂ ಉರುಳಿತು, ನಮ್ಮ ಮನದ ಸಂಕಟ ತೀರುವಷ್ಟೂ ಅವಳನ್ನು ಶಪಿಸಿದೆವು. ನಮ್ಮಲ್ಲಿ ಒಬ್ಬನು ಸಂಕಟದಿಂದ ಅವಳ ತೋಳು ಹಿಡಿದೆಳೆದನು. ಅವಳಿಗೆ ರೋಷ ಬಂದಿರಬಹುದು. ನಮ್ಮನ್ನು ದೃಷ್ಟಿಸಿ ನೋಡಿ "ದೆವ್ವಗಳು ........ಪಿಶಾಚಿಗಳು .......ಕಾಡುಮನುಷ್ಯರು........" ಎಂದು ಬಯ್ಯುತ್ತಾ ನಮ್ಮೆಲ್ಲರನ್ನೂ ತೊರೆದು ಹೊರಟೇ ಬಿಟ್ಟಳು.

ಸಣ್ಣಗೆ ಮಳೆ ಬೀಳುತ್ತಲೇ ಇತ್ತು. ನಾವೆಲ್ಲರೂ ಹಾಗೆಯೇ ಕೊಂಚ ಹೊತ್ತು ನೋಡುತ್ತಾ ನಿಂತಿದ್ದೆವು. ಪುನಃ ನಮ್ಮ ಕೊಠಡಿಗೆ ಹಿಂತಿರುಗಿದೆವು. ಸೂರ್ಯನ ಬೆಳಕು ಪುನಃ ಅಲ್ಲಿಗೆ ಬೀಳಲಿಲ್ಲ. ಅವಳನ್ನು ನಾವು ಮತ್ತೆ ನೋಡಲಿಲ್ಲ.

———:———

# ಒಮ್ಮೆ ಮಾನವರಾಗಿದ್ದ ಜೀವಜಂತುಗಳು *

ಅನುವಾದಕ : ಅ. ಸೋಗಾಲ

ಆ ಬೀದಿಯ ಹೆಸರು 'ಹೈ ಸ್ಟ್ರೀಟ್'. ಬೀದಿಯಲ್ಲಿ ಒಂದಕ್ಕೊಂದು ಅಂಟಿ ನಿಂತ, ಮಹಡಿಯಿಲ್ಲದ ಮನೆಗಳ ಎರಡು ಸಾಲು. ಹರಿದು ಮುರಿದ ಕಿಟಕಿಗಳು, ಒಡೆದ ಹೆಂಚು, ಕಾಲದಿಂದ ಮಾಸಿ ಹಸಿರು ಹತ್ತಿದ್ದ ಗಾಜುಗಳು. ಸಣ್ಣ ಪುಟ್ಟ ಗಿಡ-ಗೆಂಟೆ ಬೆಳೆದಿದ್ದ ಗೋಡೆಗಳು – ಇದೇ ಇಲ್ಲಿನ ಮನೆಗಳ ನಿಜಸ್ವರೂಪ. ಆ ಬೀದಿಯಲ್ಲಿ ವಾಸಿಸುತ್ತಿದ್ದವರು ಅತಿ ನಿರ್ಗತಿಕ ಜನ.

ಬೀದಿಯಲ್ಲಿ ಅಲ್ಲಲ್ಲಿ ಕಾಣಬರುತ್ತಿದ್ದ, ಚೂರು ಇಟ್ಟಿಗೆಗಳ ಗುಡ್ಡೆಗಳು, ಅಲ್ಲಿನ ನಿವಾಸಿಗಳು ತಮ್ಮ ಮನೆಗಳನ್ನು ಹೊಸದಾಗಿ ಕಟ್ಟುವುದರಲ್ಲಿ ತೋರಿಸುತ್ತಿದ್ದ ಆಸಕ್ತಿಗೆ ನಿದರ್ಶನ. ಬೀದಿಯ ಹಿಂಬದಿಯ ಗುಡ್ಡದ ಮೇಲಿನ ಹಚ್ಚ ಹಸುರಿನ ಪ್ರದೇಶದಲ್ಲಿ, ಸುಂದರವಾದ ಕಲ್ಲಿನ ಕಟ್ಟಡಗಳಿದ್ದವು. ಕ್ರಿಸ್ತ ದೇಗುಲಗಳ ಭವ್ಯ ಗೋಪುರಗಳು ತಮ್ಮ ತಲೆಯನ್ನು ನೀಲಾಗಸದೆಡೆಗೆ ಎತ್ತಿದ್ದವು; ಅವುಗಳ ಮೇಲಿನ ಹೊಂಬಣ್ಣದ ಶಿಲುಬೆಗಳು, ಸೂರ್ಯನ ಕಿರಣದಲ್ಲಿ ಬೆಳಗುತ್ತಿದ್ದವು.

ಮಳೆಗಾಲದಲ್ಲಿ, ಊರಿನ ಬೀದಿಯಲ್ಲಿ ಹರಿದ ನೀರೆಲ್ಲಾ ಕೂಡಿ ಈ ಬೀದಿಯಲ್ಲಿ ಹರಿದು ಹೋಗುತ್ತಿತ್ತು. ಬೇಸಿಗೆಯಲ್ಲಿ ಊರಿನ ಧೂಳುಪಾಳನ್ನೆಲ್ಲಾ ಗಾಳಿ, ಈ ಬೀದಿಗೆ ತರುತ್ತಿತ್ತು. ಆದ್ದರಿಂದಲೇ ಈ ಬೀದಿ ಪಾಳು ಪಾಳು !

ಬೀದಿಯ ಒಂದು ಕೊನೆಯಲ್ಲಿ ಎರಡು ಅಂತಸ್ತಿನ ಒಂದು ಮುರುಕು ಮನೆ. ಊರಿನಿಂದ ಬಹಿಷ್ಕೃತವಾಗಿ ಅಲ್ಲಿ ನಿಂತಂತಿತ್ತು. ಮನೆಯ ಒಡೆಯ ಪೆಟುನಿಕಾಫ್ ಎಂಬ ವರ್ತಕ. ಮನೆಯಿಂದಾಚೆಗೆ, ನದಿಯ ಕಡೆಗೆ ಹಸುರು ಬಯಲು. ಆ ಮನೆಯೋ, ಭೂಮಿಗೆ ಬಾಗಿ ವಿಧಿಯ ಕೊನೆಯ ಪೆಟ್ಟನ್ನು

---

* Creatures that once were Men.

ನಿರೀಕ್ಷಿಸುತ್ತಾ, ಎಂದಿಗೆ ಮಣ್ಣಿನೊಂದಿಗೆ ಒಂದಾದೇನೆಂದು, ಯೋಚಿಸುತ್ತಿರುವಂತೆ ತೋರುತ್ತಿತ್ತು.

ಮನೆಯ ಮುಂದಿನ ಗೇಟುಗಳಲ್ಲೊಂದು ಮುರಿದು ಬಿದ್ದು, ಅದರ ಚೌಕಟ್ಟಿನ ಮಧ್ಯದಿಂದ ಹುಲ್ಲು ಬೆಳೆದಿತ್ತು. ಮುಂದಿನ ಅಂಗಳದಲ್ಲೆಲ್ಲಾ ಕುರುಚಲು ಗಿಡಗಳು. ಅಂಗಳದ ಆಚೆಯ ಕೊನೆಗೆ ಕಬ್ಬಿಣದ ಮೇಲ್ಛಾವಣಿಯ ಒಂದು ಜೋಪಡಿ. ಗೋಡೆಗಳೆಲ್ಲಾ ಕಪ್ಪು ಕಪ್ಪು. ಮನೆಯಲ್ಲಿ ಯಾರೂ ವಾಸವಿರಲಿಲ್ಲ. ಆದರೆ ಜೋಪಡಿಯನ್ನು ಒಂದು ನಿರ್ಭಾಗ್ಯರ ವಸತಿ (Doss House) ಯಾಗಿ ಮಾಡಿ ಅಲ್ಲೊಬ್ಬ ನಿವೃತ್ತ ಸೇನಾನಿ ವಾಸಿಸುತ್ತಿದ್ದ. ಆತ ಅಶ್ವದಳದಲ್ಲಿದ್ದವನು. ಹೆಸರು ಫ್ರೊಮಿಚ್ ಕುವಾಲ್ಡ. ಜೋಪಡಿಯ ಮಧ್ಯೆ ಒಂದು ಒಲೆ. ಒಲೆಯ ಸುತ್ತ ಹಳೆಯ ಚಿಂದಿಗಳು ಮುದ್ದೆ ಮುದ್ದೆಯಾಗಿ ಬಿದ್ದಿದ್ದವು. ಇವೇ ಅಲ್ಲಿನ ನಿವಾಸಿಗಳ ಹಾಸಿಗೆಗಳು.

ಮನೆಯ ಯಜಮಾನನ ಮಲಗುವ ಕೋಣೆ ಈ ಒಲೆಯ ಮೇಲ್ಭಾಗಕ್ಕೆ. ಅವರ ಸುತ್ತಲಿನ ಹಾಸಿಗೆಗಳೆಂದರೆ ಎಲ್ಲರಿಗೂ ಗೌರವ. ಅದರಲ್ಲಿ ಮಲಗಲು ಅವಕಾಶ ದೊರಕುತ್ತಿದ್ದುದು ಯಜಮಾನನ ನೆಚ್ಚಿನ ಜನರಿಗೆ ಮಾತ್ರ. ಆ ಸೈನಿಕ ದಿನದ ಬಹು ಭಾಗವನ್ನೆಲ್ಲಾ ಮನೆಯ ಮುಂದಿನ ಗಾರೆಯ ಜಗುಲಿಯ ಮೇಲೆ ಕುಳಿತೇ ಕಳೆಯುತ್ತಿದ್ದ. ಅಲ್ಲಿಲ್ಲದಿದ್ದರೆ, ಜೀಗಾಲ್ ವ್ಯಾವಿಲೋಫ್‌ನ ಮದ್ಯದ ಅಂಗಡಿಯಲ್ಲಿ ಕಳೆಯುವನು. ಅವನು ಊಟ ಮಾಡುತ್ತಿದ್ದುದೂ ಅಲ್ಲೇ.

ಈ ನಿರ್ಭಾಗ್ಯರ ವಸತಿಯನ್ನು ಅವನು ನಡೆಸುವುದಕ್ಕೆ ಮೊದಲು, ಕುವಾಲ್ಡ ಏನೇನೋ ಉದ್ಯೋಗದಲ್ಲಿದ್ದವನು. ಅವನು "ನಾನು ಎಲ್ಲ ಉದ್ಯೋಗವನ್ನೂ ಮಾಡಿ ಬಲ್ಲೆ!" ಎಂದು ಹೇಳುತ್ತಲೂ ಇದ್ದ.

ಐವತ್ತು ವರ್ಷ ವಯಸ್ಸು ಆತನಿಗೆ. ಹಳದಿಯ ಗಡ್ಡ, ಉಬ್ಬಿದ ಕೆನ್ನೆ. ತುಟಿಯ ನಡುವೆ ಯಾವಾಗಲೂ ಒಂದು ಹುಕ್ಕ. ಒಳ್ಳೆ ಆಜಾನುಬಾಹು ವ್ಯಕ್ತಿ. ಮೈಮೇಲೆ ಯಾವಾಗಲೂ ಒಂದು ಹಳೆಯ ಮಿಲಿಟರಿ ಕೋಟು, ಮೊಣಕಾಲಿನವರೆಗೂ ಏರಿಸಿದ ಉಣ್ಣೆಯ ಬೂಟು. ಕುಡಿಮ ಬೆಳಗಿನ ಹೊತ್ತೆಲ್ಲಾ ಮತ್ತಿನಲ್ಲೇ ಇರುತ್ತಿದ್ದ. ಸಂಜೆ ಆಯಿತೆಂದರೆ ಸರಿ, ಸಜೀ

ತನನಾಗಿ ಹುರುಪು ಹೊಂದುತ್ತಿದ್ದ. ಪೂರ್ತ ಮತ್ತು ಅವನಿಗೆಂದೂ ಹತ್ತುತ್ತಿರ ಲಿಲ್ಲ. ಅಭ್ಯಾಸ ಬಲ !

ಸಂಜೆಯ ಹೊತ್ತು ತನ್ನ ಜಗುಲಿಯ ಮೇಲೆ ಕುಳಿತು, ನಿರ್ಭಾಗ್ಯರ ವಸತಿಯ ನಿವಾಸಿಗಳೆಲ್ಲರನ್ನೂ ಕರೆಸಿ ಹರಟೆ ಕೊಚ್ಚುತ್ತಿದ್ದ. ಕುಡಿದು ಕುಡಿದು ಮನೆ ಮಠಗಳನ್ನೆಲ್ಲಾ ಕಳೆದುಕೊಂಡ ಯಾವನಾದರೂ ವಾಸಕ್ಕೆ ಸ್ಥಳ ಕೊಡಿರೆಂದು ಅವನನ್ನು ಕೇಳಿದರೆ, "ಆಗಲಿ, ಒಂದು ರಾತ್ರಿಗೆ ಎರಡು ಕೋಪೆಕ್, ಒಂದು ವಾರಕ್ಕೆ ಹತ್ತು ಕೋಪೆಕ್, ತಿಂಗಳಿಗೆ ಇಪ್ಪತ್ತು ಕೋಪೆಕ್ ಬಾಡಿಗೆ ! ತಿಳಿಯಿತೇ ? ನೀನೂ ಒಂದು ಜಾಗ ತೆಗೆದುಕೋ. ಆದರೆ ಇನ್ನೊಬ್ಬರ ಜಾಗ ಮಾತ್ರ ಆಕ್ರಮಿಸಬೇಡ."

ಹೊಸಬ : "ನೀವು ರೊಟ್ಟಿ ಚಹ ಇವನ್ನೇನು ಮಾರುವುದಿಲ್ಲವೇ ?"

ಕುವಾಲ್ಡ : "ಈ ಸ್ಥಳವನ್ನು ಬೇಕಾದರೆ ಬಾಡಿಗೆಗೆ ಕೊಡುತ್ತೇನೆ. ಇದ ಕ್ಕಾಗಿ ಆ ವರ್ತಕ ಪೆಟುನಿಕಾಫನಿಗೆ - ಮನೆಯ ಮಾಲೀಕ ಅವನು - ತಿಂಗಳಿಗೆ ಐದು ರೂಬಲ್ ನಾನು ಕೊಡಬೇಕು. ನನ್ನ ಮನೆಯಲ್ಲಿ ವಾಸಿಸುವವರು ಸುಖಜೀವಿಗಳಲ್ಲ. ನಿನಗೇನಾದರೂ ಅಂತಹ ಸುಖವಸ್ತು ಬೇಕಾಗಿದ್ದರೆ, ಇದರ ಎದುರಿಗೊಂದು ಬೀರ್ ಅಂಗಡಿ ಇದೆ. ಹೇಗೂ ನೀನು ಈಗ ಗೃಹಸ್ಥ ನಲ್ಲ ! ನಿನಗೇಕೆ ಸೊಗಸಾದ ಊಟದ ಯೋಚನೆ ! ನಿನ್ನನ್ನು ನೀನೇ ತಿಂದು ಕೊಂಡರಾಯಿತು !"

ಇಂತಹ ಮಾತುಗಳನ್ನಾಡುವಾಗ ಅವನ ಕಣ್ಣುಗಳಲ್ಲಿ ನಗೆ ಮಿಂಚು ತ್ತಿತ್ತು. ನಿರ್ಭಾಗ್ಯರ ವಸತಿಯ ನಿವಾಸಿಗಳಲ್ಲಿ ಅವನಿಗೆ ಬಳಕೆ ಬಹಳ. ಅಂತೇ, ಅಲ್ಲಿನವರೆಲ್ಲರಿಗೂ ಅವನು ಬಹಳ ಬೇಕಾದವನಾಗಿದ್ದ. ಕೆಲವು ಸಲ ಅಲ್ಲಿಗೆ ಹಿಂದಿನ ನಿವಾಸಿಗಳಲ್ಲಿ ಕೆಲವರು ಬರುತ್ತಿದ್ದರು. ಅವರು ಈಗ ಕೊಂಚ ಹಣ ಸಂಪಾದಿಸಿ, 'ಗೃಹಸ್ಥ' ತನವನ್ನು ಮತ್ತೆ ಗಳಿಸಿದವರು. ಅವರು ಕುವಾಲ್ಡನ ಬಳಿ ಬಂದು

"ಏನು ಆರೋಗ್ಯವೇ ...." ಎಂದರೆ,

"ಹು ! ನಿನಗೇನು ಆಗಬೇಕೀಗ" ಎನ್ನುತ್ತಿದ್ದ ಕುವಾಲ್ಡ.

''ಅಲ್ಲ, ನನ್ನನ್ನು ಮರೆತಿರಾ ?''

''ಹು ! ಮರೆತೆನಯ್ಯಾ! ಈಗೇನಾಗಬೇಕು ಹೇಳು ಬೇಗ''

''ಹೋದ ಮಾಗಿಯಲ್ಲಿ ಪೋಲೀಸರು ನಮ್ಮಲ್ಲಿಗೆ ಬಂದು ಮೂವರನ್ನು ಹಿಡಿದುಕೊಂಡು ಹೋದದ್ದು .... ನೆನಪಿಲ್ಲವೇ ?''

''ಅಯ್ಯೋ ! ಈ ಮನೆ ಪೋಲೀಸರಿಗೆ ಎಷ್ಟೋ ಸಲ ಆತಿಥ್ಯ ಮಾಡಿದೆ ! ಅದೆಲ್ಲಾ ಸರಿ, ನಿನಗೇನಾಗಬೇಕು ?''

''ನಾನು ನಿಮ್ಮೊಡನಿದ್ದಾಗ ಎಷ್ಟು ಒಳ್ಳೆಯವರಾಗಿದ್ದಿರಿ ನೀವು .... ''

''ಕೃತಜ್ಞತೆ ತೋರಿಸುವ ಗುಣ ಬಹಳ ಒಳ್ಳೆಯದು. ಅದು ಎಲ್ಲರಿಗೂ ಇರಬೇಕಾದ್ದೆ. ಆದರೆ ಅದು ಇರುವುದು ಬಹಳ ಕಡಿಮೆ ಮಂದಿಗೆ. ಆದ್ದರಿಂದ ಈಗ ನಾನು ನಿನ್ನನ್ನು ಮರೆತಿದ್ದರೂ, ನೀನು ಚಲೋ ಮನುಷ್ಯನಿರಬೇಕು ! ಹೋಗಲಿ, ನಿನ್ನ ಹೆಸರು ಹರಸಿ ವೋಡ್ಕ ಕುಡಿಯೋಣ, ಇಬ್ಬರೂ ಒಟ್ಟಿಗೇ .... ''

''ನೀವು ಯಾವಾಗಲೂ ನಗೆಯ ಮನುಷ್ಯರು !''

''ಹೌದು ; ಇಂತಹ ನಿರ್ಭಾಗ್ಯ ಜೀವಿಗಳ ಜೊತೆಯಲ್ಲಿರುವ ನನಗೆ ನಗುವೊಂದಲ್ಲದೆ ಬೇರೇನು ಸಾಧ್ಯ ! ''

ಹೀಗೆ ಮಾತು ನಡೆದು ಸಂತೋಷ ಸಮಾರಂಭದಲ್ಲಿ ಕೊನೆಗಾಣುತ್ತಿತ್ತು. ಮತ್ತೆ ಇದ್ದುದನ್ನೆಲ್ಲಾ ಕುಡಿತಕ್ಕೆ ಸುರಿದ ಮೇಲೆಯೇ ಆ ಹಿಂದಿನ ನಿವಾಸಿಗೆ ಪ್ರಜ್ಞೆ ಬರುತ್ತಿದ್ದುದು. ಮತ್ತೆ ಆತ ಈ ನಿರ್ಭಾಗ್ಯರ ವಸತಿಗೇ ಬಂದು ಸೇರುತ್ತಿದ್ದ ! ಆಗ ಕುವಾಲ್ಡ, ''ಗೆಳೆಯಾ, ಸುಖ ದುಃಖವನ್ನು ಸಮತೆಯಿಂದ ನೋಡಬೇಕು. ಸುಮ್ಮನೆ ವೇದಾಂತ ಹೇಳಿ ಬಾಳನ್ನು ಹಾಳುಮಾಡಿಕೊಳ್ಳಬಾರದು. ಇಗೋ ! ತೊಗೋ ಈ ಇಪ್ಪತ್ತು ಕೋಪೆಕ್. ಒಂದಿಷ್ಟು ವೋಡ್ಕಾ, ರೊಟ್ಟಿ ಮತ್ತೆ ತರಕಾರಿ ತಾ. ಅದನ್ನು ಮುಗಿಸಿ ಆ ಮೇಲೆ ವೇದಾಂತದ ಸರಕು ಬಿಚ್ಚೋಣ !''

ಇದ್ದುದೆಲ್ಲವನ್ನೂ ತಾನು ಕಳೆದುಕೊಂಡ ಮೇಲೆ, ''ಹೇಗೂ ಇದ್ದುದನ್ನೆಲ್ಲಾ ಕುಡಿತಕ್ಕೆ ಹಾಕಿದೆವು. ಈಗಲಾದರೂ ಬುದ್ಧಿ ಕಲಿತು ಸರಿಯಾದ

ಹಾದಿ ಹಿಡಿಯೋಣ. ಪಶ್ಚಾತ್ತಾಪಪಡದೆ ಮೋಕ್ಷವಿಲ್ಲ! ಪಾಪ ಮಾಡದೆ ಪಶ್ಚಾತ್ತಾಪಡುವುದು ಹೇಗೆ? ನಡಿ, ಮೊದಲಿನಂತೆ ನುಡಿದು ನಿನ್ನ ಗಳಿಕೆಯನ್ನು ಆ ಕಂಟ್ರಾಕ್ಟರನ ಹತ್ತಿರ ಇಟ್ಟಿರು. ಇಲ್ಲವೆ ನನ್ನ ಕೈಗೆ ಕೊಡು. ಒಂದಿಷ್ಟು ದುಡ್ಡಾದ ಮೇಲೆ ಲಕ್ಷಣವಾಗಿ ಬಟ್ಟೆ ಹೊಲಿಸಿ ಕೊಡುತ್ತೇನೆ. ನಿನ್ನ ಕೆಲಸಕ್ಕಿನ್ನು ಹೊರಡು."

ಆ ನಿವಾಸಿ, ಕುವಾಲ್ಡನ ಈ ಮಾತುಗಳನ್ನು ಕೇಳಿ ಅವನ ವಿವೇಕವನ್ನು ಹೊಗಳಿ ತನಗೆ ಸದಾ ಸಹಾಯಮಾಡುವ ಒಬ್ಬ ಸ್ನೇಹಿತನಾದರೂ ಇರುವನಲ್ಲ ಎಂದುಕೊಂಡು ಹಿಂತಿರುಗುತ್ತಿದ್ದ.

ಕುವಾಲ್ಡನ ಸಹಾಯದಿಂದ ತನ್ನ ಸ್ಥಿತಿ ಒಂದೆರಡು ತಿಂಗಳಲ್ಲಿಯೇ, ಸುಧಾರಿಸಿದುದನ್ನು ನಿವಾಸಿ ಅರಿತುಕೊಳ್ಳುತ್ತಿದ್ದ. ಆಗ ಕುವಾಲ್ಡ "ಈಗ ನೋಡಿದೆಯಾ. ಲಕ್ಷಣವಾಗಿ ಬಟ್ಟೆ ಬರೆ ತೊಟ್ಟುಕೊಂಡಿದ್ದಿ. ಬಟ್ಟೆ ಬಹು ಮುಖ್ಯ. ನಾನು ಸರಿಯಾಗಿ ತೊಡುತ್ತಿರುವವರೆಗೂ ಜನರಲ್ಲಿ ನನಗೊಂದು ಸ್ಥಾನವಿತ್ತು. ಆದರೆ ಅದನ್ನು ಬಿಟ್ಟ ಗಳಿಗೆಯೇ ನನ್ನ ಸ್ಥಾನವನ್ನು ಕಳೆದುಕೊಂಡೆ. ಒಬ್ಬನ ಘನತೆಯನ್ನು ನಿರ್ಧರಿಸುವಾಗ ಜನ ಅವನ ಮೇಲು ರೂಪ ನೋಡುತ್ತಾರೆ! ಮನುಷ್ಯನ ಅಂತರಂಗದ ವಿಚಾರ ಅವರಿಗೆ ಹೇಗೆ ನಿಲುಕಬೇಕು? ಇರಲಿ, ನನಗೆ ನೀನು ಕೊಡಬೇಕಾದ್ದರಲ್ಲಿ ಅರ್ಧ ಮಾತ್ರ ಕೊಟ್ಟರೆ ಸಾಕು."

ಆಗ ಆ ನಿವಾಸಿ "ನಿಮಗೆ ನಾ ಎಷ್ಟು ಕೊಡಬೇಕು" ಎಂದರೆ "ರೂಬಲ್‌ನ ಮೇಲೆ ಎಪ್ಪತ್ತು ಕೋಪೆಕ್. ರೂಬಲ್‌ನಾದರೂ ಕೊಡು, ಎಪ್ಪತ್ತು ಕೋಪೆಕ್‌ನಾದರೂ ಕೊಡು .... ."

"ನೀವು ಬಹಳ ದಯಾಳುಗಳು, ವಂದನೆಗಳು" ಎಂದು ನುಡಿಯುತ್ತಿದ್ದ ಆ ನಿವಾಸಿ. ಅವನ ಸಹಾಯದಿಂದ ಸಂತೋಷ ಪಡೆದು, "ನೀವು ಎಷ್ಟು ಒಳ್ಳೆಯವರು. ಆದರೆ ಜೀವನ ನಿಮಗೆಷ್ಟು ಕಠಿಣ? ನಿಮಗನುಗುಣವಾದ ಜಾಗದಲ್ಲಿ ನೀವಿದ್ದಿದ್ದರೆ, ನೀವೆಷ್ಟು ಮೆರೆಯಬಹುದಾಗಿತ್ತು."

"ಹಾಗೆಂದರೇನಯ್ಯ! ಅನುಗುಣವಾದ ಸ್ಥಳದಲ್ಲಿರುವುದೆಂದರೆ? ತನಗೆ ಅನುಗುಣವಾದ ಸ್ಥಳ ಯಾವುದೆಂದು ಯಾರಿಗಾದರೂ ಗೊತ್ತುಂಟೇ? ತಮ್ಮ

ಕೊರಳನ್ನು ಇನ್ನೊಬ್ಬರ ನೊಗಕ್ಕೆ ಇಡಲು ಹೋಗುವವರೇ ಬಹಳ. ನೋಡು, ಪ್ರಟಿನಿಕೋಫ್‌ನಿಗೆ ನ್ಯಾಯವಾದ ಸ್ಥಳ ಜೈಲು! ಆದರೆ ಅವನು ಒಳ್ಳೆ ಗೌರವಸ್ಥನಂತೆ ಬೀದಿಯಲ್ಲಿ ತಿರುಗುತ್ತಾನೆ. ಸಾಲದ್ದಕ್ಕೆ ಇನ್ನೊಂದು ಕಾರ್ಖಾನೆ ಶುರು ಮಾಡುತ್ತಾನಂತೆ. ನಮ್ಮ ಮೇಸ್ಟರಿಗೆ ಸರಿಯಾದ ಸ್ಥಳ ಸುಖವಾದ ಮನೆ - ಹೆಂಡತಿ ಮಕ್ಕಳ ಜೊತೆಯಲ್ಲಿ! ಇನ್ನು ನೀನು ಹುಡುಕುವ ಚಾಕರಿ ಜವಾನಂದೋ, ಪೋರ್ಟರದೋ, ಆದರೆ ಒಳ್ಳೆ ಸೈನಿಕನಾಗಿರಬೇಕಾಗಿತ್ತು ನೀನು! ನಿನಗೆ ಶಿಸ್ತಿದೆ, ಕಷ್ಟಸಹಿಷ್ಣುತೆ ಇದೆ. ನೋಡಿದೆಯಾ? ಜೀವನ ಇಸ್ಪೀಟಿನ ಎಲೆಯಂತೆ ಕಲಸಿಹೋಗುತ್ತೆ. ನಮ್ಮ ಜಾಗಕ್ಕೆ ನಾವು ಬೀಳುವುದು ಬಹಳ ಅಪರೂಪ!"

ಮೇಲೆ ಹೇಳಿದ ಸ್ಕೂಲ್ ಮಾಸ್ಟರ್ ವಿದ್ಯೆಯಲ್ಲಿ ಕುವಾಲ್ಡನಿಗೆ ಸರಿತೂಗುತ್ತಿದ್ದ. ನಿರ್ಭಾಗ್ಯರ ವಸತಿಗೆ ಅವನು ಬಂದಮೇಲೆ ಅಲ್ಲಿಂದ ಹೊರಗೆ ಹೋಗಲು, ಎಷ್ಟೋ ಸಾರಿ ಯತ್ನಿಸಿ ವಿಫಲನಾಗಿದ್ದ. ಹೋದವನು ಮತ್ತೆ ಹಿಂತಿರುಗುತ್ತಿದ್ದ.

ಕುವಾಲ್ಡ ವೇದಾಂತದ ವಿಚಾರ ಹರಟಲು ಸಾಧ್ಯವಿರುತ್ತಿದ್ದುದು ಇವನೊಬ್ಬನ ಕೂಡ ಮಾತ್ರ. ಅದಕ್ಕಾಗಿಯೇ ಅವನನ್ನು ಕಂಡರೆ ಇವನಿಗಷ್ಟೊಂದು ಪ್ರೀತಿ. ಮಾಸ್ಟರು ಸ್ವಲ್ಪ ಹಣ ಕೂಡಿಸಿಕೊಂಡು, ಮತ್ತೆ 'ಮರ್ಯಾದಸ್ಥ'ನಾಗಲು ಯತ್ನಿಸಿದರೆ, ಇಬ್ಬರೂ ಕುಳಿತು, ಈ ನಶ್ವರ, ಅಸ್ಥಿರ ಜೀವನದ ವಿಚಾರವಾಗಿ ಹರಟೆ ಹೊಡೆದು, ಇದ್ದುದನ್ನೆಲ್ಲಾ ಕುಡಿತಕ್ಕೆ ಸುರಿದು, ಮೊದಲಿನಂತೆ ದುಸ್ಥಿತಿಗೆ ಇಳಿದುಬಿಡುತ್ತಿದ್ದರು. ಈ ವಿಷಯವನ್ನು ಕುವಾಲ್ಡನೂ ಬಲ್ಲ.

ಈ ಮಾಸ್ಟರು ವೋಲ್ಗದ ಒಂದು ಶಾಲೆಯಲ್ಲಿ ಉಪಾಧ್ಯಾಯನಾಗಿದ್ದನು. ಅಲ್ಲಿ ಅದೇನೋ ತೊಂದರೆ ಉಂಟಾಗಿ, ಅಲ್ಲಿಂದ ಮೇಲಧಿಕಾರಿಗಳು ಅವನನ್ನು ಹೊರಗೆ ಹಾಕಿದರು. ಆಮೇಲೆ ಎಲ್ಲೋ ಗುಮಾಸ್ತೆಯಾಗಿದ್ದು ಅದನ್ನೂ ತೊರೆಯಬೇಕಾಯಿತು. ಇದಾದಮೇಲೆ ಒಂದು ಪುಸ್ತಕ ಭಂಡಾರದಲ್ಲಿ ಕೆಲಸಕ್ಕೆ ಸೇರಿ, ಅಲ್ಲಿದ್ದುಕೊಂಡೇ ಬೇರೆ ಯಾವುದಾದರೂ ಉದ್ಯೋಗ ಹುಡುಕುತ್ತಾ ಕೊನೆಗೆ ವಕೀಲನಾದ. ಆಗಲೇ ಅವನು ಕುಡಿತದ ಅಭ್ಯಾಸಕ್ಕೆ ಮೊದಲು ಮಾಡಿದುದು. ಅದರ ಫಲವಾಗಿ ಅವನು ಕುವಾಲ್ಡನ ಗೆಳೆಯ

ನಾದ. ಈಗ ತನ್ನ ಜೀವನಕ್ಕೆ ಬೇಕಾಗುವಷ್ಟು ಹಣವನ್ನು – ಅಂದರೆ ಕುಡಿತಕ್ಕೆ ಸಾಕಾಗುವಷ್ಟನ್ನು ಯಾವುದೋ ವೃತ್ತಪತ್ರಿಕೆಯ ಬಾತ್ಮೀದಾರನಾಗಿ ಸಂಪಾದಿಸುತ್ತಿದ್ದ. ಒಂದೊಂದು ವಾರವಂತೂ ೧೫ ರೂಬಲಿನಷ್ಟು ಸಂಪಾದಿಸಿ, ಅದನ್ನು ಕುವಾಲ್ಡನ ಕೈಲಿಟ್ಟು "ಇನ್ನೊಂದು ವಾರ ಸಾಕು. ನಾನು ಇಲ್ಲಿಂದ ಹೊರಡಲು ಚೈತನ್ಯ ಬರುತ್ತದೆ. ಒಳ್ಳೆ ಬಟ್ಟೆಗಾಗುವಷ್ಟಾದರೂ ಸಂಪಾದನೆ ಆಗುತ್ತೆ. ನಾನೂ ಸದ್ಗೃಹಸ್ಥನಾಗಿ ಬಿಡುತ್ತೇನೆ…." ಆಗ ಕುವಾಲ್ಡ, "ಒಳ್ಳೆಯದು, ಇನ್ನೊಂದು ವಾರ ನಿನಗೆ ಒಂದು ತೊಟ್ಟು ವೋಡ್ಕಾವನ್ನೂ ಕೊಡುವುದಿಲ್ಲ."

"ಹಾಗೆ ಮಾಡಿದರೆ ನಿನಗೆಷ್ಟೋ ಧನ್ಯವಾದಗಳು" ಎಂದು ಮಾಸ್ಟರು ಅನ್ನುತ್ತಿದ್ದ.

ಆದರೆ ಒಂದೆರಡು ದಿನವಾದರೆ ಸರಿ, ಮಾಸ್ಟರಿಗೆ ತಡೆಯಲಾಗುತ್ತಿರಲಿಲ್ಲ. ಪರಿಪರಿಯಾಗಿ ಕುವಾಲ್ಡನನ್ನು ಬೇಡಿಕೊಳ್ಳುತ್ತಿದ್ದ. ಅವನು ಜಗ್ಗಬೇಕಲ್ಲಾ ?

ಕೊನೆಗೆ ಮಾಸ್ಟರು ಅವನ ಕೋಟು ಹಿಡಿದು, ತನ್ನ ಒಣಗಿದ ತುಟಿಯಿಂದ ತಡವರಿಸಿ ಮಾತನಾಡುತ್ತಾ, ತನ್ನ ಕಣ್ಣಲ್ಲಿ ದಾರುಣತೆಯನ್ನು ಸೂಸಿ ಬೇಡಿಕೊಂಡಾಗ ಕುವಾಲ್ಡ ಒಪ್ಪಿಬಿಡುತ್ತಿದ್ದ. ಮತ್ತೆ ಕುಡಿತಕ್ಕೆ ಆರಂಭ. ಮಾಸ್ಟರನೇನಾದರೂ ಹಾಗೆ ಹೀಗೆ ಒಂದು ವಾರ ತಡೆದರೂ, ತಡೆದ ವಿಜಯ ಸಮಾರಂಭ ವಾರಾಂತ್ಯದ ದಿನ ವೋಡ್ಕದ ಮುಂದೆ ನಡೆಯುತ್ತಿತ್ತು.

ಮಾಸ್ಟರು ತಾನು ಸಂಪಾದಿಸಿದುದೆಲ್ಲವನ್ನೂ ಕುಡಿತಕ್ಕೇ ಸುರಿಯುತ್ತಿರಲಿಲ್ಲ. ಅದರಲ್ಲಿ ಅರ್ಧ ಹಣವನ್ನು ತನ್ನ ಬೀದಿಯಲ್ಲಿನ ಬಡವರ ಮಕ್ಕಳಿಗೆ, ಸಿಹಿ ಹಂಚಲು ವಾರಕ್ಕೊಮ್ಮೆ ಉಪಯೋಗಿಸುತ್ತಿದ್ದ. ಮುಂಜಾವಿಂದ ಸಂಜೆಯವರೆಗೆ ಧೂಳು, ಗುಂಡಿ ಚರಂಡಿಗಳಲ್ಲಿ ಆಡುತ್ತಿದ್ದ ಹಸಿದ ಬತ್ತಲೆಂಪು ಮಕ್ಕಳನ್ನು ಕಂಡಾಗ "ಮಕ್ಕಳು ಭೂಮಿಯ ಹೂಗಳು" ಎಂದುಕೊಳ್ಳುತ್ತಿದ್ದ. ಆದರೆ ಆ ಬೀದಿಯಲ್ಲಿ ಮಾತ್ರ ಮಕ್ಕಳು, ಸೊರಗಿ ಭೂದೇವಿಗೊರಗಿದ ಮಕ್ಕಳಾಗಿದ್ದವು ! ಆತ ಅವರಿಗೆ ತಿಂಡಿ ಹಂಚಿ ಅವರನ್ನು ನದಿಯ ತೀರಕ್ಕೊಯ್ದು ಆಡಿಸುತ್ತಿದ್ದಾಗ, ಆ ಮಕ್ಕಳ ಆಟದ ನಗುವಿನ ಸ್ವರ ಸುತ್ತಣ ವಾತಾವರಣ

ವನ್ನು ತುಂಬಿತೆಂದರೆ ಸರಿ, ಅವನ ದೇಹವೂ ಸಂತಸದಿಂದ ಉಬ್ಬುತ್ತಿತ್ತು. ಅವನೆಂದರೆ ಮಕ್ಕಳಿಗೂ ಬಲು ಸದರ. ಅವನನ್ನು ಆನೆ, ಕುದುರೆಯಾಗಿ ಮಾಡಿಕೊಂಡು ಸವಾರಿ ಮಾಡುವರು. ಅನೇಕ ಸಾರಿ ಅವನ ಕಿವಿ ಮೂಗು ಎಳೆಯುವರು. ಇದೆಲ್ಲಾ ಅವನಿಗೂ ಪ್ರಿಯವಾಗಿಯೇ ಇದ್ದಿತೆಂದು ಕಾಣುತ್ತೆ. ಎಂದೂ ಬೇಡವೆಂದವನಲ್ಲ ಅವನು. ಹಾಗೆಯೇ ಅವರ ಕೂಡ ಕೊಂಚ ಆಡಿ, ಕೊನೆಗೆ ಪಾವಿಲೋಫನ ವೋಡ್ಕ ಅಂಗಡಿಯ ಕಡೆಗೆ ನಡೆಯುತ್ತಿದ್ದ. ಜ್ಞಾನ ತಪ್ಪುವವರೆಗೂ ಕುಡಿದು ಬಿಡುತ್ತಿದ್ದ.

ಪ್ರತಿ ದಿನವೂ ತನ್ನ ಕೆಲಸದಿಂದ ಅವನು ಹಿಂತಿರುಗುವಾಗ ಕೈಯ್ಯಲ್ಲಿ ಯಾವುದಾದರೊಂದು ವೃತ್ತಪತ್ರಿಕೆಯನ್ನು ತರುತ್ತಿದ್ದ. ಅಲ್ಲಿನ ನಿರ್ಭಾಗ್ಯರೆಲ್ಲಾ, ಅವನ ಸುತ್ತ ಸುತ್ತಿಕೊಳ್ಳುತ್ತಿದ್ದರು. ಅವರಲ್ಲೆಷ್ಟೋ ಜನ ಕುಡಿದು ಅಮಲೇರಿದವರು, ಹರಕು ಚಿಂದಿ ಧರಿಸಿದವರು – ಅಂತೂ ಅವರ ಇರುವು ಅಸಹ್ಯಕರವಾಗಿರುತ್ತಿತ್ತು.

ಅವರಲ್ಲಿ ಮೊದಲನೆಯವನು, ಅಲೆಕ್ಸಿ ಮ್ಯಾಕ್ಸಿಮೋವಿಚ್ ಸಿಮ್ ಟ್ಸೋವ್. ಒಮ್ಮೆ ಮೋಜಿನಿದಾರನಾಗಿದ್ದವನು. ಈಗ, ಬೆಂಕಿಪೆಟ್ಟಿ ಸಿಗರೇಟು, ಕೊಳಿತ ಹಣ್ಣು ಹಂಪಲನ್ನು ಬೀದಿಯ ಮೇಲೆ ಮಾರಿ ಜೀವನ ನಡೆಸುತ್ತಿದ್ದ. ಅರವತ್ತು ದಾಟಿದ ಮುದುಕ. ಅವನನ್ನು ಅಲ್ಲಿಯವರು 'ಕುಬಾರ್' ಎಂದು ಕರೆಯುವರು.

ಎರಡನೆಯವನು ಲೂಕ್ ಆನ್‌ಟೋನೋವಿಚ್ ಮಾರ್‌ಟಿಯನೋಫ್. ಅಡ್ಡ ಹೆಸರು ಕೋನೆಟ್ಸ್. ಮೊದಲು ಜೈಲಿನ ಇನ್ಸ್‌ಪೆಕ್ಟರಾಗಿದ್ದ. ಈಗ ಅವನು ಜೀವನ ನಡೆಸುತ್ತಿದ್ದುದು ಜೂಜಿನಿಂದ – ಮೂರೆಲೆಯ ಆಟ ಆಡಿ. ಇವರ ಜತೆಗೆ ಹಣ ಸಂಪಾದಿಸುವ ಇನ್ನೂ ಎಷ್ಟೋ ಚಮತ್ಕಾರ ಅವನಿಗೆ ಗೊತ್ತಿತ್ತು - ಆದರೆ ಪೋಲೀಸರು ಮಾತ್ರ ಅಂತಹ ಆಟಗಳನ್ನು ಸಹಿಸರು. ಸ್ಕೂಲ್ ಮಾಸ್ಟರಿನ ಪಕ್ಕದಲ್ಲಿ ದೊಪ್ಪನೆ ಮಲಗಿ, ಕೈಯನ್ನು ಸೀಸೆಗೆ ನೀಡಿ "ಪತ್ರಿಕೆ ನೋಡಬಹುದೇ" ಎನ್ನುತ್ತಿದ್ದ. ಪೇಪರು ಓದಲು ಇದಾದಮೇಲೆ ಬರುತ್ತಿದ್ದವನು, ಪಾವೆಲ್ ಸಾನ್‌ಸ್ಟೈಫ್. ಮೂವತ್ತರ ಪ್ರಾಯ, ಬಹು ಕೃಶನಾಗಿದ್ದ. ಅವನ ಗೆಳೆಯರು ಅವನನ್ನು "ಸ್ಕ್ಯಾವ್" ಎನ್ನು

ತ್ತಿದ್ದರು. ಬೀಸಣಿಗೆ, ಬ್ರಷ್ ಮುಂತಾದುವನ್ನು ಮಾಡಿ, ಬಂದ ಹಣದಿಂದ ಜೀವಿಸುತ್ತಿದ್ದ.

ಇನ್ನು "ಕಿಸೆಲ್ ನಿಕಾಫ್" ಅವನ ಅಡ್ಡ ಹೆಸರು, "ಅರ್ಧ ಟರಾಸ್" ಎಂದು. ಕಾರಣ, ಅವನ ಗೆಳೆಯ ಟರಾಸ್‌ನ ಸ್ಥೂಲತೆಯಲ್ಲಿ ಸರಿಯಾಗಿ ಅರ್ಧವಿದ್ದ ಇವನು. ಮೂರು ನಾಲ್ಕು ಸಾರಿ ಬಂದೀಖಾನೆಯ ಮುಖ ಕಂಡು ಬಂದವನು. ಇವನ ಗೆಳೆಯ 'ಟರಾಸ್' ಮೊದಲು ಕ್ರಿಸ್ತದೇಗುಲದಲ್ಲಿ ಪೂಜಾರಿಯಾಗಿದ್ದ. ಕುಡಿತ, ಕೆಟ್ಟ ನಡತೆಗೆ ಬಿದ್ದು ಜೀವನ ಹಾಳು ಮಾಡಿಕೊಂಡ, ಗೆಳೆಯರಲ್ಲಿ ಕುಣಿತಕ್ಕೆ ಪ್ರಖ್ಯಾತನಾಗಿದ್ದ. ಇವನೂ, ಇವನ ಸ್ನೇಹಿತ 'ಅರ್ಧ ಟರಾಸ್' ಇಬ್ಬರೂ, ನದಿಯ ಪಕ್ಕದಲ್ಲಿ ಮರಗೆಲಸ ಮಾಡುತ್ತಿದ್ದರು. ಕಥೆ ಹೇಳುವುದರಲ್ಲೂ ಬಹಳ ನಿಪುಣ. ರಾಜರು, ಗುರುಗಳು ಮುಂತಾದವರ ಕಥೆಗಳನ್ನು ಶಾಂತವಾಗಿ ಹೇಳುತ್ತಿದ್ದ. ತನ್ನ ಗಂಭೀರತೆಯನ್ನೆಂದೂ ಕಳೆದುಕೊಳ್ಳುತ್ತಿರಲಿಲ್ಲ. ಇವನ ಭಾವನಾಶಕ್ತಿಯನ್ನೂ ಕಥೆ ಹೇಳುವ ರೀತಿಯನ್ನೂ ನೋಡಿ, ನಿವಾಸಿಗಳಿಗೆ ಆಶ್ಚರ್ಯ. ಅಂತಹ ಕವಿಯಾಗಬಲ್ಲ ವ್ಯಕ್ತಿ ಹೀಗಾಗಿದ್ದುದು, ಪ್ರಪಂಚಕ್ಕೊಂದು ನಷ್ಟ!

ಇವರ ಜತೆಗೆ ಇನ್ನೊಬ್ಬ ತರುಣನಿದ್ದ. ಕುವಾಲ್ಡ ಅವನನ್ನು 'ಧೂಮಕೇತು' ವೆಂದು ಕರೆಯುತ್ತಿದ್ದ. ಬೆಳಗಿನಲ್ಲಿ ದುಡಿದು, ರಾತ್ರಿ ಹೇಗೋ ಈ ನಿರ್ಭಾಗ್ಯರ ಗೃಹಕ್ಕೆ ಬಂದು ಸೇರಿಕೊಳ್ಳುತ್ತಿದ್ದ. ಮೊದಲು ತಾನು ಅಲ್ಲಿ ಸೇರಿಕೊಂಡುದೇಕೆಂದು ಹೇಳದೆ ಇರಲು, ಕೆಲವರೊಡನೆ ಗುದ್ದಾಡಬೇಕಾಯಿತು. ಕೊನೆಗೆ ಅಲ್ಲಿನ ನಿವಾಸಿಗಳಲ್ಲೊಬ್ಬನಾದ.

ಮೇಲಿನ ವ್ಯಕ್ತಿಗಳೆಲ್ಲಾ ಸೇನಾನಿ ಕುವಾಲ್ಡನ ಅಂಗರಕ್ಷಕರು. ಇವರೊಂದಿಗೆ ಆ ನಿರ್ಭಾಗ್ಯ ಗೃಹದಲ್ಲಿ ಒಂದಷ್ಟು ಹಳ್ಳಿಯ ಜನ ಇದ್ದರು. ಮೇಲಿನ ವ್ಯಕ್ತಿಗಳಷ್ಟು ಚರಿತ್ರೆ, ಅವರಿಗಿರದಿದ್ದರೂ, ಅವರಷ್ಟೇ ದುರ್ಗತಿಗೆ ಒಳಗಾಗಿದ್ದ ಜನ ಇವರು.

ಹಳ್ಳಿಯ ಜನರಲ್ಲಿ ಮುಖ್ಯನಾದವನು 'ಟ್ಯಾಪ.' ಚಿಂದಿ ಕೂಡಿಸುವ ಕೆಲಸ ಇವನದು. ಬಹಳ ನೀಳ ವ್ಯಕ್ತಿ .... ಮುಖ ಕೆಳಗೆ ಮಾಡಿಯೇ ನಡೆಯುತ್ತಿದ್ದ ಆ ನಿರ್ಭಾಗ್ಯರ ವಸತಿಗೆ. ಮೊಟ್ಟಮೊದಲು ಬಂದವನು ಈತ.

ಇವನ ಹತ್ತಿರ ಬೇಕಾದಷ್ಟು ಬಚ್ಚಿಟ್ಟ ಸಂಪತ್ತು ಇದೆ ಎಂದು ಜನ ಆಡಿಕೊಳ್ಳುತ್ತಿದ್ದರು. ಆದರೆ ತನ್ನ ಹತ್ತಿರ ಏನೂ ಇಲ್ಲವೆಂಬೇ ಅವನು ಹೇಳುತ್ತಿದ್ದ.

ಅವನ ಮಾತಿನ ಧ್ವನಿ ಬಲು ಗಡಸು. ಮಾತು ಅರ್ಥವಾಗುವುದೇ ಕಷ್ಟ. ಅದಕ್ಕೇ ಅವನು ಹೆಚ್ಚಿಗೆ ಮಾತನಾಡುತ್ತಿರಲಿಲ್ಲ. ಹೆಚ್ಚಿಗೆ ಯಾರ ಜತೆಗೂ ಸೇರುತ್ತಲೂ ಇರಲಿಲ್ಲ. ಈ ನಿರ್ಭಾಗ್ಯರ ವಸತಿಗೆ ಹಳ್ಳಿಯಿಂದ ಯಾರಾದರೂ ಬಂದರೆ ಅವರನ್ನು ಗದರಿಸಿ, ಇಲ್ಲಿಗೇಕೆ ಬಂದಿರೆಂದು ಕೇಳಿ, ಅಲ್ಲಿಂದ ಅವರನ್ನು ಓಡಿಸಿ ಬಿಡುತ್ತಿದ್ದ. ಮತ್ತೆ ಅವರು ಅಲ್ಲಿ ತಲೆ ಹಾಕುತ್ತಿರಲಿಲ್ಲ. ತನಗೆ ಬಿಡುವಿದ್ದಾಗಲೆಲ್ಲ ತನ್ನ ಸ್ಥಳದಲ್ಲಿ ಒರಗಿ, ಬೈಬಲಿನ ಒಂದು ಹರಕು ಪ್ರತಿಯನ್ನು ಓದುತ್ತಿದ್ದ. ಇಲ್ಲವೇ ತನ್ನ ಹರಕಲು ಬಟ್ಟೆಗಳನ್ನು ಹೊಲಿಯುತ್ತ ಕುಳಿತುಕೊಳ್ಳುತ್ತಿದ್ದ. ಸ್ಕೂಲು ಮಾಸ್ಟರರು, ವೃತ್ತಪತ್ರಿಕೆ ತಂದಾಗ ತನ್ನ ತಾಣದಿಂದ ಹೊರಬಂದು, ವರ್ತಮಾನವನ್ನೆಲ್ಲ ಮಾತನಾಡದೆಯೇ ಕಿವಿಗೊಟ್ಟು ಕೇಳುತ್ತಿದ್ದ. ಇತರರಂತೆ ಒಂದಾದರೂ ಪ್ರಶ್ನೆ ಹಾಕದೆ, ನಿಟ್ಟುಸಿರುಬಿಟ್ಟು "ಅದನ್ನಿಲ್ಲಿ ಕೊಡಿ" ಎನ್ನುವನು. "ಯಾಕೆ ಬೇಕು ನಿನಗೆ."

''ಕೊಡು ಅಂದರೆ ಕೊಡಬೇಕು. ಅಲ್ಲಿ ನಮ್ಮ ವಿಷಯ ಒಂದಷ್ಟಿದೆ."

''ನಿಮ್ಮ ವಿಷಯ ಎಂದರೆ ?"

''ನಮ್ಮ ಹಳ್ಳಿಯ ವಿಷಯ !''

ಅವನನ್ನು ನೋಡಿ ಎಲ್ಲರೂ ಒಂದು ನಗೆ ನಕ್ಕು ವೃತ್ತಪತ್ರಿಕೆಯನ್ನು ಅವನೆಡೆಗೆ ಎಸೆಯುತ್ತಿದ್ದರು. ಹಳ್ಳಿಯಲ್ಲಿ ಹೆಚ್ಚು ಮಳೆ ಬಿದ್ದು ಧಾನ್ಯ ಹಾಳಾದುದು, ಬೆಂಕಿ ಬಿದ್ದು ಮನೆ ಸುಟ್ಟುದು, ಹೆಂಗಸು ವಿಷ ಹಾಕಿ ಸಂಸಾರವನ್ನೇ ಕೊಂದ ಸಮಾಚಾರ, ಮುಂತಾದ ಹಳ್ಳಿಯ ಜೀವನಕ್ಕೆ ಸಂಬಂಧಿಸಿದ ದಾರುಣ ವಿಚಾರಗಳನ್ನೆಲ್ಲ ಬಹಳ ಕುತೂಹಲದಿಂದ ಅವನು ಓದುತ್ತಿದ್ದ. ಓದುವಾಗ ಅವನ ಸ್ವರದಲ್ಲಿ ಕರುಣೆಯ ಭಾವ ವ್ಯಕ್ತವಾಗುತ್ತಿತ್ತು. ಭಾನುವಾರ ತನ್ನ ಕೆಲಸದ ಮೇಲೆ ಅವನೆಂದೂ ಹೋಗುತ್ತಿರಲಿಲ್ಲ. ಬದಲು, ಆ ದಿನವೆಲ್ಲಾ ಬೈಬಲನ್ನು ಓದುವುದರಲ್ಲೇ ಕಳೆಯುವನು.

ತನ್ನ ಅಭ್ಯಾಸದ ವೇಳೆಯಲ್ಲಿ ಯಾರಾದರೂ ಅಡ್ಡಬಂದರೆ ಬಹಳ ರೇಗಿ ಬಿಡುತ್ತಿದ್ದ.

ಕುವಾಲ್ಡ ಒಂದೊಂದು ಸಾರಿ "ಅದರಲ್ಲಿ ನಿನಗೇನು ತಿಳಿಯುತ್ತೆ. ಅತ್ತ ಬಿಸಾಡು" ಎಂದರೆ

"ನಿನಗೇನು ತಿಳಿಯುತ್ತೆ?" ಎನ್ನುತ್ತಿದ್ದ.

"ನನಗೇನೂ ತಿಳಿಯುವುದೂ ಇಲ್ಲ, ನಾನು ಓದುವುದೂ ಇಲ್ಲ!"

ಒಂದು ದಿನ ಸ್ಕೂಲ್ ಮಾಸ್ಟರು ಟ್ಯಾಪನೆಡೆಗೆ ಬಂದ.

"ನೀನೆಲ್ಲಿ ಕಲಿತೆ ಓದುವುದನ್ನು" ಎಂದ.

"ಸೆರೆಮನೆಯಲ್ಲಿ!"

"ಅಲ್ಲಿಗೆ ಬೇರೆ ಹೋಗಿದ್ದೆಯೋ, ಕಾರಣ?"

"ಏನೋ ತಪ್ಪುಮಾಡಿದೆ. ಅಲ್ಲಿ ಯಾರೋ ಹೆಂಗಸು ಇವನ್ನ ನನಗೆ ತಂದುಕೊಟ್ಟಳು. ಜೈಲಿನಲ್ಲಿ ಇದು ಬಹಳ ಒಳ್ಳೆಯದು. ಅಲ್ಲವೇ?"

"ಅಲ್ಲಿ ಒಳ್ಳೆಯದೇನಿರುವುದು?"

"ನಮಗೆ ಅಕ್ಷರ ಕಲಿಸುತ್ತಾರೆ - ಕಾಸಿಲ್ಲದೆ. ಜತೆಗೆ ಪುಕ್ಕಟ್ಟೆ ಪುಸ್ತಕವನ್ನು ಕೊಡುತ್ತಾರೆ!"

ಸ್ಕೂಲ್ ಮಾಸ್ಟರ್ ನಿರ್ಭಾಗ್ಯರ ವಸತಿಗೆ ಬರುವುದಕ್ಕೆ ಮುಂಚೆ ಎಷ್ಟೋ ಮುಂಚಿನಿಂದ ಟ್ಯಾಪ್ ಅಲ್ಲಿದ್ದುದರಿಂದ, ಅವನು ಸ್ಕೂಲ್ ಮಾಸ್ಟರನ ವಿಚಾರವೆಲ್ಲವನ್ನೂ ವಿಮರ್ಶಿಸಿ ತಿಳಿದುಕೊಂಡಿದ್ದ. ಒಂದು ದಿನ ಅವನು

"ನೀವು ಒಳ್ಳೆ ವಿದ್ವಾಂಸರಂತೆ ಕಾಣುತ್ತೀರಿ. ಇದನ್ನ ಓದಿದ್ದೀರಾ?" ಎಂದ.

ಮಾಸ್ಟರ್ "ಹು" ಎಂದು ಉತ್ತರಕೊಟ್ಟ.

"ಎಲ್ಲಾ ನೆನಪಿದೆಯೇ?"

"ಓಹೋ! ಏನಾಗಬೇಕು?"

"ಅಮೆಲಿಕೈಟರ ವಿಚಾರ ಗೊತ್ತೇ?"

"ಗೊತ್ತು."

"ಈಗ ಅವರೆಲ್ಲಿ?"

"ಗತಿಸಿಹೋದರು."

"ಫಿಲಿಸ್ಟೈನರು ?"

"ಅವರೂ ಅಷ್ಟೆ ! ನಾಶವಾಗಿ ಹೋದರು !''

"ಅಂದರೇನು, ಅವರೆಲ್ಲಾ ಈಗ ಇಲ್ಲವೇ ಇಲ್ಲವೇ ?"

"ಇಲ್ಲ ''

"ಹಾಗಾದರೆ ನಾವೂ ಕೂಡ, ನಾಶವಾಗಿ ಹೋಗುತ್ತೇವೆಂದ ಹಾಗಾಯಿತಲ್ಲ ! ''

"ಹೌದು, ಅಂತಹ ಕಾಲ ಬಂದಾಗ '' ಎಂದ ಸ್ಕೂಲ್ ಮಾಸ್ಟರ್.

"ಇಸ್ರೇಲನ ಯಾವ ಗುಂಪಿನವರು ನಾವು ?"

ಸ್ಕೂಲ್ ಮಾಸ್ಟರ್ ಅವನನ್ನು ಸಿಟ್ಟಿನಿಂದ ನೋಡಿದ. ಆಮೇಲೆ, ಸಿಮ್ರಿ, ಸ್ಕಿತಿಯನರು, ಸ್ಲಾವರು, ಹೂಣರು ಮುಂತಾದವರ ವಿಚಾರವನ್ನೆಲ್ಲ ಹೇಳಿದ. ಅವನು ಹೇಳಿ ಮುಗಿಸಿದ ಮೇಲೆ ಟ್ಯಾಪ, "ನೀನು ಸುಳ್ಳು ಹೇಳುತ್ತಿದ್ದಿ'' ಎಂದ.

"ನಾನು ಸುಳ್ಳು ಹೇಳುತ್ತಿದ್ದೇನೆಯೇ ?"

"ಹೌದು, ನೀನು ಹೇಳಿದ ಹೆಸರುಗಳೊಂದೂ ಬೈಬಲಿನಲ್ಲಿಲ್ಲ ! ಆಡಮ್ ದೇವರಿಂದ ಬಂದ, ಯಹೂದ್ಯರು ಆಡಮ್‌ನಿಂದ ಬಂದರು. ನಾವೆಲ್ಲ ಯಹೂದ್ಯರಿಂದ ಬಂದವರು !''

"ಅಂದರೆ ?''

"ಟಾರ್ಟರರು ಇಸ್ಮೇಲ್‌ನಿಂದ ಬಂದರು. ಇಸ್ಮೇಲ್ ಯಹೂದ್ಯರಿಂದ ಬಂದವನು.''

"ಆದರೆ ?''

''ಆದರೇನು ? ನೀನು ಸುಳ್ಯಾಕೆ ಹೇಳುತ್ತಿ ಅಂತ''

ಸ್ಕೂಲ್ ಮಾಸ್ಟರಿಗೆ ಅರ್ಥವೇ ಆಗಲಿಲ್ಲ! ಮಾರನೆ ದಿನ ಮತ್ತೆ ಟ್ಯಾಪ್, "ನಾವು ಯಾರು ಗೊತ್ತೆ ಮಾಸ್ಟರ್'' ಎಂದ.

"ಹೌದು, ಸ್ಲಾವ್ ವಂಶದವರು ನಾವು !''

"ಬೈಬಲಿನಲ್ಲಿ ಇದ್ದ ಹಾಗೆ ಮಾತನಾಡು ? ಅಲ್ಲಿ ಈ ಹೆಸರೇ ಇಲ್ಲ !"

ಮಾಸ್ಟರ್ ಬೈಬಲನ್ನು ಟೀಕಿಸಲು ಮೊದಲು ಮಾಡಿದ. ಆ ಮುದುಕ ಸುಮ್ಮನಿರಲಿಲ್ಲ. ಮಧ್ಯೆ ಬಾಯಿ ಹಾಕಿ

"ಸಾಕು ನಿಲ್ಲಿಸಿ. ದೇವರಿಗೆ ರಷ್ಯನರು ಗೊತ್ತಿರಲಿಲ್ಲ ಎಂತಲೇ, ನೀವು ಹೇಳಿದ ಹಾಗೆ, ಒಂದು ಜನಾಂಗ ಸತ್ತುಹೋಗಲು ಸಾಧ್ಯವೇ ? ರಷ್ಯದ ಜನ ಸತ್ತುಹೋಗಲು ಸಾಧ್ಯವೇ ? ಎಂದಿಗೂ ಇಲ್ಲ. ನಮ್ಮಲ್ಲಿ ಎಷ್ಟೊಂದು ಹಳ್ಳಿಗಳಿವೆ ? ಜನ ದೇವರಿಗೆ ಬೇಕು. ಯಾಕೆಂದರೆ ಭೂಮಿ ಉಳುವವರು ಅವರು ! ಅದಕ್ಕೇ ಅಮಲಕೈಟರು ಸತ್ತಿಲ್ಲ ! ಅವರೇ ಇಂದಿನ ಫ್ರೆಂಚರು, ಜರ್ಮನರು !"

ಅವನ ಮಾತಿನಲ್ಲಿ ವ್ಯಂಗ್ಯ, ಸ್ಫೂರ್ತಿ, ಪೂರ್ಣ ನಂಬಿಕೆ ಇವೆಲ್ಲ ತುಳು ಕಾಡುತ್ತಿದ್ದುವು. ಕುಡಿತದ ಅಮಲಿನಲ್ಲಿದ್ದ ಸ್ಕೂಲ್ ಮಾಸ್ಟರಿಗೆ ಬೇಜಾರಾಗಿತ್ತು. ತಾನೂ ಏನಾದರೂ ಹೇಳಬೇಕೆಂದು ಅವನಿಗನಿಸಿತು. ಮಾತು ತುಟಿಯ ಮೇಲಿತ್ತು. ಆದರೆ, ಮಾತನಾಡಲು ಮಾನಸಿಕ ಶಕ್ತಿ ಸಾಲದಾಗಿತ್ತು. ಟ್ಯಾಪ ಹೇಳಿದ,

"ನೀನು ಹೋದೆ ! ದೇವರಿಗೆ ಬೇಡದವನಾದೆ. ನಿನ್ನ ಆತ್ಮ ಹಾಳಾಗಿ ಹೋಯಿತು ! ಬರಿ ಪೊಳ್ಳು ಮಾತನಾಡುತ್ತೀ ! ಸಾಕು ಸಾಕು, ನಿಲ್ಲಿಸು !"

"ಹಾ ಟ್ಯಾಪ್ ! ನೀನು ಹೇಳುವುದೆಲ್ಲ ನಿಜ. ಜನತೆ ಎಂದಿಗೂ ಸಾಯುವುದಿಲ್ಲ. ಅದು ಅಮರ ! ಆದರೆ ಜನತೆಯನ್ನು ನಾನು ಅರಿತವನಲ್ಲ. ನನ್ನನ್ನು ಜನತೆ ಅರಿತಿಲ್ಲ. ಅದೇ ನನ್ನ ಜೀವನದ ದುರಂತದಲ್ಲೊಂದು. ನೀನು ಹೇಳಿದ ಹಾಗೆ ನಾನು ಬಾಯಿ ಮುಚ್ಚಿಕೊಂಡಿರಬೇಕು. ಆದರೂ ನನ್ನ ರೀತಿಯನ್ನು ನೀನು ತಿಳಿಯೆ !"

ಸ್ಕೂಲು ಮಾಸ್ಟರನ ಕಣ್ಣುಗಳಲ್ಲಿ ನೀರು ಹರಿಯಿತು. ಕಣ್ಣೀರು ಹರಿಸಿದ ಮೇಲೆ ಏನೋ ಒಂದು ವಿಧದ ಸಮಾಧಾನ.

"ನೀನು ಹಳ್ಳಿಯ ಕಡೆಗೆ ಹೋಗಬೇಕು. ಅಲ್ಲಿ ಎಲ್ಲಾದರೂ ಮಾಸ್ಟರನ ಕೆಲಸ ಕೈಗೊಂಡರೆ ನೀನು ಎಷ್ಟೋ ಸುಖಿಯಾಗುವಿ. ಇಂತಹ ಕ್ಷುದ್ರಜೀವನವನ್ನು ಇಲ್ಲಿ ನಡೆಸುವುದರಿಂದ ಏನು ಪ್ರಯೋಜನ ?" ಎಂದ ಟ್ಯಾಪ.

ಅಂದಿನಿಂದ ಅವರಿಬ್ಬರೂ ಗೆಳೆಯರಾದರು. ನಿವಾಸದ ಮತ್ತಿತರ

ಜನ ಇದನ್ನು ಕಂಡು, "ಸ್ಕೂಲ್ ಮಾಸ್ಟರ್ ಟ್ಯಾಪನ ದುಡ್ಡಿಗೆ ಏಟುಹಾಕಿದ್ದಾನೆ!" ಎನ್ನುತ್ತಿದ್ದರು.

ಈ ಜನರೆಲ್ಲ ಸ್ಕೂಲು ಮಾಸ್ಟರನ ಸುತ್ತ ಬಂದು ನಿಂತಾಗ ವೃತ್ತಪತ್ರಿಕೆಯ ಓದು ಮೊದಲಾಗುತ್ತಿತ್ತು.

ಸೇನಾನಿ ಕುವಾಲ್ಡ ಕೇಳುತ್ತಿದ್ದ "ಇವತ್ತೇನಿದೆ ಇದರಲ್ಲಿ? ಏನಾದರೂ ಸಣ್ಣ ಕಥೆ ಉಂಟೇ?"

"ಇಲ್ಲ" ಎನ್ನುತ್ತಿದ್ದ ಸ್ಕೂಲ್ ಮಾಸ್ಟರ್.

"ನಿಮ್ಮ ಸಂಪಾದಕನಿಗೆ ಬುದ್ಧಿಯಿಲ್ಲ, ಸಂಪಾದಕೀಯವಾದರೂ ಉಂಟೇ?"

"ಇದೆ .... ಅದನ್ನ ಗುಲಿಯೇವ್ ಬರೆದ ಹಾಗಿದೆ!"

"ಅವನು ಚೆನ್ನಾಗಿ ಬರೆಯುತ್ತಾನೆ, ಓದು!"

"ಹಿಂದೆ ಹದಿನೈದು ವರುಷಗಳ ಹಿಂದೆ ಮಾಡಿದ ಜಮೀನುದಾರೀ ಪದ್ಧತಿಯೇ ಇಂದೂ ಮುಂದುವರಿದು, ಪಟ್ಟಣಿಗರಿಗೆ ಇದರಿಂದ ಬಹಳ ಅನುಕೂಲವಾಗುತ್ತಿದೆ" ಎಂದು ಓದಿದ ಸ್ಕೂಲ್ ಮಾಸ್ಟರ್.

"ದಗಾಖೋರರು! ಅದರಿಂದ ಈ ವರ್ತಕರಿಗೆ ಅನುಕೂಲ. ಅದಕ್ಕೇ ಅದು ಇಂದಿಗೂ ಉಳಿಯುವಂತೆ ಅವರು ಏರ್ಪಾಡು ಮಾಡಿರುವುದು" ಎಂದ ಕುವಾಲ್ಡ.

"ಈ ಲೇಖನ ಬರೆಯುವುದರಲ್ಲಿ ಒಂದು ಉದ್ದೇಶವಿದೆ" ಎಂದ ಸ್ಕೂಲ್ ಮಾಸ್ಟರ್. ಅದಕ್ಕೆ ಕುವಾಲ್ಡ "ಸಣ್ಣ ಕಥೆಗೆ ಅದು ತಕ್ಕ ವಿಷಯ ಅಲ್ಲವೇ?" ಇದರ ಮೇಲೆ ಸಣ್ಣ ವಿವಾದ ನಡೆದು, ಕೊನೆಗೆಲ್ಲ ಮೋಕ್ಷಕ್ಕೆ ಕೈನೀಡುತ್ತಿದ್ದರು. ಸಂಪಾದಕೀಯ ಓದಿದ ಮೇಲೆ, ಸ್ಥಾನಿಕ ವಾರ್ತೆ; ಅಲ್ಲಿಂದ ಕೋರ್ಟಿನ ಕೇಸುಗಳು. ಆಗ ಪೋಲೀಸರಿಗೆ ಅದೆಷ್ಟೋ ಬೈಗುಳಗಳಾಗುತ್ತಿತ್ತು. ಒಬ್ಬ ವರ್ತಕನೇನಾದರೂ ಕಳ್ಳತನಕ್ಕೀಡಾಗಿದ್ದರೆ, ಎಲ್ಲರಿಗೂ ಸಂತೋಷ. ಅವರು "ಇನ್ನಷ್ಟು ದುಡ್ಡು ಕದಿಯಬಾರದಾಗಿತ್ತೆ?" ಎಂದುಕೊಳ್ಳುವರು.

"ಅವನನ್ನು ಜೀವಸಹಿತ ಯಾಕೆ ಬಿಟ್ಟರೋ!" ಎಂಬ ಮಾತುಗಳು.

ಕೋರ್ಟಿನ ಕೇಸಿನಲ್ಲಿ ಯಾವನಾದರೂ ಅಂಗಡಿಯವನಿಗೆ ಜುಲ್ಮಾನೆ ಆಗಿದೆ ಎಂದರೆ "ಒಳ್ಳೆ ಸುದ್ದಿ ! ಇನ್ನಷ್ಟಾದರೂ ಜುಲ್ಮಾನೆ ಹಾಕಬಾರದಾಗಿತ್ತೆ ?"

"ಅದು ನ್ಯಾಯಬಾಹಿರ !" ಎಂದ ಸ್ಕೂಲ್ ಮಾಸ್ಟರ್.

"ನ್ಯಾಯಬಾಹಿರ ! ಅಂಗಡಿಯವರು ಮಾಡುವುದೆಲ್ಲ ನ್ಯಾಯವಾದು ದೇನೋ ! ವರ್ತಕನ್ಯಾರು ! ಸ್ವಲ್ಪ ವಿಮರ್ಶಿಸೋಣ, ಈ ಜಂತುವನ್ನು. ಇವನು ಮೊದಲು ರೈತನಾಗಿದ್ದವನು. ಆಮೇಲೆ ಒಂದು ಅಂಗಡಿಯನ್ನು ಕೊಳ್ಳುತ್ತಾನೆ. ಅಂಗಡಿ ನಡೆಸುವುದಕ್ಕೆ ಮೊದಲು ಬಂಡವಲ ಬೇಕು. ರೈತ ಬಡವ : ಆವರಿಗೆ ದುಡ್ಡೇ ಇರುವುದಿಲ್ಲ ಅಂದ ಮೇಲೆ ಇವರಿಗೆ ಹೇಗೆ ಬಂದಿರ ಬೇಕು ದುಡ್ಡು. ಅವನೆಲ್ಲೋ ಮೋಸ, ದಗ ಮಾಡಿರಬೇಕು !" ಕುವಾಲ್ಡ ಹೇಳಿದ. "ನಿಜ, ನಿಜ !" ಎಂದರು ಸುತ್ತಣ ಜನ.

ಈ ವರ್ತಕರನ್ನು ಬಯ್ಯುವಾಗ ಕುವಾಲ್ಡ ಬಹಳ ಸ್ಫೂರ್ತಿ ಪಡೆಯು ತ್ತಿದ್ದ. ಮಾತಿನಲ್ಲಿ ಬೆಂಕಿಯ ಬಿಸಿ ಇರುತ್ತಿತ್ತು. ನನಗೇನಾದರೂ ಪೇಪರು ಗಳಿಗೆ ಬರೆಯುವ ಶಕ್ತಿಯಿದ್ದಿದ್ದರೆ, ಈ ವರ್ತಕರ ನಿಜವಾದ ಬಣ್ಣವನ್ನು ಹೊರಗೆಡಹುತ್ತಿದ್ದೆ. ಮಾನವನಂತಿರುವ ಪಶು ಈತ ಎಂಬುದನ್ನು ಎತ್ತಿ ಹಿಡಿ ಯುತ್ತಿದ್ದೆ. ಈ ತಿಳಿಗೇಡಿಗಳಿಗೆ ಜೀವನದ ರಸ ತಿಳಿಯದು, ದೇಶಪ್ರೇಮವೇ ನೆಂಬುದೂ ತಿಳಿದಿಲ್ಲ ! ಹೆಚ್ಚೇನು ಕಾಸೊಂದನ್ನುಳಿದು ಮತ್ತೇನೂ ಅವರಿಗೆ ಬೇಕಿಲ್ಲ !''

ಪಕ್ಕದಲ್ಲಿ ಕೂತಿದ್ದ ಯಾವನೋ ಒಬ್ಬ ''ಯಾಕೆ, ಅವರ ಮೇಲೆ ಅಷ್ಟೊಂದು ಕೋಪ ನಿಮಗೆ, ನಿಮ್ಮನ್ನು ಈ ದುಸ್ಥಿತಿಗೆ ಎಳೆದವರು ಅವರೇ ಏನು ?''

''ಅವರನ್ನು ಕಟ್ಟಿಕೊಂಡು ನನಗೇನಾಗಬೇಕು ? ಈ ಜೀವನಕ್ಕೆ ನಾನು ಇಳಿದುದು ಜೀವನವನ್ನು ಸವಿಯಬೇಕೆಂತ. ವರ್ತಕರಿಗೆ ಜೀವನವೆಂದರೇ ನೆಂದೇ ತಿಳಿಯದು. ಅದಕ್ಕೇ ಅವರನ್ನು ಕಂಡರೆ ನನಗಾಗದು. ನಾನೇನು ಈಗ ಮರ್ಯಾದಸ್ಥ ಗೃಹಸ್ಥನಲ್ಲ. ನನ್ನ ಈಗಿನ ಜೀವನ ಹಿಂದಿನದರ ನೆರಳು ಮಾತ್ರ. ಒಮ್ಮೆ ಮಾನವನಾಗಿದ್ದ ಜಂತು ನಾನು. ತೊರೆದ ಹೆಂಡತಿ ಯಂತೆ, ಜೀವನ ನನಗೆ. ಅದಕ್ಕೆ ಜೀವನವನ್ನು ಕಂಡರೆ ನನಗೆ ಅಷು

ನಿಕೃಷ್ಟ !" ಎಂದು ನುಡಿದ ಕುವಾಲ್ಡ.

ಇದರ ಮೇಲೆ ಕೊಂಚ ಮಾತುಕತೆಯಾಗಿ, ವಿರೋಧಾಭಿಪ್ರಾಯಗಳಿಂದ ತಿಕ್ಕಾಟ ಬಂದಾಗ, ಸ್ಕೂಲು ಮಾಸ್ಟರ್ ಎಲ್ಲರನ್ನೂ ಸಮಾಧಾನಪಡಿಸುತ್ತಿದ್ದ. ಕುವಾಲ್ಡ ಮತ್ತೆ ಮೊದಲು ಮಾಡಿದ,

"ನಾನು ಮತ್ತೆ ಮತ್ತೆ ಹೇಳುತ್ತೇನೆ. ಇಂದಿನ ಜೀವನವೆಲ್ಲ ವಿಷಜೀವಿಗಳ ಕೈಲಿ ಸೇರಿದೆ. ಜೀವನದ ಶತ್ರುಗಳವರು, ದೊಡ್ಡಗುಣಗಳ ವೈರಿಗಳು. ದುರಾಶೆಯ ಜನ, ತಿಳಿಗೇಡಿಗಳು. ಜೀವನವನ್ನು ಉತ್ತಮಪಡಿಸಲು ಇಷ್ಟವಿಲ್ಲದವರು. ಇಂತಹವರ ಕೈಯಲ್ಲಿ ಜನತೆಯ ಬಾಳು ಬಿದ್ದಿದೆ."

ಆಗ ಸ್ಕೂಲು ಮಾಸ್ಟರ್ ''ಸರಿ ! ಆದರೆ ದೊಡ್ಡ ದೊಡ್ಡ ಪಟ್ಟಣಗಳನ್ನು ಕಟ್ಟಿದವರು ವರ್ತಕರು. ಇಂಡಿಯಾ ದೇಶವನ್ನು ಬ್ರಿಟನ್ನಿಗೆ ದೊರದವರು ವರ್ತಕರು ....''

''ಈ ವರ್ತಕರನ್ನು ಕಟ್ಟಿಕೊಂಡು ನಾನೇನು ಮಾಡಲಿ ? ನಾನು ಈಗ ಮಾತನಾಡುತ್ತಿರುವುದು ಪೆಟುನಿಕಾಫನ ವಿಚಾರ.''

"ಏನು ಆತನ ವಿಚಾರ'' ಎಂದ ಸ್ಕೂಲ್ ಮಾಸ್ಟರ್.

"ಪ್ರಪಂಚದಲ್ಲಿ ನಾನು ಹುಟ್ಟಿದ ಮೇಲೆ ಅಂತಹ ಜನರು ಮಾಡುವ ಅನ್ಯಾಯವನ್ನು ಕಂಡು ಸುಮ್ಮನಿರಲಾರೆ : ಜೀವನವನ್ನು ಹಾಳುಮಾಡುತ್ತಿರುವ ಅಂತಹವರನ್ನು ಕಂಡು ಕಂಡೂ ಸುಮ್ಮನೆ ಕುಳಿತಿರುವುದೆಂತು ?"

"ಏನು, ನಿನ್ನ ಕೋಪ ನೋಡಿ ಅವರು ನಗುತ್ತಾರಲ್ಲ ಅದಕ್ಕೋ ಈ ಮಾತು ?"

''ಇರಲಿ ! ನಮಗೀಗ ಹೊಸ ಜೀವನದ ಹಾದಿ ಬೇಕು. ಜೀವನದಲ್ಲಿ ಹೊಸ ದೃಷ್ಟಿ ಬೇಕು. ಏನೋ ಹೊಸತು ಬೇಕು !''

"ನೀನು ಈಗ ಸರಿಯಾದ ದಾರಿಗೆ ಬಂದು ಮಾತನಾಡುತ್ತಿದ್ದಿ'' ಎಂದ ಸ್ಕೂಲ್ ಮಾಸ್ಟರ್, "ಹೌದು ನಮಗೆ ಬೇಕಾದ್ದು ಅದು.'' ಯಾರೋ ಮೂಲೆಯಿಂದ "ನನಗೆ ನಲವತ್ತು ನಿನಗೆ ಐವತ್ತು ವರುಷ ವಯಸ್ಸು. ಈ ಹೊಸ ಜೀವನ ಕಟ್ಟಿಕೊಂಡೇಕೆ ಈಗ ಅಳಬೇಕು ! ಮೂವತ್ತಕ್ಕೆ ಕಡಿಮೆಯಾದವನು ವನು ನಮ್ಮಲ್ಲಿ ಒಬ್ಬನಾದರೂ ಇಲ್ಲ.''

ದಲಿತರೇ (Tramps) ರೋಮ್ ನಗರವನ್ನು ಹಿಂದೆ ಕಟ್ಟಿದವರು. ಇಂದಿನ ದಿನ ಹೊಸ ಸಮಾಜ ಕಟ್ಟುವವರೂ ನಾವೇ !

ಹರಕು ಚಿಂದಿಯುಟ್ಟ ಈ ಬಾಳ–ಬಾಹಿರರು, ಕುಡಿತದ ಅಮಲಿನಲ್ಲಿ ವ್ಯಂಗ್ಯವಾಗಿ, ಈ ರೀತಿ ಮಾತನಾಡುತ್ತಿದ್ದುದರಲ್ಲೇ ಒಂದು ಸೋಜಿಗವಿತ್ತು.

ಅಂತೂ ಅವರು ಮಾತನಾಡದಿದ್ದ ವಿಚಾರವಿರಲಿಲ್ಲ ! ರಾಜಕೀಯ, ಯಹೂದ್ಯರು, ಹೆಂಗಸರು .... ಎಲ್ಲಾ ವಿಷಯಗಳ ಮೇಲೂ ಚರ್ಚೆ ನಡೆಯುತ್ತಿತ್ತು. ಎಲ್ಲದರಲ್ಲೂ ಕುವಾಲ್ಡ ಮುಂದು. ಸ್ತ್ರೀಯರ ಹಕ್ಕುಬಾಧ್ಯತೆಗಳ ವಿಚಾರ ಬಂತೆಂದರೆ ಸ್ಕೂಲ್ ಮಾಸ್ಟರ್ ಹೆಂಗಸರ ವಕೀಲನಾಗುತ್ತಿದ್ದ.

ವೃತ್ತಪತ್ರಿಕೆ ಓದುವುದು, ಇಂತಹ ಚರ್ಚೆ ಇವುಗಳ ಜತೆಗೆ ಇಸ್ಪೀಟು ಆಟ ಕೂಡ ಅವರ ಹವ್ಯಾಸಗಳಲ್ಲಿ ಒಂದಾಗಿತ್ತು. ಮಾರ್ಟನಿಯಾಫನನ್ನು ಅವರೆಂದೂ ಆಟಕ್ಕೆ ಸೇರಿಸಿಕೊಳ್ಳುತ್ತಿರಲಿಲ್ಲ. ಕಾರಣವಿಷ್ಟೆ 'ದಗ' ಹಾಕದೆ ಅವನಿಗೆ ಆಡಲು ಬರುತ್ತಲೇ ಇರಲಿಲ್ಲವಂತೆ !

"ಮೋಸ ಮಾಡುವುದು ನನ್ನದೊಂದು ಗುಣ !" ಎನ್ನುತ್ತಿದ್ದ.

''ಹೌದು ಹೌದು. ಹಾಗೆ ಆಗುವುದುಂಟು'' ಎಂದ ಪೂಜಾರಿ ಟರಾಸ್. "ನನಗೂ ಅಂತಹ ಸ್ವಭಾವವಿತ್ತು. ಪ್ರತಿ ಭಾನುವಾರ ನನ್ನ ಹೆಂಡತಿಯನ್ನು ನಾನು ಹೊಡೆಯುತ್ತಿದ್ದೆ. ಇದೇ ಅಭ್ಯಾಸವಾಗಿ ಹಟವಾಗಿ ಬಿಟ್ಟಿತು. ನನ್ನ ಹೆಂಡತಿ ಸತ್ತ ಮೇಲೂ ಈ ದುರಭ್ಯಾಸ ಉಳಿದಿತ್ತು. ಹೇಗೋ ಒಂದೆರಡು ವಾರ ತಡೆದುಕೊಂಡೆ. ಕೈ ಸುಮ್ಮನಿರಬೇಕಲ್ಲ. ಮೂರನೇ ವಾರ, ಮನೆಯ ದಾಸಿಯನ್ನು ಹೊಡೆದುಬಿಟ್ಟೆ. ಆಕೆ ಕೋರ್ಟಿಗೆ ಹೋಗುತ್ತೇನೆಂತ ಹೆದರಿಸಿದಳು. ಕೊನೆಗೆ ವಾರಕ್ಕೆ ಹತ್ತು ರೂಬಲ್ ಕೊಟ್ಟು ಪ್ರತಿ ವಾರವೂ ಹೊಡೆಯುವ ಏರ್ಪಾಡು ಮಾಡಿಕೊಂಡೆ ! ಇದು ನನಗೆ ಇನ್ನೊಂದು ಮದುವೆಯಾಗುವವರೆಗೂ."

''ಇನ್ನೊಂದು ಮದುವೆ ?"

"ಮದುವೆ ಎಂದರೆ ಚರ್ಚಿಗೆ ಹೋಗಿ ಮಾಡಿಕೊಂಡುದಲ್ಲ '' ಹಾಗೆಯೇ ಇಬ್ಬರೂ ಒಪ್ಪಿದೆವು. ಮುಗಿಯಿತು. ನನಗೆ ಐದು ಮಕ್ಕಳಾದರು.

"ಅವರೀಗ ಏನು ಮಾಡುತ್ತಿದ್ದಾರೆ'' ಎಂದು ಕೇಳಿದ ಮಾಸ್ಟರ್.

"ಮೊದಲನೆಯವನು ಈಜಿಗೆ ಹೋಗಿ ಮುಳುಗಿದ. ಖಾಯಿಲೆ ಬಂದು ಇಬ್ಬರು ಸತ್ತರು. ಒಬ್ಬ ಮಗಳು ಒಬ್ಬ ವಿದ್ಯಾರ್ಥಿಯನ್ನು ಮದುವೆಯಾಗಿ, ಅವನೊಡನೆ ಸೈಬೀರಿಯಾಕ್ಕೆ ಹೊರಟು ಹೋದಳು. ಇನ್ನೊಬ್ಬ ಮಗಳು ಪೀಟರ್ಸ್‌ಬರ್ಗ್‌ನಲ್ಲಿ ಸಂಗೀತ ಕಲಿಯಲು ಹೋಗಿ ಅಲ್ಲಿ ಸತ್ತಳು. ಹೀಗೇ...."

ಅವನು ತನ್ನ ಹಿಂದಿನ ನೆನಪನ್ನು ಹೇಳುತ್ತಿದ್ದಾಗ ಸುತ್ತಲ ಜನ ಹೊಟ್ಟೆ ಬಿರಿಯ ನಕ್ಕರು. ಇವನು ತನ್ನ ಮಕ್ಕಳ ವಿಷಯ ಹೇಳಿದಾಗ ಸಿಪ್‌ಸ್ಟಾಫ್ ತನಗಿದ್ದ ಒಬ್ಬಳೇ ಮಗಳನ್ನ ನೆನಸಿಕೊಂಡು "ಅವಳ ಹೆಸರು ಲಿಡ್ಕ. ದುಂಡನೆಯ ಹುಡುಗಿ!" ಎಂದು ನಿಟ್ಟುಸಿರುಬಿಡುತ್ತಿದ್ದ.

ಈ ನಿರ್ಭಾಗ್ಯ ಜನ ತಮ್ಮ ಹಿಂದಿನ ಜೀವನವನ್ನು ಕುರಿತು ಅಷ್ಟೇನು ಹೆಚ್ಚಿಗೆ ಮಾತನಾಡುತ್ತಲೇ ಇರಲಿಲ್ಲ. ಅವರು ಹಿಂದಿನ ದಿನಗಳನ್ನು ನೆನಸಿಕೊಂಡರೂ, ವಿವರವಾಗಲ್ಲ : ಹಿಂದಿನದರ ನೆನಪು, ಮುಂದಿನ ದಿನಕ್ಕೆ ಅವರಲ್ಲಿರಬಹುದಾದ ಆಶೆಯನ್ನು ನೀಗುತ್ತಿದ್ದುದರಿಂದ, ಹಿಂದಿನದನ್ನು ನೆನಸಿಕೊಳ್ಳಲು ಅವರು ಹೆಚ್ಚು ಬಯಸದಿದ್ದುದು ಸಹಜ.

ಮಳೆ ಬಂದ ದಿನಗಳಲ್ಲಿ ಇಲ್ಲವೇ ಮಾಗಿಯ ದಿನಗಳಲ್ಲಿ ಇವರೆಲ್ಲ ವಾವಿಯೋಫ್‌ನ ವೋಡ್ಕಾದ ಅಂಗಡಿಯಲ್ಲಿ ಸೇರುವರು. ಆ ಅಂಗಡಿ ಸುತ್ತಮುತ್ತಲಿನ ಜನರಿಗೆ ಒಂದು ವಿಧದ 'ಕ್ಲಬ್.'

ಶನಿವಾರ ಸಂಜೆ, ಮತ್ತೆ ಭಾನುವಾರದ ದಿನವೆಲ್ಲಾ ವೋಡ್ಕಾ ಅಂಗಡಿ ಆ ಬೀದಿಯ ಜನರಿಂದ ತುಂಬಿರುತ್ತಿತ್ತು. ಈ ನಿರ್ಭಾಗ್ಯರು ಅಲ್ಲಿನ ಜನರಿಗೆ ಬೇಕಾಗಿದವರಾಗಿದ್ದರು. ಬಡತನದ ಬೇಗೆಯಲ್ಲಿ ಬೆಂದ ಆ ಜನರಿಗೆ ಇವರ ನಗೆಯ ಮಾತಿನ ರೀತಿಯಲ್ಲಿ ಸೊಗಸು ಕಾಣುತ್ತಿತ್ತು. ಜತೆಗೆ ಇವರು ಆ ಜನರಿಗೆ ಸಣ್ಣಪುಟ್ಟ ಕಾರ್ಯಗಳಲ್ಲಿ ಸಹಾಯಕರಾಗುತ್ತಿದ್ದರು.

ಇವರನ್ನು ಒಲಿದಿದ್ದ ಆ ಬೀದಿಯ ಜನರಲ್ಲೇ ಎರಡು ಗುಂಪಿತ್ತು. ಒಂದು ಗುಂಪು, ಕುವಾಲ್ಡ ಸ್ಕೂಲು ಮಾಸ್ಟರಿಗಿಂತ ಬುದ್ಧಿಶಕ್ತಿಯಲ್ಲಿ ಹಿರಿಯ ಎಂದು ಅಭಿಪ್ರಾಯಹೊಂದಿತ್ತು. ಇನ್ನೊಂದು ಗುಂಪಿನ ಅಭಿಪ್ರಾಯದಲ್ಲಿ ಸ್ಕೂಲು ಮಾಸ್ಟರ್, ಕುವಾಲ್ಡನಿಗಿಂತ ಎಲ್ಲ ವಿಧದಲ್ಲೂ ಉತ್ತಮ. ಅಂತೂ ಕುವಾಲ್ಡನನ್ನು ಹೊಗಳುತ್ತಿದ್ದವರಲ್ಲಿ ಬಹು ಜನ ಕುಡುಕರು, ಕಳ್ಳರು. ಅವರಿಗೆ ಬಡತನವೆಂದರೆ ಭಯವಿಲ್ಲ, ಜೈಲೆಂದರೆ ಭೀತಿಯಿಲ್ಲ.

ಸ್ಕೂಲು ಮಾಸ್ಟರನನ್ನು ಮೆಚ್ಚಿದ್ದವರಲ್ಲಿ ಬಹು ಜನ ಬಡವರಾದರೂ ಭವಿಷ್ಯದಲ್ಲಿ ಆಶೆ ಹೊಂದಿದ್ದವರು, ಮರ್ಯಾದಸ್ಥರಾಗಿ ಬಾಳಲು ಯತ್ನಿಸುತ್ತಿದ್ದವರು ಇದ್ದರು.

ಸ್ಕೂಲು ಮಾಸ್ಟರ್ ಬೀದಿಯ ಜನರ ಕುಂದುಕೊರತೆಗಳ ಕುರಿತು ಮುನಿಸಿಪಾಲಿಟಿಯ ಅಧಿಕಾರಿಗಳಿಗೆ ಅರ್ಜಿ ಬರೆದು ಇದ್ದದ್ದರಲ್ಲಿ ಕೊಂಚ ಉಪಕಾರವನ್ನು ದೊರಕಿಸುತ್ತಿದ್ದ. ಪತ್ರಿಕೆಗೆ ಲೇಖನಗಳನ್ನು ಬರೆಯುತ್ತಿದ್ದ. ಒಂದು ಸಾರ್ತಿ ವ್ಯಾವಿಲಾಫನ ಅಂಗಡಿಯ ಹಳಸು ತಿಂಡಿಗಳನ್ನು ಕುರಿತು ವೃತ್ತಪತ್ರಿಕೆಯಲ್ಲಿ ಬರೆದು ವ್ಯಾವಿಲಾಫನ ದುರಾಶೆಯ ಬಯಲಿಗೆಳೆದಿದ್ದ. ಇದೆಲ್ಲದರಿಂದ ಸುತ್ತಲಿನ ಜನರಿಗೆ ಅವನನ್ನು ಕಂಡರೆ ಒಂದು ವಿಧದ ವಿಶ್ವಾಸ.

ಕೆಲವು ಸಲ ಮಾಸ್ಟರನು, ನಿತ್ಯ ಜೀವನ ಕುರಿತು ನೀತಿ ಹೇಳುತ್ತಿದ್ದ.

ಒಂದು ದಿನ ಯಶ್ಕ ಟೂರಿನ್ ಎಂಬ ಬಣ್ಣ ಬಳಿಯುವವ, ತನ್ನ ಹೆಂಡತಿಯನ್ನು ಸಾಯಬೀಳ ಹೊಡೆದುದನ್ನು ಸ್ಕೂಲ್ ಮಾಸ್ಟರ್ ಕಂಡಿದ್ದ. ವೋಡ್ಕ ಕುಡಿಯಲು ಅವನು ಅಂಗಡಿಗೆ ಬಂದಾಗ,

"ಯಶ್ಕ, ನಿನ್ನೆ ನಿನ್ನ ಹೆಂಡತಿಯನ್ನು ನೀನೇಕೆ ಹಾಗೆ ಹೊಡೆದೆ."

"ಹೌದು ಅವಳಿಗೆ ಹಾಗೆ ಆಗಬೇಕು" ಎಂದು ನಗು ನಗುತ್ತ ಹೇಳಿದ. ಆಗಲೆ, ಒಂದು ಬಾಟಲ್ ಹೊಟ್ಟೆಗೆ ಹೋಗಿತ್ತು ಅವನಿಗೆ.

ಆಗ ಮಾಸ್ಟರ್ "ನಾನೇನು ತಮಾಷೆಗಲ್ಲ ಹೇಳುತ್ತಿರುವುದು ನೋಡು. ನೀನು ಅವಳಿಗೆ ಹಾಗೆ ಹೊಡೆದೆ. ಅವಳು ಬಸುರಿ. ಮಗು ಸತ್ತುಹೋದರೆ, ಹೆರುವ ದಿನ ಅವಳ ಸ್ಥಿತಿಯೂ ಬಹಳ ಕೆಡಬಹುದು. ಖಾಯಿಲೆಯ ಹೆಂಡತಿಯನ್ನಿಟ್ಟುಕೊಳ್ಳುವುದು ಸುಖದ ಕೆಲಸವಲ್ಲ! ನಿನ್ನ ದುಡ್ಡಿಗೆ ಅದು ಏಟು ಹಾಕುತ್ತೆ. ಅದೂ ಇಲ್ಲದಿದ್ದರೆ ಮಗು ಹುಟ್ಟತೆಂದಿಟ್ಟುಕೋ. ಅದಕ್ಕೆ ಕೈ, ಕಾಲು ಮಡಚಿ ಹುಟ್ಟಿದರೆ ಏನು ಮಾಡುತ್ತಿ! ತಾಯಿಗೊಂದು ಹೊರೆ, ಮುಂದಿನ ಜೀವನದಲ್ಲಿ ನಿನಗೊಂದು ಹೊರೆ. ದುಡಿತದಿಂದ ಸಂಪಾದಿಸಬೇಕಾದ ನಮ್ಮಂತಹ ಜನರಿಗೆ, ಅಂತಹ ಮಗು ಜೀವಿತದಲ್ಲಿ ಭಾರವಾದೀತೇ ಹೊರತು, ಸಹಾಯಕವಾಗಲಾರದು."

ಸುತ್ತಲಿನ ಜನ "ನೀನು ಹೇಳುವ ಮಾತು ಸತ್ಯ" ಎಂದರು.

ಇದನ್ನು ಕೇಳಿ ಯಶ್ಕನಿಗೆ ಮನಸ್ಸಿನಲ್ಲಿ ಒಂದು ವಿಧದ ಗಾಬರಿಯಾಯಿತು. "ಸದ್ಯಕ್ಕೆ ಹಾಗಾಗದಿರಲಿ! ಏನು ಮಾಡೋಣ ಹೇಳು. ಅವಳು ನನ್ನನ್ನು ಸುಮ್ಮನೆ ಪೀಡಿಸುತ್ತಾಳಲ್ಲ!"

"ನೀನು ನಿನ್ನ ಮನಸ್ಸನ್ನೇ ಸರಿಯಾಗಿ ತಿಳಿದುಕೊಂಡಿಲ್ಲ. ನಿನ್ನ ಹೆಂಡತಿಯಲ್ಲ ಇದಕ್ಕೆ ಕಾರಣ - ನೀನೇ! ನಿನ್ನ ಬಾಳಿನ ದುರವಸ್ಥೆ ಬಡತನ, ನಿನ್ನನ್ನು ಹಾಗೆ ಮಾಡುತ್ತದೆ."

"ಹೌದು ನಾನು ಬಡವ. ಒಪ್ಪಬೇಕು" ಎಂದ ಯಶ್ಕ.

"ನಿನ್ನ ಹೆಂಡತಿಯ ದುಸ್ಥಿತಿಯನ್ನು ನೋಡಿ ನೀನು ಸಹಿಸಲಾರೆ. ನಿನ್ನ ಮನಸ್ಸಿಗೆ ಬೇಸರ ಉಂಟಾಗುತ್ತೆ. ಬೇಸರ ನೀಗಿಕೊಳ್ಳಲು ನಿನ್ನ ಸಮೀಪದಲ್ಲಿ ಅವಳಿರುತ್ತಾಳೆ. ನೀನು ಇನ್ಯಾರ ಮೇಲೆ ನಿನ್ನ ಕೋಪ, ಬೇಸರ ತೋರಿಸಲು ಶಕ್ಯ ಹೇಳು? ಹೇಗಾದರೂ ಅವಳು ನಿನ್ನನ್ನೇ ಅವಲಂಬಿಸಬೇಕು. ಇದೇ ನಿನ್ನ ನಡತೆಗೆ ಮುಖ್ಯ ಕಾರಣ ತಿಳಿಯಿತೇ?"

ಸುತ್ತ ನೆರೆದಿದ್ದ ಜನರಿಗೆ ಈ ನೀತಿಬೋಧೆ ಪ್ರೋಡ್ಕದ ಅಂಗಡಿಯ, ಬಡವರ ನೀತಿ ಸಂಪೂರ್ಣ ಮನಸ್ಸಿಗೆ ಹಿಡಿಯಿತು. ಇದನ್ನು ಕೇಳಿದ ಮೋಕಿ ಅನಿಸಿಮಾಫ್ "ಹೌದು, ಹೆಂಡತಿಯೆಂದರೆ ಬಾಳಿನ ಸಹ ಗೆಳತಿ. ಹೇಗೂ, ಜೊತೆಗೆ ಗಂಟುಬಿದ್ದವಳು. ಇಬ್ಬರೂ ಗಾಡಿಯ ಎರಡು ಚಕ್ರದ ಹಾಗೆ ಸಮವಾಗಿ ನಡೆಯಲು ಯತ್ನಿಸಬೇಕು. ಇಲ್ಲದಿದ್ದರೆ ಸಂಸಾರದ ತೇರು ನಡೆಯುವುದೆಂತು? ...."

ಜಾಕಫ್, ಇದನ್ನು ಕೇಳಿ 'ಸಾಕು! ಸಾಕು! ಈ ವೇದಾಂತ ನಿನ್ನ ಹೆಂಡತಿಯನ್ನು ನೀನೇ ಹೊಡೆಯುವುದಿಲ್ಲವೇ? ...." ಹೀಗೇ ಅರ್ಧರಾತ್ರಿಯವರೆಗೂ ಹರಟೆ ಮುಂದುವರಿಯುತ್ತಿತ್ತು.

ಹೊರಗೆ ಕಿಟಕಿಯ ಮೇಲೆ ಬೀಳುತ್ತಿದ್ದ ಮಳೆಯ ಹನಿಗಳ ಶಬ್ದ. 'ಸುಯ್' ಎಂದು ಗಾಳಿ ಬೀಸುತ್ತಿದೆ. ಇದೇ ಮುಂದಿನ ಮಾಗಿಯ ಮುಂಗುರುತು. ಮಾಗಿ! ಮಾಗಿಯೆಂದರೆ ಈ ಜನರಿಗೆ, ಹೊಟ್ಟೆಗಿಲ್ಲದಿರುವ ಕಾಲ. ದುಡಿಮೆಯಿಲ್ಲ, ಹೊಟ್ಟೆಗೂ ಇಲ್ಲ. ಮಾಗಿಯ ತಿಂಗಳಲ್ಲಿ ಬದುಕುವುದಾದರೂ

ಎಂತು ? ಇಂತಹ ಯೋಚನೆಯಲ್ಲಿ ಮುಳುಗಿ, ಅವರು ವಿಪರೀತ ಕುಡಿದು ಒಬ್ಬರೊಡನೆ ಒಬ್ಬರು ಕಾದಾಡುತ್ತಿದ್ದರು. ಮತ್ತೆ ವೋಡ್ಕಾದ ಅಂಗಡಿಯಲ್ಲಿ ಸ್ತಬ್ಧ. ಅಂತಹ ಗಳಿಗೆಯಲ್ಲಿ, ಕುವಾಲ್ಡ ತನ್ನ ವೇದಾಂತ ತೆಗೆದು ಜನರನ್ನು ಸಮಾಧಾನ ಮಾಡಲೆಳಸುತ್ತಿದ್ದ. "ಧೈರ್ಯವಿರಬೇಕರಯ್ಯಾ ! ಜೀವನವೇ ಹಾಗೆ ! ಬಾಳಿಗೆ ವಸಂತ ಬರಬೇಕಾದರೆ, ಶಿಶಿರ ಕಳೆಯಬೇಕು !"

ಆದರೆ ಅವನ ಮಾತಿನಿಂದೇನು ಅಷ್ಟು ಪ್ರಯೋಜನವಾಗುತ್ತಿರಲಿಲ್ಲ. ಬರೀ ವೇದಾಂತ, ಹೊಟ್ಟೆ ತುಂಬಿಸಲಾರದು.

ಪೂಜಾರಿ ಟೆರಾಸ್, ಕತೆ, ಕವಿತೆ ಹೇಳಿ ಜನರ ಗುಂಪನ್ನು ನಗೆಯಲ್ಲಿ ಮುಳುಗಿಸಲು ಯತ್ನಿಸುತ್ತಿದ್ದ. ಅದರಿಂದ ಉಪಯೋಗ ಇತ್ತು. ಒಮ್ಮೆಲೇ ಎಲ್ಲರೂ ಎದ್ದು ಹಾಡಿ ಕುಣಿಯುತ್ತಿದ್ದರು. ನಗೆಯ ಹೊಗೆ, ವೋಡ್ಕದ ಅಂಗಡಿಯನ್ನೆಲ್ಲ ಆರಗಳಿಗೆ ತುಂಬುತ್ತಿತ್ತು, ಆಮೇಲೆ .... ?

ನಿರಾಸೆ ! ಏನೋ ಪಿಸುಗುಟ್ಟಿಕೊಳ್ಳುವರು! ಅವರ ಮನಸ್ಸಿನಲ್ಲಿರುವುದು ಹೆಚ್ಚು ಹೆಚ್ಚು ವೋಡ್ಕಾ ಕುಡಿದು, ಮತ್ತಿನಿಂದ ಮಲಗಿಬಿಡಬೇಕು ! ಹಸಿವಿಗೆ ತಕ್ಕ ಉಪಾಯ ! ಪ್ರಪಂಚದಲ್ಲಿ ಏನೂ ಸ್ಥಿರವಲ್ಲ. ಯಾವುದೂ ಇದ್ದ ಹಾಗೆ ಇರುವುದಿಲ್ಲ !

ಸೆಪ್ಟೆಂಬರ್ ತಿಂಗಳ ಅಂತ್ಯಭಾಗ. ಒಂದು ದಿನ ಕುವಾಲ್ಡ ಎಂದಿನಂತೆ ತನ್ನ "ನಿರ್ಭಾಗ್ಯರ ಗೃಹ"ದ ಮುಂದಿನ ಗಾರೆಯ ಜಗುಲಿಯಲ್ಲಿ ಕುಳಿತಿದ್ದಾನೆ. ವರ್ತಕ ಪೆಟುನಿಕಾಫ್. ವೋಡ್ಕಾ ಅಂಗಡಿಯ ಪಕ್ಕದಲ್ಲಿ ಕಟ್ಟಿಸಿದ್ದ ಹೊಸ ಇಟ್ಟಿಗೆ ಮನೆಯ ಕಡೆಗೆ ಅವನ ದೃಷ್ಟಿ ನೆಟ್ಟಿದೆ. ಕುವಾಲ್ಡ ಯೋಚನೆಯಲ್ಲಿ ಮಗ್ನನಾಗಿದ್ದಾನೆ.

ಆ ಮನೆ ಮೇಣದ ಬತ್ತಿಯ ಕಾರ್ಖಾನೆಗಾಗಿ ರಚಿತವಾಗುತ್ತಿತ್ತು. ರಕ್ತ ವರ್ಣದ ಈ ಮನೆ, ಮುಂದೆ ಜನರ (ಕೂಲಿಗಾರರ) ರಕ್ತ ಹೀರುತ್ತೇನೆಂಬುದನ್ನು ತೋರಗೊಡುತ್ತಿತ್ತು. ವೋಡ್ಕ ಅಂಗಡಿ ಈ ಹೊಸ ಮನೆಯ ಪಕ್ಕಕ್ಕೆ ಒರಗಿ ನಿಂತಿತ್ತು. ವೋಡ್ಕಾ ಅಂಗಡಿಗಳು ಬದುಕಬೇಕಾದರೆ ಇಂತಹ ಕಾರ್ಖಾನೆಗಳ ಅವಲಂಬನದಿಂದಲೇ !

ಈಗ ಕುವಾಲ್ಡನ ಮನಸ್ಸಿನಲ್ಲಿದ್ದ ಯೋಚನೆ, ಈ "ನಿರ್ಭಾಗ್ಯರ ಗೃಹ"

ವನ್ನು ಆ ವರ್ತಕ ಉರುಳಿಸಿ ಬೇರೆ ಮನೆ ಕಟ್ಟುತ್ತಾನೆಂದು ಹಾಗಾದರೆ ತಾನು ಹೊಸ ಜಾಗ ಹುಡುಕಬೇಕಾಗುತ್ತದೆ. ಆದರೆ ಇಷ್ಟು ಸುಲಭ ಬಾಡಿಗೆ ಯಲ್ಲಿ ಅಷ್ಟೊಂದು ಅನುಕೂಲವಿರುವ ಸ್ಥಳ ದೊರೆಯುವುದು ಸುಲಭದ ಮಾತಲ್ಲ. ಅದೂ ಯಾವನೋ ಒಬ್ಬ ವರ್ತಕನ ಮೇಣದ ಬತ್ತಿಯ ಕಾರ್ಖಾನೆ .ಕಟ್ಟುತ್ತಿರುವುದರ ದೆಸೆಯಿಂದ! ಹೇಗೂ ತನ್ನ ಈ ವರ್ತಕ ಶತ್ರುವಿನ "ಆಟ"ವನ್ನು ಮುರಿಯಲು ತನಗೆ ಶಕ್ಯವಾದರೆ ತಾನು ಸುಮ್ಮನಿರುವು ದಿಲ್ಲವೆಂದುಕೊಂಡ ಕುವಾಲ್ಡ.

ನಿನ್ನೆ ವರ್ತಕ ಪೆಟುನಿಕಾಫ್ ಒಬ್ಬ ಇಂಜನೀಯರೊಂದಿಗೆ ತನ್ನ ಮಗನನ್ನು ಕರೆದುಕೊಂಡು ಈ "ನಿರ್ಭಾಗ್ಯರ ಗೃಹ"ದ ಹೊರ ಅಂಗಳಕ್ಕೆ ಬಂದಿದ್ದ. ಸುತ್ತಲಿನ ಸ್ಥಳವನ್ನು ಸರ್ವೆಮಾಡಿ, ಅಲ್ಲಲ್ಲಿ ಕೆಲವು ಗೂಟ ಗಳನ್ನು ಹೊಡೆದು ಹೋದರು. ಅವರು ಹೊರಟು ಹೋದಮೇಲೆ, ಕುವಾಲ್ಡ ತನ್ನ "ಧೂಮಕೇತು" ವನ್ನು ಕರೆದು, ಆ ಗೂಟಗಳೆಲ್ಲವನ್ನೂ ಕಿತ್ತು, ಆಚೆ, ಬಿಸಾಡಿಸಿದ.

ಆ ಗಿಡ್ಡ ವರ್ತಕನ ಚಿತ್ರ, ಸದಾ ಕುವಾಲ್ಡನ ಮನದ ಮುಂದಿರು ತ್ತಿತ್ತು. "ನರಿಯ ಜಾತಿಗೆ ಸೇರಿದ ಈ ಹಾಳು ಜನ!" ಎಂದುಕೊಳ್ಳುತ್ತಿದ್ದ.

ನಿನ್ನೆ ಕುವಾಲ್ಡನೊಡನೆ ಆ ವರ್ತಕ ಮಾತನಾಡಿದಾಗ, ಕೆಲವು ಸಲ್ಲದ ಮಾತುಗಳೂ ಅವನ ಮಾತಿನಿಂದ ಬಂದಿದ್ದವು. ವರ್ತಕ, ಅವನನ್ನು ಕುರಿತು ''ಏನು, ಯಾವಾಗಲೂ ಕುಳಿತಿರುವುದೇನು ನಿನ್ನ ಕೆಲಸ" ಎಂದ.

"ನಿಂದಿನ್ನೇನು ಕೆಲಸ. ಅಲ್ಲಿಂದಿಲ್ಲಿಗೆ ಗಸ್ತು ಹೊಡೆಯುತ್ತಿರುವುದು ತಾನೆ?"

''ಹೌದು ನನ್ನ ಹತ್ತಿರ ಹಣವಿದೆ. ಬೇಕಾದ ಹಾಗೆ ಸುತ್ತುತ್ತಿರುತ್ತೇನೆ. ಹೌದು ಹಣವನ್ನು ಓಡಾಡಿಸುತ್ತಿರಬೇಕು.''

''ಅದಕ್ಕೆ ದುಡ್ಡಿನ ಗುಲಾಮು ನೀನು ಎಂದು ನಾನನ್ನುವುದು. ದುಡ್ಡು ನಿನ್ನ ಗುಲಾಮನಲ್ಲ.''

"ಹೇಗಾದರೇನಂತೆ ಎರಡೂ ಒಂದೇ! ಆದರೆ ದುಡ್ಡೇ ಇಲ್ಲದೇ ಹೋದರೆ!"

"ಹೌದು ಹೌದು, ಪ್ರಾಮಾಣಿಕತೆ ಕಡಮೆಯಾದಷ್ಟೂ ದುಡ್ಡು ಹೆಚ್ಚುತ್ತೆ ಅಲ್ಲವೇ ? ....'' ಎಂದ ಕುವಾಲ್ಡ.

''ಪ್ರಾಮಾಣಿಕತೆಯೂ ಇಲ್ಲ, ದುಡ್ಡೂ ಇಲ್ಲ. ಅಂತಹ ಜನ ಇಲ್ಲ ವೇನು ?" ಎಂದ ವರ್ತಕ.

"ನೀನು ಹಾಗೆ ಇದ್ದೆಯೆಂದು ಕಾಣುತ್ತೆ ತರುಣನಾಗಿದ್ದಾಗ."

"ಆಗ ನಾನೆಷ್ಟು ದುಡಿಯುತ್ತಿದ್ದೆ ಗೊತ್ತೆ ?"

"ಹೌದು, ಇನ್ನೊಬ್ಬರಿಗೆ ದಗ ಹಾಕಲು ಬಹಳ ದುಡಿದಿದ್ದೆ."

"ಮನೆಗೆ ಬಂದವರನ್ನು ಕೂಡಿಸದೆ ತಾನು ಮಾತ್ರ ಕೂತು ಮಾತ ನಾಡುತ್ತಿದ್ದೀಯಲ್ಲ"

"ಕೂತುಕೋ, ನಿನಗೆ ಯಾರು ಬೇಡ ಅಂದವರು" ಎಂದ ಕುವಾಲ್ಡ.

"ಕೂತುಕೊಳ್ಳಲು ಏನೂ ಇಲ್ಲವಲ್ಲಯ್ಯ"

"ನೆಲವಿಲ್ಲವೇ, ಎಂತಹ ಹೊಲಸನ್ನೂ ಒಲ್ಲೆನೆನ್ನುವುದಿಲ್ಲ ನೆಲ !''

"ಶುದ್ಧ ಹಲ್ಕಾ ನೀನು ...." ಎಂದು ವರ್ತಕ ಅಲ್ಲಿಂದ ಎದ್ದು ಹೊರಟು ಹೋದ.

ಅಂತೂ, ತನ್ನನ್ನು ಕಂಡರೆ ಆ ವರ್ತಕನಿಗೆ ಒಂದು ವಿಧದ ಭಯ ವುಂಟಾಗಿದೆಯೆಂದು ಕುವಾಲ್ಡನಿಗೆ ಅನ್ನಿಸಿತು. ಹಾಗಲ್ಲದಿದ್ದರೆ, ಅವನನ್ನು ಎಂದೋ, ಆ ಗೃಹದಿಂದ ಅವನು ಓಡಿಸುತ್ತಿದ್ದ. ಅದರಿಂದ ಅವನಿಗೆ ದೊರಕುತ್ತಿದ್ದ ಬಾಡಿಗೆ ಅಷ್ಟರಲ್ಲೇ ಇತ್ತು – ಕೇವಲ ೫ ರೂಬಲ್‌ಗಳು. ಪೆಟುನಿಕಾಫ್ ಅಲ್ಲಿಂದ ನಿಧಾನವಾಗಿ ಹಿಂತಿರುಗುತ್ತಿದ್ದುದನ್ನು ನೋಡಿ, ಕುವಾಲ್ಡನಿಗೆ ಒಂದು ಬಗೆಯ ಸಂತೋಷ. ಆ ವರ್ತಕ ತನ್ನ ಹೊಸ ಮನೆಯ ಮೇಲೆ ಓಡಾಡುತ್ತಿದ್ದರೆ ''ಅವನು ಅಲ್ಲಿಂದ ಕೆಳಗೆ ಬಿದ್ದರೆ ಎಷ್ಟು ಚೆನ್ನಾಗಿರುತ್ತೆ" ಎನಿಸುತ್ತಿತ್ತು ಕುವಾಲ್ಡನಿಗೆ. ಅವನು ಬಿದ್ದು ಬೆನ್ನು ಮುರಿದು ಕೊಂಡನೆಂಬ ಕಾಲ್ಪನಿಕ ಚಿತ್ರಗಳನ್ನು ಮನಸ್ಸಿನಲ್ಲಿ ಸೃಷ್ಟಿಸಿಕೊಂಡು, ಅವ ನೆಷ್ಟು ಬಾರಿ ಸಂತೋಷಪಟ್ಟಿರಲಿಲ್ಲ !

ಇಂದು, ಎಂದಿನಂತೆಯೇ ಆ ಮನೆ ಕುವಾಲ್ಡನ ಕಣ್ಣುಕುಕ್ಕಿ ಮೆರೆಯು ತ್ತಿದೆ. ಅದರ ಕೆಂಪು ಗೋಡೆಗಳು ತನ್ನನ್ನು ನೋಡಿ ನಗುತ್ತಿದ್ದಂತೆ ಅವನಿಗೆ

ಭಾಸವಾಗುತ್ತಿತ್ತು. ಸೂರ್ಯನ ಕಿರಣ, ಸುತ್ತಣ ಪಾಳುಮನೆಗಳ ಮೇಲೆಲ್ಲ ಹರಡಿತ್ತು.

ತನ್ನ ಕಣ್ಣಿಂದಲೇ ಗೋಡೆಗಳ ಅಂದಾಜು ಅಳತೆ ಹಾಕಿ, "ಸರಿ ಸರಿ" ಎಂದುಕೊಳ್ಳುತ್ತಾ ಸರ್ರನೆ ಅಲ್ಲಿಂದ ಮೇಲೆದ್ದು, ವ್ಯಾವಿಲಾಫನ ಪಕ್ಕದ ಅಂಗಡಿಗೆ ನಡೆದ. ಅಲ್ಲಿ ಗಲ್ಲದ ಹತ್ತಿರ ವ್ಯಾವಿಲಾಫ್, "ಪ್ರಭುಗಳು ಆರೋಗ್ಯವೇ ?" ಎಂದ.

"ಇರಲಿ, ನಿನ್ನ ಮನೆಯ ನಕ್ಷೆ ಇದೆಯೇನಯ್ಯಾ, ನಿನ್ನ ಹತ್ತಿರ" ಎಂದ.

"ಇದೆ." ಇಂದು ವ್ಯಾವಿಲಾಫ್, ಕುವಾಲ್ಡನ ಮುಖದಲ್ಲಿ ಏನೋ ಒಂದು ಹೊಸತನವನ್ನು ಕಂಡ.

ಪಕ್ಕದ ಕುರ್ಚಿಯಲ್ಲಿ ದೊಪ್ಪನೆ ಕುಳಿತು, "ನನಗೆ ಅದನ್ನು ತೋರಿಸು" ಎಂದ.

"ಏತಕ್ಕೆ" ಎಂದ ವ್ಯಾವಿಲಾಫ್.

"ಏತಕ್ಕಾದರೂ ಆಗಲಿ, ಇಲ್ಲಿ ಅದನ್ನ ತಾರಯ್ಯಾ ಅಂದರೆ !"

" .... ಆ ಕಾಗದಗಳೆಲ್ಲಿ ! ಹೋ, ಲಾ ಕೋರ್ಟಿನಲ್ಲೇ ಯಾವಾಗ ಬಿಟ್ಟೆನೋ !"

"ಸಾಕು ನಿನ್ನ ಹುಚ್ಚಾಟ ! ನಿನಗೋಸ್ಕರವೇ ನಾನು ಇಷ್ಟೆಲ್ಲ ಮಾಡುತ್ತಿರುವುದು ಎಂದರೆ !"

ವ್ಯಾವಿಲಾಫನಿಗೂ ಆಶ್ಚರ್ಯ. ಸರ್ರನೆ ಒಳಗೆ ಹೋಗಿ, ಕಾಗದದ ಕಂತೆಯನ್ನು ತಂದು ಅವನ ಕೈಲಿಟ್ಟು, ಆಶ್ಚರ್ಯದಿಂದ ಮಿಕಮಿಕನೆ ನೋಡುತ್ತಾ ನಿಂತುಕೊಂಡ.

ಕುವಾಲ್ಡ ಕಾಗದಗಳನ್ನು ತನ್ನ ಮುಂದೆ ಬಿಚ್ಚಿ ಹರಡಿಕೊಂಡು, ಗಳಿಗೆ ಗಳಿಗೆಗೂ, ಏನೋ ಅರ್ಥಪೂರ್ಣವಾಗಿ ನಿಟ್ಟುಸಿರು ಬಿಡುತ್ತಾ ಇರುವಾಗ ವ್ಯಾವಿಲಾಫನಿಗೆ ಇನ್ನೂ ಕುತೂಹಲ ಜಾಸ್ತಿಯಾಗುತ್ತಿತ್ತು. ಕೊನೆಗೆ ಏನೋ ನಿರ್ಧರಿಸಿದವನಂತೆ ಮೇಲಕ್ಕೆದ್ದು, ಗಲ್ಲದ ಮೇಲೆ ನಕ್ಷೆಗಳನ್ನೆಸೆದು, "ವ್ಯಾವಿ ಸ್ವಲ್ಪ ತಾಳು, ಒಳಗೆ ಈಗಲೇ ಇಟ್ಟು ಬಿಡಬೇಡ ಅದನ್ನು" ಎಂದು ಹೇಳಿ ಹೊರಗೆ ಹೊರಟ.

ವ್ಯಾವಿಲಾಫ್ ನಕ್ಷೆಗಳನ್ನು ಸುತ್ತಿ ತನ್ನ ಮೇಜಿನೊಳಗಿಟ್ಟು, ಹೊರಗೆ ನೋಡಿದಾಗ, ಅಲ್ಲಿ ಕುವಾಲ್ಡ ತನ್ನ ಹೆಜ್ಜೆಯಿಂದ, ವ್ಯಾಪಾರದ ಅಂಗಡಿಯ ವರಾಂಡವನ್ನು ಅಳೆಯುತ್ತಿದ್ದ. ಎರಡು ಮೂರು ಸಾರಿ ಅಳೆದ ಮೇಲೆ ಅವನಿಗೆ ಪೂರ್ಣ ತೃಪ್ತಿಯಾದಂತೆ ಕಂಡು ಬಂತು.

ವ್ಯಾವಿಲಾಫನಿಗೂ ಮೊದಲು ಸಂಶಯ. ಆಮೇಲೆ ಸಂತೋಷ ಮುಖ ದಲ್ಲಿ ಚಿಮ್ಮಿತು.

"ಕುವಾಲ್ಡ ! ಅದು ಸಾಧ್ಯವೇ ?" ಎಂದ.

"ಸಾಧ್ಯವಲ್ಲದೆ ಏನು ? ಒಂದು ಗಜಕ್ಕಿಂತ ಹೆಚ್ಚಿಗೆಯ ಸ್ಥಳ ನಷ್ಟ ವಾಗಿದೆ. ಅದೂ ಉದ್ದದಲ್ಲಿ. ಇನ್ನು ಅಗಲದಲ್ಲಿ .... ?"

''ಮೂವತ್ತೆರಡು ಗಜ'' ಎಂದ ವ್ಯಾವಿಲಾಫ್.

''ಹಾ ! ನನ್ನ ಮನಸ್ಸಿನಲ್ಲಿರುವುದನ್ನು ಕಂಡುಹಿಡಿದು ಬಿಟ್ಟದ್ದಿ !'' ಮಾರನೆಯ ಘಳಿಗೆ ಅವರೀರ್ವರೂ ಎದುರು ಬದುರು ಕುಳಿತು, ಬೀರನ್ನು ಹೀರುತ್ತಾ ಅದೇ ವಿಷಯ ಮಾತನಾಡುತ್ತಿದ್ದರು. ಕುವಾಲ್ಡ,

"ಆದ್ದರಿಂದ ನಿನಗೆ ತಿಳಿದ ಹಾಗೆ ಆ ಕಾರ್ಖಾನೆಯ ಗೋಡೆಯೆಲ್ಲ ನಿನ್ನ ನಿವೇಶದ ಮೇಲಿದೆ. ಆಮೇಲೆ ಕೋರ್ಟಿಗೆ ಹತ್ತುವುದು. ಈಗಿನ ಗೋಡೆ ಒಡೆದು ಬೇರೆಯದನ್ನು ಕಟ್ಟುವುದೇನೂ ಸುಲಭದ ಮಾತಲ್ಲ. ಅದರ ವೆಚ್ಚ ವನ್ನೆಲ್ಲಾ ಹಾಕಿ, .... ಸುಮಾರು ೨೦೦೦ ರೂಬಲ್ ಆಗಬಹುದಲ್ಲವೇ ?"

''ಅವನೆಂದಿಗೂ ಅಷ್ಟು ಕೊಡುವುದಿಲ್ಲ !" ಎಂದ ವ್ಯಾವಿಲಾಫ್.

''ಹು, ನಿನಗೇನು ಗೊತ್ತು. ಅವನೇನು ಗೋಡೆಯನ್ನು ಒಡೆದು ಕಟ್ಟಲು ಆಗುತ್ತದೆಯೋ ! ನಿನ್ನನ್ನು ಪೂಸಿಮಾಡಲು ಎಷ್ಟೋ ಯತ್ನಿಸುತ್ತಾರೆ. ಕೊನೆಗೆ ಹೆದರಿಸಿದರೂ ಹೆದರಿಸುತ್ತಾರೆ. ನೀನು ಮಾತ್ರ ಜಗ್ಗಬೇಡ. ನನ್ನನ್ನು ನಂಬು. ನಿನ್ನ ಬೆನ್ನಿಗೆ ಬೆನ್ನುಕೊಟ್ಟು ನಿಲ್ಲುತ್ತೇವೆ ನಾವು !''

ವ್ಯಾವಿಲಾಫನಿಗೆ ಬಹಳ ಸಂತೋಷವಾಯಿತು. ಮುಖ ಸಂತೋಷ ದಿಂದ ಕೆಂಪೇರಿತು.

ಅದೇ ರಾತ್ರಿ ನಿರ್ಭಾಗ್ಯ ನಿವಾಸಿಗಳೆಲ್ಲರಿಗೂ ಈ ನೂತನ ಸಂಶೋಧ ನೆಯ ವಿಷಯ ತಿಳಿಯಿತು. ಕುವಾಲ್ಡ ಅಂದಿನ 'ನಾಯಕ.' ಈಗ ಆ

ವರ್ತಕನ ಮರ್ಯಾದೆಗೆ ಕುಂದು ಬರುವಂತೆ ಮಾಡಿದವನು ತಮ್ಮಲ್ಲಿಯೇ ಒಬ್ಬ. ಅದೇ ಅವರಿಗೆ ಅತ್ಯಂತ ಸಂತೋಷ ಗಳಿಸಿದುದು.

ಕೆಟ್ಟದು ಮಾಡಬೇಕೆಂಬುದು ಅವರಿಗೆ ಬಂದ ಆಶೆ. ಅವರ ಕೈಗೆ ಅತಿ ಸುಲಭವಾಗಿ ನಿಲುಕುತ್ತಿದ್ದ ಅಸ್ತ್ರ ಅದೊಂದೇ. ಮುಂದಿನ ದಿನದಲ್ಲೆಲ್ಲಾ ಆ ಜನ ಈ ವಿಷಯದಲ್ಲಿ ಹೊಸ ಹೊಸ ಸ್ಥಿತಿ ಉಂಟಾಗುವುದನ್ನು ಆಶಿಸಿ, ಅದಕ್ಕಾಗಿ ಕಾದಿರುತ್ತಿದ್ದರು. ಆಮೇಲೆ ಒಂದು ದಿನವಾದರೂ ಮುಗಿದ ಮನೆಯನ್ನು ನೋಡಲು ವರ್ತಕ ಪೆಟುನಿಕಾಫ್ ಅಲ್ಲಿ ಬರಲಿಲ್ಲ. ಆಗ ಅವರೆಂದುಕೊಂಡರು, 'ಅವನೆಲ್ಲೋ ಊರಿನಲ್ಲಿಲ್ಲ. ಇಲ್ಲದಿದ್ದರೆ ಇಷ್ಟುಹೊತ್ತಿಗೆ ಸಮನ್ಸ್ ಬಂದು ಬಿಡುತ್ತಿತ್ತು' ಎಂದು:

ಅಂತೂ, ಒಂದು ದಿನ ಬೆಳಿಗ್ಗೆ ಪೆಟುನಿಕಾಫ್ ಮತ್ತೆ ಕಾಣಿಸಿಕೊಂಡ. ಒಂದು ಗಾಡಿಯಲ್ಲಿ ಅವನು ಕುಳಿತು ಬಂದ. ಗಾಡಿಯನ್ನು ಅವನ ಮಗನೇ ನಡೆಸುತ್ತಿದ್ದ. ಇಬ್ಬರೂ ಗಾಡಿಯಿಂದಿಳಿದರು. ಕುದುರೆಯನ್ನು ಒಂದು ಪಕ್ಕಕ್ಕೆ ಕಟ್ಟಿ, ಮಗ ಜೇಬಿನಿಂದ ಅಳತೆ ಪಟ್ಟಿಯನ್ನು ತೆಗೆದು ಭೂಮಿಯನ್ನು ಅಳೆಯಲು ಮೊದಲು ಮಾಡಿದ. ತಂದೆಯೂ ಮಗನಿಗೆ ಸಹಾಯ ಮಾಡುತ್ತಿದ್ದ. ಅಳತೆ ಮಾಡುವಾಗ ತಂದೆ ಮಕ್ಕಳು ಹೆಚ್ಚಿಗೆ ಮಾತನಾಡದಿದ್ದರೂ, ಅವರಿಬ್ಬರ ಮುಖದಲ್ಲೂ ಕಾತುರ ಭಾವ ನೆಲೆಗೊಂಡಿತ್ತು. ಕ್ಯಾಪ್ಟನ್ ಕುವಾಲ್ಡ 'ಹಾ' ಎಂದು ನಗುತ್ತಿದ್ದ.

"ಪಾಪ, ತಿಳಿಯದೆಯೇ ಇನ್ನೊಬ್ಬರ ಆಸ್ತಿಯನ್ನು ಕದ್ದುದಕ್ಕೆ ಗಳಿಸುದುದಕ್ಕಿಂತ ಹೆಚ್ಚಿಗೆ ತೆರಬೇಕು ?" ಎಂದ ಕುವಾಲ್ಡ ಏನೋ ಸಹಾನುಭೂತಿ ತೋರಿಸುವವನಂತೆ. ಸುತ್ತ ನಿಂತಿದ್ದ ನಿವಾಸಿಗಳು ಅವನೊಡನೆ ಕಿಸ ಕಿಸ ನಗುತ್ತಿದ್ದರು. ಇದುವರೆಗೂ ಸುಮ್ಮನೆ ಇದನ್ನು ನೋಡುತ್ತಿದ್ದ ಪೆಟುನಿಕಾಫನಿಗೆ ಹೆಚ್ಚುಕಾಲ ತಡೆಯಲಾಗಲಿಲ್ಲ. ಕೊನೆಗೆ "ನೀವು ಹೀಗೇ ಮಾಡಿದರೆ, ಕೋರ್ಟಿನ ಮುಂದೆ ನಿಲ್ಲಿಸಬೇಕಾಗುತ್ತೆ ನಿಮ್ಮನ್ನ" ಎಂದ.

"ಸಾಕ್ಷಿಯೇ ಇಲ್ಲದೆ ಕೋರ್ಟಿಗೆ ಹೇಗಯ್ಯ ಹೋಗುತ್ತೀ. ತಂದೆಗೆ ಮಗ ಸಾಕ್ಷಿಯಾಗಲಾರ, ಮರೆತೀಯೆ" ಎಂದ ಕುವಾಲ್ಡ.

"ನೀನೇನೋ ಈಗ ಶಕ್ತಿವಂತನೆಂದು ತಿಳಿದುಕೊಂಡಿದ್ದಿ. ಒಂದಿಲ್ಲೊಂದು ದಿನ ನಿನಗೆ ಸರಿಯಾದ ಸಾಟಿ ಸಿಕ್ಕುತ್ತಾನೆ".

ಹೀಗೆ ತನ್ನ ತಂದೆ ಕುವಾಲ್ಡನೊಡನೆ ಮಾತನಾಡುತ್ತಿದ್ದರೂ ಮಗ ಮಾತ್ರ ತನ್ನ ಕೆಲಸ, ಗುಣಾಕಾರಗಳಲ್ಲಿ ಮಗ್ನನಾಗಿದ್ದ. ಕೊನೆಗೆ ಆಳತೆಯನ್ನೆಲ್ಲ ಮುಗಿಸಿದ ಮೇಲೆ ಪೆಟುನಿಕಾಫ್ ಗಾಡಿಯನ್ನು ಹತ್ತಿ ಹೊರಟು ಹೋದ. ಇತ್ತ ಅವನ ಮಗ ದಿಟ್ಟಹೆಜ್ಜೆಗಳನ್ನು ಹಾಕುತ್ತಾ ವೋಡ್ಕಾ ಅಂಗಡಿಯೆಡೆಗೆ ನಡೆದ.

"ಒಳ್ಳೆ ತಿಳಿದವನಿರಬೇಕು ಇವನು! ಇದರಿಂದ ಏನಾಗುತ್ತದೆ ನೋಡಿಕೊಳ್ಳೋಣ" ಎಂದುಕೊಂಡ ಕುವಾಲ್ಡ.

"ಇದರಿಂದ ಆಗುವುದೇನು? ಪೆಟುನಿಕಾಫನ ಮಗ ವ್ಯಾವಿಲಾಫನನ್ನು ಸೋಲಿಸಿ ಬಿಡುತ್ತಾನೆ" ಎಂದ ಲಿವಿಂಗ್ಸ್.

"ಏನು ಅದರಿಂದ ನಿನಗೆ ಸಂತೋಷವ್ರೋ?" ಎಂದು ಕೇಳಿದ ಕುವಾಲ್ಡ.

"ಹೌದು ಮನುಷ್ಯನ ಎಣಿಕೆ ಹಾಳಾಗುವುದನ್ನು ನೋಡುವುದು ನನಗೆ ಬಹಳ ಸಂತೋಷ" ಎಂದು ಹೇಳಿದ ಲಿವಿಂಗ್ಸ್.

ಕುವಾಲ್ಡನಿಗೆ ಬಹಳ ಕೋಪ ಬಂದಿತ್ತು. ಹಾಗೇ ಬಾಗಿಲ ಮುಂದೆ ಪದ್ಮಾಸನ ಹಾಕಿ ಕುಳಿತ. ಜತೆಯ ನಿಗರ್ತಿಕರೆಲ್ಲ ಮನೆಯ ಬಾಗಿಲಲ್ಲಿ ನಿಂತು, ವೋಡ್ಕದ ಅಂಗಡಿಯ ಕಡೆಗೇ ನೋಡುತ್ತಿದ್ದರು. ಹೀಗೆ ನಿರೀಕ್ಷಣೆಯಲ್ಲೆ ಒಂದು ಗಂಟೆಯಾಯಿತು. ಕೊನೆಗೆ ವೋಡ್ಕಾ ಅಂಗಡಿಯ ಬಾಗಿಲು ತೆರೆದು, ಅದರಿಂದ ಪೆಟುನಿಕಾಫನ ಮಗ ಹೊರಗೆ ಬಂದ. ಮೊದಲಿನಂತೆಯೇ ಅವನು ಶಾಂತವದನನಾಗಿದ್ದ. ಅವನು ತನ್ನ ಮನೆಯ ಕಡೆಗೆ ನಡೆದ.

ಕುವಾಲ್ಡ, ಅವನು ಮರೆಯಾಗುವವರೆಗೂ ಅವನನ್ನೇ ನೋಡುತ್ತಿದ್ದ. ಆಮೇಲೆ 'ಲೀವಿಂಗ್ಸ'ನ ಕಡೆ ತಿರುಗಿ ನೀನು ನುಡಿದಂತೆಯೇ ಆಯಿತು. ಎಂತಹ ಅಪಶೃತಿಯ ಬಾಯಿ ನಿನ್ನದು. ಆ ಕೇಡಿಗನ ಮುಖಚರ್ಯೆ ನೋಡಿದರೆ, ಅವನು ಗೆದ್ದಂತೆಯೇ ತೋರುತ್ತೆ. ಈ ಯೆಗರ್ ವ್ಯಾವಿಲಾಫ್ ಅವನಿಂದ ಎಷ್ಟು ಪಡೆದನೋ! ಎಲ್ಲ ಒಂದೇ ಜಾತಿಯ ಜನ. ನಾನೆಂತಹ ಮೂರ್ಖನಾದೆನೆಂದು ಯೋಚಿಸುವುದೂ ಕಷ್ಟವೇ! ನೋಡಿದಿರಾ ಗೆಳೆಯರೇ

ಜೀವನವೇ ನಮಗೆ ವಿರೋಧವಾಗಿ ಹೋಗುತ್ತಿದೆ.

ನಿಗರ್ತಿಕ ನಿವಾಸಿಗಳೆಲ್ಲರಿಗೂ ಹಾಗೆಯೇ ಅನಿಸಿತ್ತು. ವ್ಯಾವಿಲಾಫ್, ಪೆಟುನಿಕಾಫರ ನಡುವಿನ ವ್ಯವಹಾರ ತಾವೆಣಿಸಿದುದರಿಂದ ಭಿನ್ನವಾಗಿತ್ತೆಂದು ಅವರಿಗೆ ಅನಿಸಿತು. ''ಇನ್ನು ಇಲ್ಲಿದ್ದೇನು ಪ್ರಯೋಜನ? ನಮಗೆ ಉಳಿದಿರುವುದಾದರೂ ಏನು? ಕೊನೆಯ ಔತಣ. ಅದು ವೋಡ್ಕದ ಅಂಗಡಿಯಲ್ಲಿ ಆಗಿಹೋಗಲಿ. ಇದುವರೆಗೂ ಆ ಅಯೋಗ್ಯನ ಮನೆಯಲ್ಲಿ ಸುಖವಾಗಿದ್ದೆವು ಈಗ ನಮ್ಮನ್ನವನು ಕಳುಹಿಸುವುದರಲ್ಲಿದ್ದಾನೆ. ಇದೇ ನನ್ನ ನೋಟೀಸ್ ನಿಮಗೆ .... ”

ತನ್ನ ನಿವಾಸಿಗಳೊಂದಿಗೆ ನಡೆಯುತ್ತಾ, “ಆ ಕೊನೆಯ ಗಳಿಗೆ ಬರುವವರೆಗೂ ಕಾದಿರೋಣ. ಜೀವನದಲ್ಲಿ ಕಷ್ಟ ಬಂದರೇ, ಮನುಷ್ಯ ಕಾಲಕ್ಕೆ ತಕ್ಕಂತೆ ಹೊಂದಿಕೊಳ್ಳುತ್ತಾನೆ. ಇಂತಹ ಕಷ್ಟಗಳೇ ಬರದಿದ್ದರೆ ಜೀವನಕ್ಕೆಲ್ಲಿ ಸೊಗಸು .... '' ನಾನು ಈ ನಿರ್ಗತಿಕರ ಗೃಹದವನು. ಆದ್ದರಿಂದಲೇ ಕಂಡ ಕಂಡವರ, ಕಂಡ ಕಂಡ ವಸ್ತುವಿನ ಮುಖಕ್ಕೆ ನಾನು ಉಗುಳಬಹುದು. ನನ್ನ ಇಂದಿನ ಜೀವನದ ರೀತಿಯಿಂದ, ನನಗೂ ನನ್ನ ಹಿಂದಿನ ಜೀವನಕ್ಕೂ ಸಂಬಂಧವಿಲ್ಲ. ಗೌರವ, ಮರ್ಯಾದೆ ಮುಂತಾದ ಹೊಟ್ಟೆ ತುಂಬಿದ ಜನ ಆಡುವ ಮಾತುಗಳಿಗೆ ನಾನೇನೂ ಮರ್ಯಾದೆ ಕೊಡಬೇಕಾಗಿಲ್ಲ. ಅಂದಮೇಲೆ ನನ್ನ ರೀತಿ, ನೀತಿ ನನ್ನ ಮರ್ಯಾದೆ ಮಾನಗಳೇ ಬೇರೆ. ಈ ಪೆಟುನಿಕಾಫನಂತಹ ಜನ ನನ್ನನ್ನು ಕಂಡಕೂಡಲೇ ನಡುಗುವಂತಾಗಬೇಕು. ಅಂತಹ ಶಕ್ತಿಯೊಂದು ನನ್ನಲ್ಲಿ ಬೆಳೆಯಬೇಕು.”

“ನೀನು ಎಷ್ಟು ಧೈರ್ಯವಾಗಿ ಮಾತನಾಡುತ್ತೀ!” ಎಂದು ಲೀವಿಂಗ್ಸ್ ಹೇಳಿದ.

“ಹ್ಹ! ನಿನಗೇನು ಗೊತ್ತು ಬೆಪ್ಪೇ! ನಿನಗೇನು ಗೊತ್ತು. ಯೋಚನೆ ಮಾಡುವುದಕ್ಕೆ ಕೂಡ ನಿನಗೆ ಬರದು. ನಾನು ಯೋಚಿಸಿದ್ದೇನೆ, ಪುಸ್ತಕ ಓದಿದ್ದೇನೆ. ನಾನು ಓದಿರುವಂತಹ ಪುಸ್ತಕಗಳ ಒಂದು ಮಾತಾದರೂ ನಿನಗೆ ಅರ್ಥವಾಗಬೇಕಲ್ಲ!”

“ಸರಿ! ಸರಿ! ನೀನೇನೋ ಓದಿದ್ದೆ. ಆದರೆ ನನಗೂ ನಿನಗೂ ಅಂತರ

ಅಷ್ಟೇನೂ ಇಲ್ಲ. 'ಲೀವಿಂಗ್ಸ್'ನ ಜತೆಯಲ್ಲಿ ಅವನು ಮಾತನಾಡಿದಾಗಲೆಲ್ಲ ಹೀಗೇ ಆಗುತ್ತಿತ್ತು.

"ಅಲೆಕ್ಸಿ ಮ್ಯಾಕ್ಸಿಮೋವಿಚ್, ನೀನೆಲ್ಲಿಗೆ ಹೋಗುವೆ?"

ಮುದುಕ, ಕಿರುನಗೆ ನಕ್ಕು, "ನನಗೇನಾಗಬೇಕಾಗಿದೆ. ಒಂದು ಲೋಟ ವೋಡ್ಕ ಸಿಕ್ಕಿದರೆ ಸಾಕು! ನನಗೆ ಇನ್ನೇನಾಗಬೇಕು?"

ಕೊಂಚ ಹೊತ್ತು ನಿಶ್ಶಬ್ದ. ಸಿವ್‌ಸ್ಟಾವ್ ಹೇಳಿದ "ನನಗೆ ಆಶ್ರಯಕ್ಕೇನೂ ಕಡಿಮೆಯಿಲ್ಲ. ಹೆಂಗಸರಿಗೆ ನನ್ನನ್ನು ಕಂಡರೆ ಬಹಳ ಪ್ರೀತಿ. ಎಲ್ಲೋ ಹೇಗೋ ಜಾಗ ಮಾಡುತ್ತೇನೆ."

ಇದು ನಿಜ. ಅವನಿಗೆ ಪರಿಚಯವಿದ್ದವರು ಮೂರು ಜನ ಪಾತರಗಿತ್ತಿಯರು. ಏನಿಲ್ಲವೆಂದರೂ ಮೂರು ನಾಲ್ಕು ದಿನವಾದರೂ ಅವನನ್ನು ಕಾಪಾಡುತ್ತಿದ್ದರು. ಅವರು ಅವನನ್ನೆಂದೂ ಕಷ್ಟಕ್ಕೊಳಗು ಮಾಡಿರಲಿಲ್ಲ. ಅವನನ್ನು ಕಂಡರೆ ಅವರಿಗೆ ಮರುಕ. ಹೆಣ್ಣಿನ ಕೈಯ್ಯಿಂದ ಒಗೆಸಲ್ಪಟ್ಟ ಅವನ ಬಟ್ಟೆ ಬರೆ ಇತರರೆಲ್ಲದಕ್ಕಿಂತ ಸುಂದರವಾಗಿರುತ್ತಿತ್ತು. ಹಾಗೇ ಮನೆಯ ಬಾಗಿಲ ಮುಂದೆ ಕುಳಿತು ಮಾತನಾಡುತ್ತ "ರೀಡ್ಕ ತನ್ನೊಡನಿರಲು ನನ್ನನ್ನು ಎಷ್ಟೋ ಸಾರಿ ಕೇಳಿಕೊಂಡಳು. ಆದರೆ ಈಗಿರುವವರನ್ನು ಬಿಟ್ಟುಹೋಗಲು ನನಗೆ ಮನಸ್ಸಿಲ್ಲ!" ಎಂದು ಜಂಬ ಕೊಚ್ಚಿಕೊಳ್ಳುತ್ತಿದ್ದ.

ಅಲ್ಲಿನವರೆಲ್ಲರಿಗೂ ರೀಡ್ಕ ಗೊತ್ತು. ಅಲ್ಲೇ ಹತ್ತಿರವಲ್ಲೇ, ಗುಡ್ಡದ ಮೇಲೆ ಅವಳಿದ್ದಳು. ಜೈಲಿನಿಂದ ಎರಡು ಶಿಕ್ಷೆ ಅನುಭವಿಸಿ ಆಗತಾನೆ ಅವಳು ಹೊರಗೆ ಬಂದಿದ್ದಳು. ಮೊದಲು ನರ್ಸ್ ಕೆಲಸ ಮಾಡುತ್ತಿದ್ದು, ಈಗ ಈ ವೃತ್ತಿಗೆ ಇಳಿದಿದ್ದಳು. ಹಳ್ಳಿಯ ಹೆಣ್ಣು.

"ನನ್ನನ್ನು ಅವರೇಕೆ ಅಷ್ಟು ಪ್ರೀತಿಸುತ್ತಾರೆ ನಿಮಗೆ ಗೊತ್ತೆ? ನಾನು ಅವರ ಆತ್ಮಕ್ಕೆ ಬೇಕಾದುದೇನೆಂಬುದನ್ನು ಅರಿತಿದ್ದೇನೆ" ಎಂದು ಸಿವ್‌ಸ್ಟ್ಯಾಫ್ ಹೇಳಿದ. ಕುವಾಲ್ಡ ಆಶ್ಚರ್ಯದಿಂದ, "ಆ, ಹಾಗೇನು!"

"ನನ್ನನ್ನು ಕಂಡು ಹೆಂಗಸರು ಮರುಕಪಡುವಂತೆ ಮಾಡುವುದು ಹೇಗೆಂದು ನನಗೆ ಗೊತ್ತು. ಒಂದು ಸಾರಿ, ಹೆಂಗರುಳಿನಲ್ಲಿ ಮರುಕ ಹುಟ್ಟಿಸಿ ತೆಂದರೆ ಸಾಕು. ತಮ್ಮ ಮರುಕದಿಂದಲೇ ನಿಮ್ಮನ್ನು ಬೇಕಾದರೆ ಸಾಯಿಸಿ ಬಿಡುತ್ತಾರೆ!

ಮಾರ್ಟಿನಿಯಾಫ್, "ಕೊಲ್ಲುವವನು ನಾನು! ನಾನ.!!" ಎಂದು ಒಳ್ಳೆ ಎತ್ತಿದ ಸ್ವರದಲ್ಲಿ ಹೇಳಿದ.

"ಯಾರನ್ನಯ್ಯಾ ನೀನು ಕೊಲ್ಲುವುದು" ಎಂದು ಕೇಳಿದ ಲೀವಿಂಗ್ಸ್.

"ಯಾರನ್ನಾದರೂ ಆಗಲಿ - ಪೆಟುನಿಕಾಫ್ - ಯಗೋರ್ಕ - ಯಾರನ್ನಾದರೂ ಆಗಲಿ!''

"ಏಕೆ ?"

"ಏಕೆಂದರೆ ಸೈಬೀರಿಯಾಕ್ಕೆ ಹೋಗಬೇಕೆಂದು ಆಸೆ ನನಗೆ. ಈ ಜೀವನದಿಂದ ನನಗೆ ಬಲು ಬೇಸರವಾಗಿದೆ. ಅಲ್ಲಾದರೆ ಇಷ್ಟ ಬಂದ ಹಾಗೆ ಜೀವನ ನಡಸಬಹುದು."

ಅಲ್ಲಿಂದ ಮುಂದೆ ಪೆಟುನಿಕಾಫನ ವಿಚಾರವಾಗಿ ಯಾರೂ ಹೆಚ್ಚಿಗೆ ಮಾತನಾಡಲೇ ಇಲ್ಲ. ತಾವು ಆ ನಿಗರ್ತಿಕರ ಗೃಹದಿಂದ ಹೊರಗೆ ಹೋಗಬೇಕಾದ ವಿಚಾರವನ್ನು ಕುರಿತು ಯಾರೂ ಮಾತನಾಡಲಿಲ್ಲ. ಹೊರಗೆ ಹೋಗಬೇಕಾದುದು ನಿಶ್ಚಯವೆಂದು ಎಲ್ಲರಿಗೂ ತಿಳಿದಿತ್ತು. ಸುಮ್ಮನೆ ಅದರ ವಿಚಾರ ಮಾತನಾಡಿ ಫಲವೇನು? ಮಳೆಗಾಲ ಆರಂಭವಾಗಿದ್ದರೂ, ಇನ್ನೂ ಅಷ್ಟೊಂದು ಚಳಿ ಮೊದಲಾಗಿರಲಿಲ್ಲ. ಯಾವುದಾದರೂ ಒಂದು ಮನೆಯ ಜಗುಲಿಯ ಮೇಲೆ ಒರಗಬಹುದಾಗಿತ್ತು.

ಹುಲ್ಲಿನ ಮೇಲೆ ಚಕ್ರಾಕಾರವಾಗಿ ಕುಳಿತು ಅವರು ಗೊತ್ತುಗುರಿಯಿಲ್ಲದೆ ಹರಟುತ್ತಿದ್ದರು. ಕೇಳಲು ಯಾರಿಗೂ ಕುತೂಹಲವಿಲ್ಲ. ಆದರೂ ಸಂಭಾಷಣೆ ನಿಲ್ಲದಿರಲೆಂದು ಎಲ್ಲರೂ ಹೇಗೋ ಇತರರ ಮಾತನ್ನು ಕಿವಿಯ ಮೇಲೆ ಹಾಕಿಕೊಳ್ಳುತ್ತಿದ್ದರು. ಒಮ್ಮೆ ಮಾನವರಾಗಿದ್ದ ಈ ಜೀವಜಂತುಗಳ ಒಂದು ದೊಡ್ಡ ಗುಣವೆಂದರೆ, ತಮ್ಮ ಸ್ಥಿತಿಗಿಂತ ತಾವು ಹೆಚ್ಚಿನವರೆಂದು ತೋರಿಸಿಕೊಳ್ಳಲು ಅವರಲ್ಲಿ ಯಾರೂ ಯತ್ನಿಸುತ್ತಿರಲಿಲ್ಲ. ಇತರರು ಯತ್ನಿಸುವಂತೆ ಪ್ರೇರೇಪಿಸುತ್ತಲೂ ಇರಲಿಲ್ಲ.

ಬೇಸಿಗೆಯ ಸೂರ್ಯ ತನ್ನ ಬಿಸಿ ಕಿರಣಗಳನ್ನು ಇವರ ಹರಕು ಬಟ್ಟೆಯ ಮೇಲೆ ಸುರಿಸುತ್ತಿದ್ದ. ಅಂಗಳದ ಮೂಲೆ ಮೂಲೆಯಲ್ಲೂ ಕೆಲಸಕ್ಕೆ ಬಾರದ ಕುರುಚಲು ವಿಶೇಷವಾಗಿ ಬೆಳೆದಿತ್ತು. ಇಂತಹ ದಿಕ್ಕು ಕಾಣದ ಜನ

ರಿಗೆ ದಿಕ್ಕು ಕಾಣದೆ ಬೆಳೆದಿದ್ದ ಆ ಮುಳ್ಳುಗಿಡಗಳೇ ಸುಂದರವಾಗಿ ಕಾಣದೆ ಮತ್ತಾರಿಗೆ ಕಂಡೀತು ?

ವ್ಯಾವಿಲಾಫನ ವೊಡ್ಡದ ಅಂಗಡಿಯಲ್ಲಿ ಈ ದೃಶ್ಯ ನಡೆದಿತ್ತು.

ಪೆಟುನಿಕಾಫನ ಮಗ, ಮೆಲ್ಲಗೆ ಅಂಗಡಿಯೊಳಗೆ ಕಾಲಿಟ್ಟು, ತನ್ನ ಟೋಪಿಯನ್ನು ತಲೆಯಿಂದ ತೆಗೆದು, ಯಜಮಾನನನ್ನು ಕುರಿತು

''ತಾವೇಯೇನು ಯೆಗಾರ್ ವ್ಯಾವಿಲಾಫರು.''

''ಹೌದು ನಾನೇ ''

''ನಿಮ್ಮೊಡನೆ ಕೊಂಚ ವ್ಯವಹಾರ ನಡಸಬೇಕಾಗಿದೆ.''

''ಸಂತೋಷ, ಹಿಂದಿನ ಕೊಠಡಿಗೆ ಹೊರಡೋಣ ಹಾಗಾದರೆ.''

ಮನೆಯ ಹಿಂಭಾಗಕ್ಕೆ ಹೋದರು. ಅಲ್ಲಿ ದುಂಡು ಮೇಜುವೊಂದರ ಮುಂದಿನ ಎದುರು ಬದುರು ಕುರ್ಚಿಯಲ್ಲಿ ಕುಳಿತರು.

ಪೆಟ್ನುನಿಕಾಫ್‌ನ ಮಗ ಆರಂಭಿಸಿದ ''ನಾನು ಯಾರೆಂದು ನಿಮಗೆ ತಿಳಿದಿರಬೇಕು. ನಾನು ಬಂದ ಕೆಲಸವೇನೆಂದೂ ನಿಮಗೆ ತಿಳಿದಿರಬೇಕು !''

''ಹೋ, ಆ ಸಮನ್ಸಿನ ವಿಷಯವಿರಬಹುದೇ ?''

''ಹಾ ! ಅದೇ !'' ಎಂದು ಪೆಟುನಿಕಾಫನ ಮಗ ''ನೀವು ಎಷ್ಟು ನೇರವಾಗಿ ಹೇಳಿಬಿಡುತ್ತೀರಿ ! ''ಬಿಚ್ಚುಹೃದಯ ನಿಮ್ಮದು !''

''ನಾನು ಹಿಂದೆ ಸೈನಿಕನಾಗಿದ್ದವನು ನೋಡಿದಿರಾ ?''

''ಅರ್ಥವಾಯಿತು. ಬಂದ ಕೆಲಸವನ್ನು ಮೊದಲು ಮುಗಿಸೋಣ.''

''ಆಗಲಿ, ಅಭ್ಯಂತರವೇನು ?''

ಪೆಟುನಿಕಾಫ್‌ನ ಮಗ ತನ್ನ ಅಭಿಪ್ರಾಯವನ್ನು ಹೇಳಿದ ''ನೀವು ಕಳುಹಿಸಿರುವ ತಗಾದೆ ನ್ಯಾಯವಾದದ್ದೇ ನೋಡಿ. ನ್ಯಾಯ ನಿಮ್ಮ ಕಡೆಗಿದೆ ಯೆಂಬುದನ್ನು ಮೊದಲೇ ನಾನು ಒಪ್ಪಿಕೊಳ್ಳಬೇಕು.''

''ಬಹಳ ಸಂತೋಷ.''

''ನಾವು ಮುಂದೆ ಅಕ್ಕಪಕ್ಕದವರಾಗುವವರು. ಇದೇಕೆ ನಮ್ಮೀರ್ವರ ಮುಂದಿನ ಗೆಳೆತನ ಕೋರ್ಟಿನ ಬಾಗಿಲಿನಲ್ಲಿ ಮೊದಲಾಗುವುದು ಸಮಂಜಸವಲ್ಲ ಅಲ್ಲವೇ ?''

ವ್ಯಾವಿಲಾಫ್ ತೋಳು ಕುಣಿಸಿದ. ಒಂದು ಮಾತನ್ನೂ ಆಡಲಿಲ್ಲ: "ನೀವು ನಮ್ಮ ಹತ್ತಿರ ಬಂದಿದ್ದರೆ ನಾವೇ ಪರಸ್ಪರ ಎಲ್ಲವನ್ನೂ ತೀರ್ಮಾನಿಸಿ ಬಿಡಬಹುದಾಗಿತ್ತು. ನಿಮಗೆ ಹೇಗನ್ನಿಸುತ್ತೆ?"

"ನಿಜ. ಅದೇನೋ ಚೆನ್ನಾಗಿರುತ್ತಿತ್ತು. ಆದರೆ, ಸ್ವೇಚ್ಛೆಯಿಂದ ನಾನು ಈ ರೀತಿ ನಡೆಯಲಿಲ್ಲವೆಂಬುದು ನಿಮಗೆ ಗೊತ್ತಿಲ್ಲವೆಂದು ಕಾಣುತ್ತೆ. ಕೊನೆಗೆ ನೀವು ಹೇಳಿದ ಹಾಗೇ ನನಗನ್ನಿಸಿತು. ಆದರೆ ಕಾಲ ಮಿಂಚಿ ಹೋಗಿತ್ತು."

"ಹೋ, ನೋಡಿದಿರಾ? ಯಾರೋ ಲಾಯರ ಕೆಲಸ ಇರಬೇಕು ಇದು, ಅಲ್ಲವೇ? ಹೋಗಲಿ, ಈಗಲಾದರೂ ಕೋರ್ಟಿನ ಸಹಾಯವಿಲ್ಲದೆ ನಮ್ಮ ನಮ್ಮಲ್ಲಿ ರಾಜಿ ಮಾಡಿಕೊಂಡರಾಗುವುದಿಲ್ಲವೇ?"

"ನನ್ನ ಇಷ್ಟವೂ ಅದೇ." ಎಂದ ವ್ಯಾವಿಲಾಫ್.

"ಅಕ್ಕಪಕ್ಕದ ಜನ ಅಕ್ಕರೆಯಿಂದಿರಬೇಕು" ಎಂದು ಹೇಳಿ ಪೆಟುನಿಕಾಫನ ಮಗ, . . . . "ಅಷ್ಟು ಮಾತ್ರವಲ್ಲ. ನಮ್ಮ ಜತೆಗೆ ವಿಶ್ವಾಸದಿಂದಿರುವುದರಿಂದ ನಿಮಗೂ ಲಾಭವಿದೆ. ಕಾರಣ, ಏನಿಲ್ಲವೆಂದರೂ ನಮ್ಮ ಕಾರ್ಖಾನೆಯಲ್ಲಿ ೧೫೦ ಕೆಲಸಗಾರರಿರುತ್ತಾರೆ. ಆಮೇಲೆ ಅದು ಹೆಚ್ಚಿದರೂ ಹೆಚ್ಚಬಹುದು. ಈ ೧೫೦ ಜನದಲ್ಲಿ ೧೦೦ ಜನವಾದರೂ ಸಂಬಳದ ದಿನ ವೋಡ್ಕ ಕುಡಿದರೆ ನಿಮಗೆಷ್ಟು ಲಾಭ ನೋಡಿಕೊಳ್ಳಿ. ನಿಮ್ಮ ನೆರೆಯವರಿಂದ ನಿಮಗೆಷ್ಟು ಉಪಕಾರ ನೋಡಿದಿರಾ?"

"ಅದು ನಿಜ, ನನಗೂ ಗೊತ್ತು" ಎಂದು ವ್ಯಾವಿಲಾಫ್ ಹೇಳಿ, "ಹಾಗಾದರೆ ನಮ್ಮ ನಮ್ಮಲ್ಲೇ ಒಡಂಬಡಿಕೆಗೆ ಬಂದು ಬಿಡೋಣ."

"ನೀವು ಇಷ್ಟು ದೊಡ್ಡ ಮನಸ್ಸು ಮಾಡಿದ್ದು ಸಂತೋಷ. ಹಾಗಾದರೆ ನಮ್ಮ ತಂದೆಯ ಮೇಲೆ ಈ ವ್ಯವಹಾರ ನಡೆಸುವುದಿಲ್ಲವೆಂಬ ಅರ್ಥ ಬರುವ ಪತ್ರ ಬರೆಸಿದ್ದೇನೆ. ಈಗ ನೀವು ರುಜು ಹಾಕಬಹುದಲ್ಲಾ?"

"ತಾಳಿ ಕೊಂಚ, ಹೇಗೆ ರುಜು ಹಾಕುವುದು ಕೊಂಚ ಹೇಳಿ ನಿಧಾನವಾಗಿ." ರುಜು ಹಾಕುವ ಕೆಲಸವೆಂದರೆ ವ್ಯಾವಿಲಾಫನಿಗೆ ಕೊಂಚ ಗಾಬರಿ.

"ಅಂದರೆ - ಇಲ್ಲಿ ನಿಮ್ಮ ರುಜುಹಾಕಿ ಕೆಳಗೆ ನಿಮ್ಮ ತಂದೆಯವರ ಹೆಸರು ಬರೆದರಾಯಿತು" ಎಂದು ಹೇಳಿ ಪೆಟುನಿಕಾಫನ ಮಗ, ರುಜು

ಗಾಗಿ ಬಿಟ್ಟಿದ್ದ ಸ್ಥಳದ ಕಡೆ ಬೆಟ್ಟು ತೋರಿಸಿದ. ಅದಕ್ಕೆ ವ್ಯಾವಿಲಾಫ್ "ಸರಿ! ಅದು ನನಗೆ ಗೊತ್ತು. ಆದರೆ ನನ್ನ ಜಾಗವನ್ನು ಆಕ್ರಮಿಸಿದ್ದಕ್ಕೆ ನನಗೇನು ಕೊಡುತ್ತೀರಿ?"

"ಆ ಭೂಮಿಯಿಂದ ನಿಮಗೇನೂ ಉಪಯೋಗವಿರಲಿಲ್ಲವಲ್ಲ"

"ಆದರೇನು? ಅದು ನನ್ನದಲ್ಲವೇ?"

"ಅಂದರೆ ನಿಮಗೆಷ್ಟು ಕೊಡಬೇಕು?"

"ಆ ತಗಾದೆಯಲ್ಲೇ ಬರೆದಿದ್ದೇವಲ್ಲಾ!"

"ಹಾಗಾದರೆ ಆರು ನೂರೋ! ಹ್ಹ! ಹ್ಹ! ಹ್ಹ!"

ಪೆಟುನಿಕಾಫನ ಮಗ ನಕ್ಕ.

"ಹೌದು, ನನಗೆ ಹಕ್ಕಿದೆ. ನಾನು ಎರಡು ಸಾವಿರ ಕೇಳಬಹುದಾಗಿತ್ತು, ಈ ಗೋಡೆಯನ್ನು ನೀವು ಕೆಡವಬೇಕೆಂದು ಬೇಕಾದರೂ ನಾನೂ ಕೇಳಬಹುದು. ನಾನು ಕೇಳುವ ಅಷ್ಟು ಸ್ವಲ್ಪ ಹಣವನ್ನು ಕೊಡಲು ಒಪ್ಪದಿದ್ದರೆ, ಆ ಗೋಡೆಯನ್ನು ಕೆಡವಿಸಿ ಬಿಡಿ."

"ಸರಿ! ಗೋಡೆ ಒಡೆಸಲೇ ಬೇಕೋ! ಒಡಿಸ್ತಾರೆ – ಆಮೇಲೆ ಈಗಲ್ಲ. ಇನ್ನೆರಡು ಮೂರು ವರುಷದ ಮೇಲೆ. ನೀವು ಕೋರ್ಟಿಗೆ ಹಣ ತೆತ್ತು ತೆತ್ತು ಬೇಸ್ತು ಬಿದ್ದ ಮೇಲೆ! ಅಷ್ಟರಲ್ಲೇ ನಾವೂ ಒಂದು ವೋಡ್ಕಾ ಅಂಗಡಿ ಇಲ್ಲೇ ತೆಗೆಯುತ್ತೇವೆ. ಆಗ ನೀವು ಎಲ್ಲಿರುತ್ತೀರೋ! ಈಗಲೇ ನಾವದನ್ನು ಆರಂಭ ಮಾಡಬಹುದು. ಆದರೂ ಇನ್ನೊಬ್ಬರ ಹೊಟ್ಟೆಯ ಮೇಲೇಕೆ ಹೊಡೆಯೋಣ ಅಂತ ಅಷ್ಟೆ. ನೀವೂ ನಾವೂ ಪರಸ್ಪರ ಹೊಂದುಕೊಂಡಿದ್ದರೆ ನಿಮಗೇ ಇನ್ನೂ ಅನುಕೂಲ.

ಈಗ ವ್ಯಾವಿಲಾಫ್ ಹೆದರಿದ. ತನ್ನ ಜೀವನ, ಕಾಸಿನ ಕಿಲುಬನ್ನೂ ಬಿಡದ ಈ ವರ್ತಕನ ಕೈಲಿದೆ ಎಂಬುದನ್ನು ಅರಿತುಕೊಂಡ. ತನ್ನ ಕೋಪವನ್ನೆಲ್ಲ ಈಗ ಕುವಾಲ್ಡನ ಮೇಲೆ ತಿರುಗಿಸಿದ.

"ಆ ಕುಡುಕ ಹಂದಿ ಇಷ್ಟಕ್ಕೆಲ್ಲಾ ಕಾರಣ ...."

"ಈ ಕೇಸನ್ನು ಹಾಕಿದ ಲಾಯರನ್ನು ಕುರಿತೇನು ನೀವು ಮಾತನಾಡುತ್ತಿರುವುದು" ಎಂದು ಪೆಟುನಿಕಾಫನ ಮಗ ಕೇಳಿದ.

"ನಾನು ಇಷ್ಟಾದರೂ ದಯೆ ತೋರಿಸದಿದ್ದರೆ ನಿಮ್ಮ ಗತಿ ಏನಾಗುತ್ತಿತ್ತೋ! ಪಾಪ!...." ಆಗ ವ್ಯಾವಿಲಾಫ್.

"ಅವರಿಬ್ಬರೂ ನಿಮ್ಮ ಮನೆಯಲ್ಲೇ ವಾಸಿಸುತ್ತಿರುವವರು! ನೀವು ಆ ಹಾಳಾದವರನ್ನು ಅತ್ತ ತೊಲಗಿಸಬಾರದೆ? ಲುಚ್ಚಾಗಳು! ಬೀದಿಯಲ್ಲಿ ಒಬ್ಬರ ಮೇಲೊಬ್ಬರನ್ನು ಎತ್ತಿ ಕಟ್ಟುತ್ತಾರೆ. ಇಂತಹ ಕಳ್ಳರ ವಿಷಯದಲ್ಲಿ ಜಾಗರೂಕತೆಯಿಂದಿರಬೇಕು!"

"ಅವನು ಯಾರು, ಪತ್ರಿಕೆಗೆ ಬರೆಯುವವನೋ?"

"ಅವನೇ. ಆವನೊಬ್ಬ ಸ್ಕೂಲು ಮಾಸ್ತರಾಗಿದ್ದ - ಅಲ್ಲಿಂದ ಒದ್ದು ಓಡಿಸಿದರು. ಇದ್ದುದನ್ನೆಲ್ಲ ಕುಡಿದು ಕಳೆದ."

"ಹಾಗಾದರೆ ಅವನೇ ಇರಬೇಕು. ಈ ಮನೆಯನ್ನು ರೂಲ್ಸಿನ ವಿಧಿಯಂತೆ ಕಟ್ಟಲಿಲ್ಲವೆಂದು ಪೇಪರಿನಲ್ಲಿ ಬರೆದವನು!"

"ಹು! ಅವನೆ! ತಾನು ಬರೆದದ್ದನ್ನು ಇಲ್ಲಿ ತಂದು ಓದಿದ."

"ಹೋಗಲಿ ಒಡಂಬಡಿಕೆಯ ವಿಚಾರ ಏನು?"

"ಓ! ಅದೇನೂ ನನ್ನ ಕೈಲಿಲ್ಲ. ಆರು ನೂರಕ್ಕಿಂತ ಕಡಿಮೆಯಾದರೆ ಆ ಹಾಳಾದವರು ನನ್ನ ಮೇಲೇನಾದರೂ ಪೇಪರಿನಲ್ಲಿ ಬರೆಸಿ, ಜುಲ್ಮಾನೆ ಹಾಕಿಸುತ್ತಾರೆ. ಕಳ್ಳರು! ಪೋಲೀಸಿನವರೆಂದರೆ ಅವರಿಗೆ ಕೊಂಚವೂ ಭಯವಿಲ್ಲ. ಜೈಲಿಗೆ ಕಳುಹಿಸಿದರೆ ಸುಖವೆನ್ನುತ್ತಾರೆ! ಬಿಟ್ಟಿ ಊಟ ಬಟ್ಟೆ."

"ಅವರನ್ನು ನನ್ನ ಕೈಗೆ ಬಿಡಿ. ನೀವೂ ನಾವೂ ಸರಿಯಾದರೆ ಸಾಕು. ನಾನು ಅವರಿಗೆ ಸರಿಯಾಗಿ ಮಾಡುತ್ತೇನೆ!"

ಹಾಗೂ ಹೀಗೂ ಮಾತುಕತೆ ನಡೆದು, ವ್ಯವಹಾರ ನೂರು ರೂಬಲಿಗೆ ನಿಂತಿತು. ಅದರ ಮೇಲೆ ಒಂದು ಕಾಸನ್ನೂ ತಾನು ಕೊಡುವುದಿಲ್ಲವೆಂಬುದಾಗಿ ಪೆಟುನಿಕಾಫನ ಮಗ ಹೇಳಿದ. "ಆರು ನೂರು ಕೊಟ್ಟೆನೆಂದು ಅವರಿಗೆ ಹೇಳಿ. ಅವರನ್ನು ಓಡಿಸುವ ಕೆಲಸ ನನಗೆ ಬಿಡಿ" ಎಂದು ಹೇಳಿ ಅವನು ಅಲ್ಲಿಂದ ಹೊರಟೇ ಹೋದ.

ಅಂದಿನ ಸಂಜೆ ಕುವಾಲ್ಡ ವೋಡ್ಕದ ಅಂಗಡಿಗೆ ಬಂದ. "ವ್ಯಾವಿಲಾಫ್, ಏನು ಮಾಡಿದೆ?" ಎಂದ.

''ನಾನೂರಕ್ಕೆ ನಿಂತಿತು !''

''ಸುಳ್ಳು ಹೆಚ್ಚು ಬಂದಿದೆ ನಿನಗೆ. ಹೋಗಲಿ, ಇದನ್ನು ನಿನಗೆ ಗಿಟ್ಟಿಸಿದಕ್ಕೆ ಶೇಕಡ ಇಪ್ಪತ್ತೈದು ನನಗೆ, ಹತ್ತು ಭಾಗ ಮಾಸ್ಟರಿಗೆ-ಪೇಪರಿನಲ್ಲಿ ಬರೆದದ್ದಕ್ಕೆ, ಈಗಲೇ ಮಡಗು. ಎಂಟು ಗಂಟೆಯ ಹೊತ್ತಿಗೆ ವೋಡ್ಕ ಅಂಗಡಿಯಲ್ಲಿ ಔತಣಕ್ಕೆ ಸಿದ್ಧವಾಗಲಿ.''

ವ್ಯಾವಿಲಾಫನ ಕಣ್ಣು ಕೆಂಪೇರಿತು. ''ಒಂದು ಕಾಸನ್ನೂ ಕೊಡುವುದಿಲ್ಲ ! ಏಕೆ ಕೊಡಬೇಕು ! ಈಗೇನು ನಾನು ನಿನಗೆ ಹೆದರಬೇಕಾಗಿಲ್ಲ ತಿಳಿಯಿತೇ ?'' ಕುವಾಲ್ಡ, ಗಡಿಯಾರದ ಕಡೆಗೆ ನೋಡಿದ. ''ಏ ವ್ಯಾವಿಲಾಫ್, ನಿನಗೆ ಹತ್ತು ನಿಮಿಷ ಕೊಡುತ್ತೇನೆ. ಯೋಚಿಸು. ನನ್ನ ಮುಂದೆ ನಿನ್ನ ಬಾಲ ಬಿಚ್ಚಬೇಡ. ನಾನು ಕೇಳಿದಷ್ಟು ಕೊಟ್ಟುಬಿಡು, ಇಲ್ಲದಿದ್ದರೆ .... ಆ ಕಳ್ಳತನದ ವಿಚಾರವನ್ನು ಪೇಪರಿನಲ್ಲಿ ಓದಿದ್ದೀ ತಾನೆ ? ಜೋಕೆ.''

ವ್ಯಾವಿಲಾಫನಿಗೆ ಮತ್ತೂ ಗಾಬರಿ ಆಯಿತು. ''ಕುವಾಲ್ಡ, ನನ್ನ ಮೇಲೇಕಿಷ್ಟು ನಿರ್ದಯ ನಿನಗೆ.''

''ಅದೆಲ್ಲ ಸರಿ. ಒಪ್ಪಿದೆಯೋ ಇಲ್ಲವೋ !''

''ಇಲ್ಲ. ನಿನ್ನ ಮುಂದೆ ಸುಳ್ಳು ಹೇಳಿದೆ. ನನಗೆ ಬಂದದ್ದು ನೂರು ರೂಬಲ್.''

''ಸರಿ ಸರಿ, ನೀನೇನು ಸುಳ್ಳು ಹೇಳುವೆಯೋ ನಿಜ ಹೇಳುವೆಯೋ ನನಗೆ ಅರವತ್ತೈದು ರೂಬಲ್ ಇಟ್ಟು ಬಿಡು.''

ವ್ಯಾವಿಲಾಫ್ ಒಪ್ಪಿದ ! ''ಆಗಲಿ ಕೊಡುತ್ತೇನೆ. ಆದರೆ ದೇವರು ಈ ಅನ್ಯಾಯ ಕಂಡು ಸುಮ್ಮನಿರುವುದಿಲ್ಲ ! ನಿನಗೆ ತಕ್ಕ ಶಾಸ್ತಿಯಾಗುತ್ತೆ !''

''ನನಗೇನು ಹೊಸದಾಗಿ ದೇವರಿಂದ ಶಾಸ್ತಿಯಾಗಬೇಕಾಗಿಲ್ಲ. ಹೆಚ್ಚು ಹರಟಿದರೆ ಹಿಸುಕಿ ಹಾಕೇನು ! ಹುಷಾರ್ ! ಎಂದು ಹೇಳಿ ಸರಸರನೆ ಅಲ್ಲಿಂದ ಮರೆಯಾದ. ಅವನು ಹೊರಟು ಹೋದ ಮೇಲೆ, ವ್ಯಾವಿಲಾಫ್ ಒಂದು ಕುಹಕದ ನಗೆ ನಕ್ಕ.

* * * *

ಆಚೆಯ ಹೊಲಕ್ಕೆ ಹೋಗಿ ಪ್ರಕೃತಿಯ ಬೆಡಗಿನ ನಡುವೆ, ಬಾನಿನ ಅಡಿಯಲ್ಲಿ ವೋಡ್ಕ ಸಮಾರಾಧನೆ ನಡೆಸಬೇಕೆಂದು ಟರಾಸನ ಅಭಿಪ್ರಾಯ.

ಕುವಾಲ್ಡ ಮತ್ತಿತರರು ಇವನ ಪ್ರಕೃತಿಯ ಗೀಳನ್ನು ಹಳಿದು ತಮ್ಮ ಅಂಗಳದಲ್ಲಿಯೇ ಅದು ಆಗಲೆಂದು ನಿರ್ಧರಿಸಿದರು. - "ನಾವೀಗ ಹದಿಮೂರು ಜನ, ಸ್ಕೂಲು ಮಾಸ್ಟರು ಇಲ್ಲ. ಒಟ್ಟು ಇಪ್ಪತ್ತು ಅಂದುಕೊಳ್ಳಿ."

ಯಾವುದೋ ಹರಕು ಬಟ್ಟೆಯನ್ನು ನೆಲದ ಮೇಲೆ ಹಾಸಿ, ದುಂಡಗೆ ಕುಳಿತು ಅಂದಿನ ಫಲಾಹಾರವನ್ನು ಹರಡಿದರು. ಸೂರ್ಯನ ಕೊನೆಯ ಕಿರಣಗಳು ಆ ಹಳೆಯ ಮುರುಕು ಮನೆಯ ಮೇಲ್ಛಾವಣಿಯ ಮೇಲೆ ಹರಡಿತ್ತು. ಅಂದಿನ ಭಕ್ಷ್ಯಗಳನ್ನು ಮುಗಿಸಲು ಅವರಿಗೇನೂ ಹೊತ್ತಾಗಲಿಲ್ಲ.

ಕುವಾಲ್ಡ ನಡುವೆ ಬಾಯಿಹಾಕಿ "ಮೂರು ದಿನದಿಂದ ಸ್ಕೂಲು ಮಾಸ್ಟರನ್ನೆಲ್ಲೋ ಕಾಣೆ. ಅವನೆಲ್ಲಿ ಹೋದ ಯಾರಿಗಾದರೂ ಗೊತ್ತೆ."

"ಯಾರಿಗೂ ಗೊತ್ತಿಲ್ಲ – ಹೋಗಲಿ ಬಿಡಿ ! ಕುವಾಲ್ಡ ನಮ್ಮನ್ನೆಂದಿಗೂ ಕೈಬಿಟ್ಟವನಲ್ಲ ! ಅವನ ಹೆಸರು ಹೇಳಿ ಮೊದಲನೇ ಸುತ್ತು ಕುಡಿಯೋಣ !"

ಎರಡು ಮೂರು ಸಾರ್ತಿ ವೋಡ್ಕ ಇಳಿದ ಮೇಲೆ ಎಲ್ಲರಿಗೂ ಚೇತನ ಬಂದಂತಾಯಿತು. ಅರ್ಧ ಟರಾಸು ಯಾರಾದರೂ ಕತೆ ಹೇಳಿರೆಂದ. ಆದರೆ ಕತೆ ಹೇಳುವ ಮನುಷ್ಯ ಪೂಜಾರಿ ಟರಾಸ್, ಹೆಂಗಸರಲ್ಲಿ ದಪ್ಪಗಿರುವವರಿಗೂ ತೆಳ್ಳಗಿರುವವರಿಗೂ ಇರುವ ವ್ಯತ್ಯಾಸವನ್ನು ಕುರಿತು ಹರಟುತ್ತಿದ್ದ. "ಧೂಮಕೇತು" ಅವನ ಮಾತಿಗೆ ತನ್ನ ಶಹಭಾಸ್‌ಗಿರಿ ಕೊಡುತ್ತಿದ್ದ. "ಲೀವಿಂಗ್ಸ್" ಟ್ಯಾಪನನ್ನು ಹಿಂಸಿಸುತ್ತಿದ್ದ. ನಿನ್ನೆ ದುಡ್ಡೆಲ್ಲಿದೆ ನನಗೆ ಗೊತ್ತು. ''ಅದನ್ನೂ ಹೊತ್ತು ಬಿಡುತ್ತೇನೆ."

"ಆಗಲಿ ನಿನಗೆ ಸಿಕ್ಕಿದರೆ ನೀ ತೆಗೆದುಕೋ !"

ಕ್ಯಾಪ್ಟನ್ ಕುವಾಲ್ಡನಿಗೆ ಇವರ ಸಹವಾಸ ಬೇಡವಾಗಿತ್ತು. ತನ್ನ ವೇದಾಂತವನ್ನು ಕೇಳಿ ಅರ್ಥಮಾಡಿಕೊಳ್ಳುವ ಜನರಾರೂ ಇವರಲ್ಲಿ ಇಲ್ಲವೆಂದು ಅವನ ವ್ಯಥೆ. "ಸ್ಕೂಲು ಮಾಸ್ಟರೆಲ್ಲಿ" ಎಂದು ಮತ್ತೆ ಕೇಳಿದ.

ಮಾರ್‌ಟನಿಯಾಫ್ : ''ಬರುತ್ತಾನೆ" ಅಂದ. ಹರಟೆ ಹೊಡೆಯುತ್ತಾ ಕಾಲ ನೂಕಿದರು.

ಕುವಾಲ್ಡ ಹೇಳಿದ ''ಕದ್ದ ದುಡ್ಡು ಸಿಕ್ಕಿದರೆ, ಅಮೆರಿಕದ ಪಂಪಾಸ್‌ಗೆ ಹೋಗಿ, ದುಡ್ಡು ಮಾಡಿಕೊಂಡು ಅಮೆರಿಕದ ಅಧ್ಯಕ್ಷನಾಗಿ, ಒಂದು ದಂಡು ಕಟ್ಟಿಕೊಂಡು, ಯುರೋಪಿನ ಮೇಲೆ ಬಿದ್ದು, ಇಲ್ಲಿಯವರನ್ನು ತಮ್ಮವರ

ಮೇಲೆ ಎತ್ತಿ ಕಟ್ಟಿ, ಒಂದು ರಾಜ್ಯ ಕಟ್ಟುತ್ತೇನೆ" ಎಂದ.

ಹಾಗೆಯೇ ಹರಟೆ ಹೊಡೆಯುತ್ತಾ ಎಲ್ಲರೂ ನೆಲದ ಮೇಲೆ ಒರಗಿದರು. ಅವರಲ್ಲಿ ಕೆಲವರು "ಬ್ಯಾಬಿಲೋನ್ ಜಲದಲ್ಲಿ" ಎಂಬ ಹಾಡು ಹಾಡುತ್ತಿದ್ದರು. ಮಧ್ಯೆ ಹಾಡಿನವರ ಮುಖ್ಯಸ್ಥ, ''ನಿಲ್ಲಿಸಿರೋ, ಯಾರೋ ಗಾಡಿಯಲ್ಲಿ ಬರುತ್ತಿರುವ ಹಾಗಿದೆ'' ಎಂದ. ಕ್ಯಾಪ್ಟನ್ ಕುವಾಲ್ಡ ಎದ್ದು ಕುಳಿತ.

''ಇದೇನೋ, ನಿರ್ಭಾಗ್ಯರ ವಸತಿ."

''ಹೌದೆಂದ ಕುವಾಲ್ಡ."

''ಇಲ್ಲೇನೋ ರಿಪೋರ್ಟರ್ ಟಟಾಫ್ ಇದ್ದುದು ?"

"ಹೌದು ನೀವೇನು ಅವನನ್ನ ಕರೆದುಕೊಂಡು ಬಂದಿದ್ದೀರಾ ?''

"ಹು !'' ''ಕುಡಿದು ಬಿದ್ದಿದ್ದನೇ ?" "ಇಲ್ಲ ಖಾಯಿಲೆ !"

''ಖಾಯಿಲೆಯೆಂದರೆ ಹೆಚ್ಚಿಗೆ ಕುಡಿತ'' ಎಂದು ಹೇಳಿ ದೀಪ ತನ್ನಿರೆಂದ.

ದೀಪ ಬಂತು. ಟ್ಯಾಪನ ಸಹಾಯದಿಂದ ಅವರು, ಮಾಸ್ಟರನ್ನು ಕೆಳಗಿಳಿಸಿ ಮಲಗಿಸಿದರು.

''ನಮ್ಮ ಪೇಪರಿನಲ್ಲಿಯೇ ಕೆಲಸ ಮಾಡುತ್ತಿದ್ದ. ಏನೋ ಗ್ರಹಚಾರ ಚೆನ್ನಾಗಿಲ್ಲ. ನಮ್ಮ ಮನೆಯಲ್ಲಿಯೇ ಇರು ಎಂದೆ. ಆದರೆ ಇಲ್ಲಿಗೇ ಕರೆ ತನ್ನಿ ಎಂದು ಬಹಳ ಕೇಳಿಕೊಂಡ. ಅದಕ್ಕೆ ತಂದೆ". ಸ್ವಲ್ಪ ಹೊತ್ತು ಸುಮ್ಮನೆ ಇದ್ದು "ಅವನಿಗೇನಾದರೂ ಆದರೆ ನಮಗೆ ತಿಳಿಸಿ. ನನ್ನ ಹೆಸರು ರಿಜಾಫ್" ಎಂದು ಹೇಳಿ ಹೊರಟು ಹೋದ.

ಕುವಾಲ್ಡ ಸ್ಕೂಲುಮಾಸ್ಟರ ಪಕ್ಕದಲ್ಲಿ ಕುಳಿತು ಅವನ ಹಣೆಯನ್ನು ಮುಟ್ಟಿನೋಡಿ "ಫಿಲಿಪ್'' ಎಂದ. ಆದರೆ ಫಿಲಿಪ್‌ನ ಮುಖದಲ್ಲಿ ಸಾವಿನ ಕಳೆ, ಏರುತ್ತಿದ್ದ ಉಸಿರು, ಮುದುಡಿದ ಕೆನ್ನೆ ಕಂಡ. ಈ ದೀಪದ ಬೆಳಗಿನಲ್ಲಿ ಆ ನಿರ್ಭಾಗ್ಯರ ವಸತಿಯ ಗೋಡೆಯ ಮೇಲೆ ಕಪ್ಪು ನೆರಳುಗಳು ಕುಣಿಯುತ್ತಿದ್ದವು. ಸುತ್ತ ಮೌನ. ಟ್ಯಾಪ, ಒಂದು ಬಕೆಟ್ ನೀರು ತಂದ. ಕುವಾಲ್ಡ ''ನೀರಿನಿಂದೇನೂ ಪ್ರಯೋಜನವಿಲ್ಲ'' ಎಂದ.

''ಪಾದ್ರಿಯನ್ನಾದರೂ ಕರೆಸಿ'' ಎಂದ ಟ್ಯಾಪ.

''ಯಾರೂ ಬೇಡ. ನಮ್ಮ ಪಾಡಿಗೆ ನಾವು ಕುಡಿಯುವ, ನಡೆಯಿರಿ, ಎಂದ ಕುವಾಲ್ಡ.''

ಅಲ್ಲಿಂದ ಇಬ್ಬರೂ ಹೊರಟರು. ಟ್ಯಾಪ ಹೋಗುವಾಗ ಮಾಸ್ಟರರ್ ಮುಖವನ್ನು ಮತ್ತೊಮ್ಮೆ ನೋಡಿ ಹೋದ.

ಹೊರಗೆ 'ಲೀವಿಂಗ್ಸ್' ಕೇಳಿದ, ಅದೇನೆಂದು.

ಕುವಾಲ್ಡ ''ಏನಿಲ್ಲ! ಮಾಸ್ಟರ್ ಸಾಯುತ್ತಾ ಮಲಗಿದ್ದಾನೆ ಅಷ್ಟೆ.''

''ಸರಿ! ಅವನ ಸಾವಿನ ಸಮಾರಾಧನೆತಾನೆ ಇದು'' ಎಂದ ಲೀವಿಂಗ್ಸ್.

ಯಾರೂ ಆ ವಿಷಯವನ್ನು ಮನಸ್ಸಿಗೆ ಹಚ್ಚಿಕೊಂಡಂತೆ ಕಾಣಲಿಲ್ಲ. ಎಲ್ಲರೂ ಕುಡಿತದ ಮತ್ತಿನಲ್ಲೇ ಇದ್ದರು. ಪೂಜಾರಿ ಟೆರಾಸ್ ಮಾತ್ರ, ಸತ್ತವನಿಗೆ ಶಾಂತಿ ಸಿಗಲೆಂದು ಮುಟಗುಟ್ಟಿದ.

''ಇರಲಿ ಸಾಕಯ್ಯ!'' ಎಂದ ಲೀವಿಂಗ್ಸ್.

''ಅವನ ಹಲ್ಲು ಮುರಿಯೆಂದ'' ಕುವಾಲ್ಡ.

''ಅಯ್ಯೋ ಮೂರ್ಖ ಮುಚ್ಚು ಬಾಯಿ, ಒಂದು ಆತ್ಮ ದೇಹವನ್ನು ತೊರೆಯುತ್ತಿರುವಾಗ ಗಲಾಟೆ ಮಾಡಬಾರದು'' ಎಂದ ಟ್ಯಾಪ.

ಮೋಡದ ರಾತ್ರಿ. ನಿಶ್ಶಬ್ದ. ಆಗಾಗ ಗೊರಕೆಯ ಶಬ್ದ ಕೇಳುತ್ತಿತ್ತು. ಇಲ್ಲವೇ ಶೀಷೆಯಿಂದ ಸುರಿಯುತ್ತಿದ್ದ ಗುಳುಗುಳು ಶಬ್ದ. ''ಒಬ್ಬ ಸ್ನೇಹಿತ ಸಾಯುತ್ತಿರಬೇಕಾದರೆ ಎಷ್ಟು ದುಃಖವಿರಬೇಕು'' ಎಂದು ಕುವಾಲ್ಡ ತನ್ನ ತಲೆಯನ್ನು ಮಾಸ್ಟರ ಎದೆಯ ಮೇಲಿಟ್ಟು ಹೇಳಿದ ''ನಿಮ್ಮಲ್ಲೆಲ್ಲಾ ಅವನೇ ಸರ್ವೋತ್ತಮ. ಬುದ್ಧಿಯಲ್ಲಿ, ತಿಳುವಳಿಕೆಯಲ್ಲಿ—ಎಲ್ಲದರಲ್ಲೂ. ಅವನನ್ನು ಕಂಡರೆ ಈಗ ನನಗೆ ದುಃಖ.''

ಮಾರ್ಟನಿಯಾಫ್. ಹೇಳಿದ ''ದುಃಖ ಪಡೋರು ಪಡಲಿ ಬಿಡೋರು ಬಿಡಲಿ! ಇಂತಹ ಎಷ್ಟೋ ಸಾವನ್ನು ನನ್ನ ಜೀವನದಲ್ಲಿ ನೋಡಿದ್ದೇನೆ! ನಿತ್ಯ ಸಾಯುವವರಿಗೆ ಅಳುವವರ್‍ಯಾರ.!''

ಮಾಗಿ ನಿಶೆಯ ನಿಶ್ಶಬ್ದ ಇನ್ನೂ ಕೊಂಚ ಹೊತ್ತು ಅಲ್ಲಿ ಹಬ್ಬಿತ್ತು. ಹಾಗೆಯೇ ಸ್ಕೂಲು ಮಾಸ್ಟರ್ ಇಹ ತ್ಯಜಿಸಿದ.

ಕುವಾಲ್ಡ ''ಮಾಸ್ಟರ್, ನನ್ನ ಪಾಲಿಗೆ ಉಳಿದವರೆಲ್ಲಾ ಪ್ರಾಣಿಗಳು.

ನೀನೊಬ್ಬನೇ ಮನುಷ್ಯನಾಗಿದ್ದೆ. ನೀನು ಕುಡುಕನಿದ್ದಿರಬಹುದು ! ಆದರೂ ನೀನು ಮನುಷ್ಯ. ಒಂದೇ ಒಂದು ಮಾತನಾಡು........" ಪ್ರಾಣ ಹೋದುದು ಅವನಿಗೆ ತಿಳಿಯದು. "ಮಲಗಿದ್ದೀ ಎಂದು ಕಾಣುತ್ತೆ ? ನಿದ್ದೆಯೇನೋ ಮಲಗಿಕೋ. ನಾಳೆ ಹೇಳಬೇಕಾದುದೆಲ್ಲವನ್ನು ನಿನಗೆ ಹೇಳುತ್ತೇನೆ........"

"ಅವನು ನಿದ್ದೆಹೋಗುತ್ತಿದ್ದಾನೋ, ಎದ್ದಿದಾನೋ ನನಗೆ ತಿಳಿಯದು ಕುಡಿತದ ಮತ್ತು" ಎಂದು ಟ್ಯಾಪ್ ಹೃದಯದ ಮೇಲೆ ಶಿಲುಬೆ ರಚಿಸಿ ಕೊಂಡ.

ಮಳೆ ಹುಯ್ಯಲು ಮೊದಲಾಯಿತು. ಆ ಜಂತುಗಳು ಸಂಪೂರ್ಣ ಮತ್ತಿನಲ್ಲಿ ಅಲ್ಲಿ ಬಿದ್ದಿದ್ದರು. ನಿರ್ಭಾಗ್ಯರ ವಸತಿಯಿಂದ ಹೊರಡುತ್ತಿದ್ದ ಆ ಬೆಳಕಿನೆಳೆ ನಂದಿತು. ಗಾಳಿ ದೀಪವನ್ನು ನಂದಿಸಿತೋ, ಅಥವಾ ದೀಪವೇ ಎಣ್ಣೆಯಿಲ್ಲದೆ ಆರಿತೋ !

ಗುಡ್ಡದ ಮೇಲಿನ ಚರ್ಚಿನಿಂದ ಗಂಟೆ,ಗಂಟೆಗೂ ದನಿ ಕೇಳುತ್ತಿತ್ತು. ಮನೆಯ ಸೂರಿನಿಂದ ನೀರು ತೊಟ ತೊಟನೆ ಇಳಿಯುತ್ತಿತ್ತು.

ಮಾರನೆ ಬೆಳಗ್ಗೆ ಮೊದಲು ಎದ್ದವನು ಟ್ಯಾಪ. ಸುತ್ತಲೂ ನೋಡಿದ. ಒಂದು ಬಾಟಲಿನಲ್ಲೂ ವೋಡ್ಕ ಉಳಿದಿರಲಿಲ್ಲ. ಮೆಲ್ಲನೆ ಕುವಾಲ್ಡನನ್ನು ಎಬ್ಬಿಸಿದ. "ಪೋಲೀಸರಿಗೆ ತಿಳಿಸಬೇಕು ಏಳು." "ಯಾಕೆ" "ಮಾಸ್ಟರ್ ಸತ್ತಿದ್ದಾನಲ್ಲಾ!" "ಸತ್ತಿದ್ದಾನೆಯೇ" "ಆಗಲೇ ಮರೆತೆಯಾ" ಇಬ್ಬರೂ ಬಂದು ಮಾಸ್ಟರನ ಎರಡು ಪಕ್ಕಕ್ಕೂ ಕುಳಿತರು. ಟ್ಯಾಪ "ನೀನೇ ಅವನ ಸಂಸ್ಕಾರ ನಡಸುತ್ತಿ ತಾನೆ ?" ಕುವಾಲ್ಡ "ಇಲ್ಲ ಪೋಲೀಸರೇ ನಡೆಸಲಿ" ಎಂದ.

ಟ್ಯಾಪ: "ಅವನ ಅರ್ಜಿಯಿಂದ ದುಡ್ಡು ಮಾತ್ರ ತೆಗೆದುಕೊಂಡೆ ; ಅವನ ಸಂಸ್ಕಾರ ಮಾತ್ರ ಮಾಡುವುದಿಲ್ಲ ಇದು ಸರಿಯೇ ?"

ಕುವಾಲ್ಡ: "ಅದೆಲ್ಲಾ ನನಗೆ ಬಿಡು. ನಿನಗ್ಯಾಕೆ?"

ಟ್ಯಾಪ: "ಅವನಿಂದ ಎಷ್ಟು ದುಡ್ಡು ಬಂತು ?"

ಕುವಾಲ್ಡ: "ಇಪ್ಪತ್ತೈದು"

ಟ್ಯಾಪ: "ಅದರಲ್ಲಿ ನನಗೈದು ಕೊಡು."

ಕುವಾಲ್ಡ: "ಅದರಲ್ಲೇನು ಮಾಡುತ್ತೀ ?"

ಟ್ಯಾಪ : "ಅವನಿಗೊಂದು ಸ್ಮಾರಕ ಕಟ್ಟಿಸುತ್ತೇನೆ."

ಅಷ್ಟರಲ್ಲಿ ಪೋಲೀಸರೂ, ಮ್ಯಾಜಿಸ್ಟ್ರೇಟರೂ, ಡಾಕ್ಟರೊಡನೆ ಅಲ್ಲಿಗೆ ಬಂದರು.

"ಹೆಣವನ್ನು ಹೊರಗೆ ತನ್ನಿ. ಮಹಜರ್ ಮಾಡಬೇಕು" ಎಂದ ಪೋಲೀಸನವನು.

ಕುವಾಲ್ಡ: "ಬೇಕಾದರೆ ನೀವೇ ಹೊರಕ್ಕೆ ತರಿಸಿಕೊಳ್ಳಿ!"

ಹೀಗೆ ಮಾತು ನಡೆಯುತ್ತಿರುವಾಗ ಪೆಟುನಿಕಾಫ್ ಅಲ್ಲಿಗೇ ಬಂದ! "ಈ ಗ್ಯಾಂಗಿನ ಮುಖ್ಯಸ್ಥ ಈತನೇ! ನೀವೆಲ್ಲಾ ನನ್ನ ಮನೆಯನ್ನು ಇಂದೇ ಬಿಡಬೇಕು!" ಎಂದು ಗದರಿಸಿ ಮಾತನಾಡಿ ಒಂದರೆನಿಮಿಷ ಸುಮ್ಮನೆ ನಿಂತ! ಆ ಮೇಲೆ "ಓಹೋ ಯಾರೋ ಸತ್ತಿರುವಂತಿದೆ" ಎಂದು, ಮಾಸ್ಟರನ ಹೆಣ ವನ್ನು ನೋಡಿ ಮಿಕಮಿಕನೆ ನೋಡಿ, "ಓಹೋ" ಎಂದು ಅವನ ಕಾಲಿನ ಕೆಳಗೆ ಹತ್ತು ಕೋಪೆಕ್ ಇಟ್ಟ.

ಕುವಾಲ್ಡ "ಅದು ಯಾತಕ್ಕೆ"

"ಅವನ ಸಂಸಾರಕ್ಕೆ"

"ಅವನ್ನು ಅಲ್ಲಿಂದೆತ್ತು. ಹೂ:—ಎತ್ತು, ನಿನ್ನಂತಹವನು ಸಂಸ್ಕಾರಕ್ಕೆ ಕೊಡುವುದೇ ಆ ಕದ್ದ ಹಣವನ್ನು" ಕುವಾಲ್ಡ ಗರ್ಜಿಸಿದ.

"ಸ್ವಾಮಿ" ಎಂದು ವರ್ತಕ ಪೆಟುನಿಕಾಫ್ ಪೋಲೀಸರ ಕಡೆ ನೋಡಿದ. ನಿರ್ಭಾಗ್ಯರ ವಸತಿಯ ನಿವಾಸಿಗಳೆಲ್ಲಾ ಬಾಗಿಲಿನಲ್ಲಿ ಅಡ್ಡ ನಿಂತಿದ್ದರು. "ಕಳ್ಳ! ಆ ಕೋಪೆಕ್‌ಗಳನ್ನೆಲ್ಲ ಎತ್ತಿಕೊ! ಇಲ್ಲದಿದ್ದರೆ ನಿನ್ನ ಕತ್ತು ಹಿಸುಕೇನು!" ಎಂದು ರೇಗುತ್ತಿದ್ದ. ಹಾಗಾದರೂ ಪೆಟುನಿಕಾಫ್ ಕೋಪೆಕ್‌ಗಳನ್ನು ತೆಗೆದುಕೊಳ್ಳಲಿಲ್ಲ. ಕುವಾಲ್ಡ ರೇಗಿ ಅವನ ಕುತ್ತಿಗೆಗೆ ಕೈಯಿಟ್ಟು ಸರ್ರನೆ ಬಾಗಿಲಿನಿಂದ ಹೊರಗೆ ನೂಕಿದ. ಬಾಗಿಲಿನಲ್ಲಿ ನಿಂತಿದ್ದ ನಿರ್ಭಾಗ್ಯರು ಅವನು ಬೀಳಲು ಸುಖವಾಗಿ ದಾರಿ ಮಾಡಿಕೊಟ್ಟರು.

"ಕೊಲೆ! ಕೊಲೆ! ಇವನು ನನ್ನನ್ನು ಕೊಲ್ಲುತ್ತಾನೆ! ಪೋಲೀಸ್" ಎಂದು ಪೆಟುನಿಕಾಫ್ ಅರಚಿಕೊಳ್ಳುತ್ತಿದ್ದ. ಪೋಲೀಸಿನವರು ಕುವಾಲ್ಡನ ಕೈಗೆ ಬೇಡಿ ಹಾಕಿದರು. "ಅಹ! ಹ!" ಎಂದ ವರ್ತಕ ಪೆಟುನಿಕಾಫ್.

ಇತ್ತ ಪೋಲೀಸಿನವರು ಮಾಷ್ಟರನ್ನು ಒಂದು ಗಾಡಿಗೆ ಹಾಕಿಕೊಂಡು ಹೊರಟರು.

ನಿರ್ಭಾಗ್ಯರೆಲ್ಲಾ ಒಬ್ಬಬ್ಬರಾಗಿ ಅಲ್ಲಿಂದ ಹೊರಹೊರಟರು, ಎಲ್ಲಿಗೋ!

ವರ್ತಕ ಪೆಟುನಿಕಾಫ್, ಹೆಣದ ಗಾಡಿಯನ್ನೇ ದಿಟ್ಟಿಸುತ್ತಾ ನಿಂತ. ಕುವಾಲ್ಡ ಇಬ್ಬರು ಕಾನ್ಸ್‌ಟೇಬಲು ದಳದ ನಡುವೆ ಶಾಂತವದನನಾಗಿ ನಡೆದು ಹೋಗುತ್ತಿದ್ದ. ಪೆಟುನಿಕಾಫ್ ನಿವಾಸದ ಬಾಗಿಲಿಗೆ ಮರಳಿದ. ಬಾಗಿಲ ಬಳಿ, ಒಳಗಿನಿಂದ ಒಬ್ಬ ಚಿಂದಿಯುಟ್ಟ ಮುದುಕ ಹೊರಲಾರದ ಹೊರೆಯನ್ನು ಹೊತ್ತುಕೊಂಡು, ಹೊರಗೆ ಹೊರಟ.

ಪೆಟುನಿಕಾಫ್ : "ನೀನಾರು!"

"ನಾನೇ! ನಾನೂ ಮನುಷ್ಯ!"

"ನಿನ್ನಂತಹವರೂ ಮನುಷ್ಯರಾಗಿರಲು ಸಾಧ್ಯವೇ!

"ಮನುಷ್ಯರಲ್ಲೂ ಬಹಳ ಬಗೆ ಉಂಟು - ದೈವೇಚ್ಛೆ! ಅವರಲ್ಲಿ ನಾನೂ ಒಂದು ತರಹ!"

"ಮನುಷ್ಯ" ಹೊರಟು ಹೋದ.

ಮಳೆಯು ಮೋಡದಿಂದ ತುಂಬಿದ ಆಗಸ ಅಂಗಳದ ಮೇಲೆ ದುರು ಗುಟ್ಟುತ್ತಿತ್ತು. ಮುದುಕ ಪೆಟುನಿಕಾಫ್ ಅಂಗಳವನ್ನು ಅಳೆಯುತ್ತಾ, ಗುಣಾಕಾರ ಹಾಕುತ್ತಾ ಅತ್ತಿಂದಿತ್ತ ಸುಳಿದಾಡುತ್ತಿದ್ದ.

ಮನೆಯ ಮೇಲೊಂದು ಕಾಗೆ ಕುಳಿತು "ಕಾ" ಎನ್ನುತ್ತಿತ್ತು. ಆಗಸವನ್ನು ತುಂಬಿ, ಯಾವುದೋ ಅಚಲವಾದ ಹವಣಿಕೆಯಿಂದ ಕೂಡಿ, ಕೆಳಗಿಳಿಯುತ್ತಿದ್ದ, ಕಾರ್ಮೋಡ ತನ್ನ ಬಸುರಿನಲ್ಲಡಗಿದ್ದ ನೀರೆಲ್ಲವನ್ನೂ ಧಾರೆಯಾಗಿ ಸುರಿಸಿ ಈ ದುಃಖಿ, ನಿರ್ಭಾಗ್ಯ ಬುವಿಯನ್ನು ಹೊಲಸುಮಾಡುವ ವಸ್ತುವನ್ನೆಲ್ಲವನ್ನೂ ಕೊಚ್ಚಿ ತಿಳಿಯಾಗಿ ತೊಳೆಯಲನುವಾಗಿ ನಿಂತಿತ್ತು.

———:———

# ಖಾನನೂ ಅವನ ಮಗನೂ*

**ಅನುವಾದಕ : ಜಿ. ಪಿ. ರಾಜರತ್ನಂ**

ಹಿಂದೆ ಕ್ರಿಮಿಯಾದಲ್ಲಿ ಮೊಸೊಲೇಮ - ಎಲ್ - ಅಸ್ರಾಬ್ ಎಂಬ ಖಾನನಿದ್ದನು. ಅವನಿಗೆ ತೊಲಾಯಕ್-ಅಲ್ಗಲಾ ಎಂಬ ಮಗನಿದ್ದನು.

ಹೀಗೆಂದು ಕುರುಡ ತಾರ್ತರ ಭಿಕ್ಷುಕನು ಬಳಿಯ ಮರದ ಬುಡಕ್ಕೆ ಬೆನ್ನಿತ್ತು ಕಳೆದ ನೆನಪುಗಳಿಂದ ತುಂಬಿರುವ ಆ ಪರ್ಯಾಯದ್ವೀಪದ ಹಳೆಯ ಕತೆಗಳಲ್ಲೊಂದನ್ನು ನಿರೂಪಿಸಲು ತೊಡಗಿದನು. ಕತೆಗಾರನ ಸುತ್ತಲೂ, ತಾರ್ತರರು, ಮಿರುಗುವ ಬಣ್ಣದ ಬಟ್ಟೆಗಳನ್ನು ತೊಟ್ಟು, ಜರತಾರಿಯ ಕುಲಾವಿಗಳನಿಟ್ಟು, ಯಾವನೋ ಕಳೆದ ಖಾನನ ಮುರಿದರಮನೆಯಿಂದುರುಳಿದ ಕಲ್ಲುಗಳ ಮೇಲೆ ಕುಳಿತಿದ್ದರು. ಸಂಜೆ ಹೊತ್ತು ಸಮುದ್ರದಲ್ಲಿಳಿಯುತ್ತಿದೆ. ಸಂಜೆಗೆಂಪಿನ ಕಿರಣಗಳು ಪಾಳಿನ ಸುತ್ತಿದ್ದ ಹಸುರೆಲೆಗಳ ವಿತಾನವನ್ನು ಹೊಕ್ಕಿರಿದು, ಪಾಸೆಗಟ್ಟಿದ ಕಲ್ಲುಗಳ ಮೇಲೆಯೂ, ಗೋಡೆಗಂಟಿದ್ದ ಲತೆಗಳ ಗೊಂಚಲಿನ ಮೇಲೆಯೂ, ಹೊಳೆವ ಚುಕ್ಕಿಗಳಂತೆ ಅಲ್ಲಲ್ಲಿ ಬಿದ್ದಿದ್ದವು. ಗಾಳಿಯು ಹಿರಿಯ ಮರಗಳ ಕೊಂಬೆಗಳಲ್ಲಿ ಗಾನಮಾಡುತ್ತಿರಲು, ವಾಯುಮಾರ್ಗದಲ್ಲಿ ಕಣ್ಣಿಗೆ ಕಾಣದೆ ಹರಿವ ಹೊನಲಿನ ದನಿಯಂತೆ ಅಲ್ಲಿಯ ಎಲೆಗಳು ಮರ್ಮರನಾದಗುಡುತಿದ್ದವು, ಕುರುಡ ಭಿಕ್ಷುಕನ ದನಿಯು ಕುಗ್ಗಿತ್ತು, ನಡಗುತ್ತಿತ್ತು ; ಅವನ ಸುಕ್ಕುಮೂಡಿದ ಮುಖದಲ್ಲಿ ವಿಶ್ರಾಂತಿಯೊಂದುಳಿದು ಬೇರೇನೂ ಚಿತ್ರಿತವಾಗಿರಲಿಲ್ಲ. ಅವನಿಗೆ ಮಂದಟ್ಟಾಗಿದ್ದ ಮಾತುಗಳು, ಭಾವೋದ್ರೇಕದಿಂದ ಒಂದಾದ ಮೇಲೊಂದು ಹೊರಬಿದ್ದು, ಕೇಳುವವರಿಗೆ ಹಿಂದಿನ ದಿನಗಳ ಚಿತ್ರಗಳನ್ನು ಕಣ್ಣೆದುರಿಗಿಡುತ್ತಿದ್ದವು.

(ಕುರುಡ ಭಿಕ್ಷುಕನೆಂದ) ಖಾನನು ಮುದುಕನಾದರೂ, ಅವನ ರಾಣಿವಾಸದಲ್ಲಿ ಹೆಚ್ಚು ಜನ ಹೆಂಗಸರಿದ್ದರು. ಮುದುಕನಲ್ಲಿ ಸತ್ವವೂ ಶಕ್ತಿಯೂ ಇನ್ನೂ ಇದ್ದು, ಅವನ ಲಾಲನೆಗಳು ಮೃದುವಾಗಿಯೂ ಜುಮ್ಮೆಬ್ಬಿಸುವಂತಹವುಗಳಾಗಿಯೂ ಇದ್ದುದರಿಂದ ಅವರೆಲ್ಲರೂ ಅವನನ್ನು ಪ್ರೀತಿಸುತ್ತಿದ್ದರು ; ತಲೆಯಲ್ಲಿ

---

*The Khan and his son.

ನೆರೆಯಿರಲಿ, ಮುಖದಲ್ಲಿ ತೆರೆಯಿರಲಿ ಸತ್ವದಿಂದ ಮುಂಡಾಡುವವನನ್ನು ಹೆಂಗಸರು ಒಲಿಯುವರು, ಸೌಂದರ್ಯವು ಕೋಮಲವಾದ ತೊಗಲಿನಲ್ಲಿಲ್ಲ, ರಂಗಿನ ತುಟಿಗಳಲ್ಲಿಲ್ಲ; ಇರುವುದು ಸತ್ವದಲ್ಲಿ, ಶಕ್ತಿಯಲ್ಲಿ.

ಅವರೆಲ್ಲರೂ ಖಾನನನ್ನೊಲಿಯುವರು, ಆದರವನು ಮಾತ್ರ ನೈಪರ್ ಬಯಲಿನಿಂದ ಕರೆತಂದ ಕಾಸಕ ಬಂದಿಯೊಬ್ಬಳಲ್ಲಿ ಪಕ್ಷಪಾತತೋರಿ, ತನ್ನ ಅಂತಃಪುರದ ಇತರ ಹೆಂಗಸರನ್ನು ದೇಶದೇಶಗಳಿಂದ ಬಂದ ಮುನ್ನೂರು ಮಂದಿ ಹೆಂಗಸರನ್ನು ಪ್ರೀತಿಸುವುದಕ್ಕಿಂತ ಹೆಚ್ಚು ರಾಗೋದ್ರೇಕದಿಂದ ಆ ಕಾಸಕ ಬಂದಿಯನ್ನು ಪ್ರೀತಿಸುತ್ತಿದ್ದನು. ಅವರಲ್ಲಿ ಒಬ್ಬೊಬ್ಬಳೂ ವಸಂತದ ಪುಷ್ಪದಂತೆ ಸುಂದರವಾಗಿರುವಳು. ಎಲ್ಲರೂ ಸುಖವಾಗಿರುವರು, ಖಾನನು ಅವರಿಗಾಗಿ ಅನೇಕ ರುಚಿರುಚಿಯಾದ ತಿಂಡಿತಿನಿಸುಗಳನ್ನು ಮಾಡಿಸಿ, ಅವರಿಗೆ ಇಷ್ಟಬಂದಾಗಲೆಲ್ಲ ಕುಣಿಯುವುದಕ್ಕೂ ಹಾಡುವುದಕ್ಕೂ ಅನುಜ್ಞೆಕೊಟ್ಟಿದ್ದನು.

ಅವನು ಆಗಾಗ್ಗೆ ತನ್ನ ಕಾಸಕ ಹುಡುಗಿಯನ್ನು ಗೋಪುರದ ಮಾಳಿಗೆಗೆ ಕರೆದೊಯ್ಯುವನು. ಅಲ್ಲಿಂದ ಕಡಲು ಕಾಣುವುದು ಅಲ್ಲಿ. ಸ್ತ್ರೀಯ ಬದುಕನ್ನು ಉಲ್ಲಾಸಯುಕ್ತ ಮಾಡಲಾವಾವುದು ಬೇಕೋ—ವಿರಾಯಿಗಳು, ತರತರದ ಅನರ್ಘ್ಯವಾದ ಬಟ್ಟೆಗಳು, ಹೊನ್ನು, ಬಣ್ಣ ಬಣ್ಣದ ರತ್ನಗಳು, ಸಂಗೀತ, ದೇಶ ದೇಶದ ವಿಚಿತ್ರ ಪಕ್ಷಿಗಳು, ಮೇಲಾಗಿ ಪ್ರೀತಿಗೊಂಡ ಖಾನನ ಜಮ್ಮೆಬ್ಬಿಸುವ ಲಾಲನೆಗಳು—ಎಲ್ಲವನ್ನೂ ಅವಳಿಗಾಗಿ ಸಿದ್ಧಗೊಳಿಸಿದ್ದನು. ರಷ್ಯನರ ಹುಲ್ಲುಗಾಡುಗಳನ್ನು ತೋಳನಂತೆ ಮುತ್ತಿ, ದೇಶದಲ್ಲಿ ಭಯವನ್ನೂ ಬೂದಿಯನ್ನೂ ನೆತ್ತರನ್ನೂ ಹೆಣಗಳನ್ನೂ ಬಿತ್ತಿ, ಹೊಸ ಹೆಂಗಳೆಯರಿಂದ ಹೊಸ ಕೀರ್ತಿಯಿಂದ ಕೂಡಿದ ಅಪಾರವಾದ ಕೊಳ್ಳೆಯನ್ನೆತ್ತಿ ಹಿಂದಿರುಗಿ ಬರುವ ತನ್ನ ಮಗ ಅಲ್ಗಲನು, ತನ್ನ ಸಂಸಾರದ ಕೀರ್ತಿಯನ್ನು ಕುಂದಿಸನೆಂದು ತಿಳಿದು, ಖಾನನು ರಾಜ್ಯಭಾರದಿಂದ ವಿಶ್ರಾಂತಿಪಡೆದು, ಈ ಮೇಲ್ಮಾಳಿಗೆಯಲ್ಲಿ ಕಾಸಕ ಹುಡುಗಿಯ ಸಂಗದಲ್ಲಿ ದಿನದಿನಗಳನ್ನೇ ಒಟ್ಟೊಟ್ಟಾಗಿ ಕಳೆಯುತ್ತಿದ್ದನು.

ಒಂದು ಸಲ ಅಲ್ಗಲನು ರಷ್ಯವನ್ನು ಸೂರೆಹೊಡೆದು ಹಿಂದಿರುಗಿದಾಗ, ಅವನ ಮರ್ಯಾದಾರ್ಥವಾಗಿ ಅನೇಕ ಉತ್ಸವಗಳು ನಡೆದವು. ಉತ್ಸವಗ

ಳಿಗೆ ಕ್ರಿಮಿಯಾದ ದೊಡ್ಡ ಮನುಷ್ಯರೆಲ್ಲ ನೆರೆದಿದ್ದರು; ಆಟಪಾಟಗಳೂ ಊಟ ಉಪಚಾರಗಳೂ ನಡೆದು, ಬಂದವರು ತಮ್ಮ ತೋಳ್ಬಲವನ್ನು ತೂಗುವುದಕ್ಕೆ ಸೆರೆಯಾಳುಗಳ ಕಂಗಳಿಗೆ ತಮ್ಮ ಬಿಲ್ಲಿನಿಂದಂಬೆಸೆದರು; ಪುನಃ ಬೇಕಾದಷ್ಟು ಪಾನಮಾಡಿ, ಖಾನನ ಸಂಸ್ಥೆಗೆ ಸ್ತಂಭದಂತಿದ್ದ ಅರಿಭಯಂಕಾರನಾದ ಅಲ್ಗಲನ ವೀರವನ್ನು ಹೊಗಳಿ ಹಾಡಿದರು. ಮಗನ ಯಶಸ್ಸನ್ನು ಕಂಡು ಮುದಿ ಖಾನನು ಹಿಗ್ಗಿದನು. ತನ್ನ ಕಾಲವಾದನಂತರ, ಸಂಸ್ಥಾನವು ಸರಿಯಾದ ಕೈಯಲ್ಲಿ ನಿಲ್ಲುವುದೆಂದು ಸಂತೋಷಪಟ್ಟನು.

ಇದನ್ನರಿತು ಆನಂದಿಸುತ್ತ, ತನ್ನ ಮಗನಿಗೆ ತನ್ನ ಒಲವಿನಾಳವನ್ನು ತೋರಲೆಳಸಿ, ಔತನಕ್ಕೆ ನೆರೆದಿದ್ದ ಸಭಾಸದರ ಸಮಕ್ಷದಲ್ಲಿ-ಮಧುಪಾತ್ರೆಯನ್ನು ಮೇಲೆತ್ತಿ—ಖಾನನೆಂದನು; "ನನ್ನ ಮುದ್ದುಗುವರ, ಅಲ್ಗಲಾ! ಅಲ್ಲಾನಿಗೆ ಜಯವಾಗಲಿ! ಅವನ ಪ್ರವಾದಿಯ ಹೆಸರಿನ ಮಹಿಮೆ ಹೆಚ್ಚಲಿ!"

ಎಲ್ಲರೂ ಉಚ್ಚಸ್ವರದಿಂದ ಪ್ರವಾದಿಯ ಹೆಸರಿನ ಕೀರ್ತಿಯ ಕೀರ್ತನೆಯನ್ನು ಹಾಡಿದರು. ಖಾನನೆಂದನು. "ಅಲ್ಲಾ ದೊಡ್ಡವನು! ನನ್ನ ಜೀವಮಾನ ಕಾಲದಲ್ಲಿಯೇ, ನನ್ನ ಯೌವನವು ನನ್ನ ವೀರಕುವರನಲ್ಲಿ ಮರಳಿ ನೆಗೆವಂತೆ ಮಾಡಿದ್ದಾನೆ; ನನ್ನ ಮುದಿಕಂಗಳಿಗೆ ಹಗಲಿನ ಬೆಳಕು ಇಲ್ಲದಾದಂದು, ಕ್ರಿಮಿಗಳು ನನ್ನೆದೆಯನ್ನು ಕಿತ್ತು ತಿನ್ನುವಂದು, ನಾನು ನನ್ನ ಮಗನಲ್ಲಿ ಪುನಃ ಜೀವಿಸುವೆನೆಂಬ ನಂಬುಗೆಯುಂಟು. ಅಲ್ಲಾ ದೊಡ್ಡವನು! ಮಹಮ್ಮದನೇ ಅವನ ನಿಜವಾದ ಪ್ರವಾದಿ! ನನ್ನ ಮಗ ಒಳ್ಳೆಯವ; ಭುಜದಲ್ಲಿ ಛಲವುಂಟು, ಎದೆಯಲ್ಲಿ ಕೆಚ್ಚುಂಟು, ಮನವು ನಿರ್ಮಲವುಂಟು. ನಿನ್ನ ತಂದೆಯ ಕಡೆಯಿಂದ ನಿನಗಾಸೆಯೇನುಂಟು, ಅಲ್ಗಲಾ? ಹೇಳು, ನಿನ್ನಿಚ್ಛೆಯನ್ನೆಲ್ಲ ಸಲಿಸುವೆನು."

ಮುದಿಖಾನನ ಶಬ್ದವಡಗುವಷ್ಟರಲ್ಲಿ, ತೊಲಾಯಕ್ — ಅಲ್ಗಲನು ಎದ್ದನು. ಅವನ ಕಣ್ಣುಗಳು ಕತ್ತಲಿನಲ್ಲಿ ಕಾಣುವ ಕಡಲಿನಂತೆ ಕಪ್ಪಗಿದ್ದುವು—ಮುಲೆಯ ಗಿಡುಗನ ಕಣ್ಣುಗಳಂತೆ ಮಿನುಗುತ್ತಿದ್ದುವು.

ಅಲ್ಗಲನೆಂದ: "ಪ್ರಭುವೇ! ತಂದೆಯೇ! ಆ ರಷ್ಯಾದ ಬಂದಿಯವಳನ್ನೆನಗೆ ಕೊಡಿರಿ."

ಖಾನನು ಸುಮ್ಮನಿದ್ದ — ಎದೆಯ ಕಂಪನವನ್ನಡಗಿಸುವಷ್ಟು ಕಾಲ ಮಾತ್ರ ಸುಮ್ಮನಿದ್ದು ಅನಂತರ ಗಂಭೀರಧ್ವನಿಯಿಂದ "ಅವಳು ನಿನ್ನವಳು! ಈ ಔತನವು ತೀರಿದಮೇಲೆ ನೀನವಳನ್ನೊಯ್ಯಬಹುದು." ಎಂದನು.

ಧೀರ ಅಲ್ಗಲನು ಹಿಗ್ಗಿದನು. ಅವನ ಡೇಗೆಯ ಕಣ್ಣು ಆನಂದಾತಿರೇಕದಿಂದ ಮಿನುಗಿದವು. ಮೇಲೆದ್ದು ನೆಟ್ಟನೆ ನಿಂತು, ತನ್ನ ತಂದೆ ಖಾನಗಿಂತೆಂದ: "ನೀವು ನನಗೆ ಕೊಡುವುದೆಂತಹುದೆಂಬುದು ನನಗೆ ಗೊತ್ತು—ಪ್ರಭುವೆ! ತಂದೆಯೆ!—ನನಗೆ ಗೊತ್ತು. ನಾನು ನಿಮ್ಮ ಗುಲಾಮ—ನಿಮ್ಮ ಮಗ. ನನ್ನ ನೆತ್ತರನ್ನು ಸುರಿಯಿಸಿ, ಘಂಟೆಗೊಂದು ತೊಟ್ಟನಂತೆ—ನಿಮಗಾಗಿ ನಾನು ಇಪ್ಪತ್ತು ಸಾರಿ ಸಾಯಲು ಸಿದ್ಧನಿದ್ದೇನೆ!"

"ನನಗೇನು ಬೇಕಿಲ್ಲ" ಎಂದು ಖಾನನೆಂದ. ಅನೇಕ ಸಂವತ್ಸರಗಳ, ಅನೇಕ ಮಹತ್ಕಾರ್ಯಗಳ ಯಶಸ್ಸಿನ ಮುಗುಟುವಾಂತಿದ್ದ ಅವನ ನರೆತ ತಲೆಯು ಅವನೆದೆಯ ಮೇಲೆ ಕುಸಿಯಿತು.

ಹಬ್ಬದೂಟವು ಬೇಗ ಮುಗಿಯಿತು. ಇಬ್ಬರೂ ಅರಮನೆಯಿಂದ ಹೊರಬಿದ್ದು, ಉಸಿರೆತ್ತದೆ ಪಕ್ಕ ಪಕ್ಕದಲ್ಲಿ ನಡಯುತ್ತ ರಾಣಿವಾಸದಕಡೆ ಹೊರಟರು.

ಮಸಿಮಯದ ರಾತ್ರಿ. ಚಂದ್ರನಾಗಲಿ, ಚುಕ್ಕಿಗಳಾಗಲಿ ಕಾಣಿಸುತ್ತಿರಲಿಲ್ಲ. ದಟ್ಟವಾದ ಪರದೆಯಂತೆ ಮೋಡಗಳು ಆಗಸವನ್ನು ಮುಸುಕಿದ್ದುವು.

ಬಹುಕಾಲ ಮಾತನಾಡದೆಯೇ ನಡೆದರು. ಕಡೆಗೆ ಖಾನ—ಎಲ್—ಅಸ್ರಾಬನೆಂದ:

"ನನ್ನ ಜೀವವಾಹಿನಿಯು ದಿನೇ ದಿನೇ ಕುಗ್ಗುತ್ತಿದೆ—ಎದೆಯ ತ್ರಾಣವು ಕಡಿಮೆಯಾಗುತ್ತಿದೆ. ಸತ್ವವು ಕಂದುತ್ತಿದೆ. ಆ ಕಾಸಕ ಹುಡುಗಿಯ ನಿಸರ್ಗವಾದ ಲಲ್ಲೆಗಳು, ನನ್ನ ಜೀವನಕ್ಕೆ ಜೀವಸವೂ, ಬಾಳಿಗೆ ಬೆಳಕೂ ಆಗಿದ್ದವು. ಹೇಳು ತೊಲಾಯಕ್, ಹೇಳು—ನಿನಗವಳು ಸತ್ಯವಾಗಿ ಅಷ್ಟು ಅವಶ್ಯಕವೆ? ನನ್ನ ಹೆಂಡಿರಲ್ಲಿ ನೂರು ಮಂದಿಯನ್ನು ಕರೆದುಕೋ—ಅವಳೊಬ್ಬಳನ್ನುಳಿದು, ಅವರೆಲ್ಲರನ್ನೂ ತೆಗೆದುಕೊ."

ತೊಲಾಯಕ್—ಅಲ್ಗಲನು ನಿಟ್ಟುಸಿರುಬಿಟ್ಟು ಸುಮ್ಮನಿದ್ದನು.

''ನಾನು ಉಳಿದರಿನ್ನೆಷ್ಟುದಿನ ? ಬಾಳಿದರೆ—ಬಲು ಕೊಂಚ ಕಾಲ. ಈ ರಷ್ಯನರ ಹುಡುಗಿಯು ನನ್ನ ಬದುಕಿನ ಕಡೆಯಃ ಕಿಡಿ. ನನ್ನನ್ನವಳು ಅರಿತಿರುವಳು, ನನ್ನನ್ನು ಪ್ರೀತಿಸುತ್ತಾಳೆ; ಅವಳಲ್ಲದೆ ನನ್ನನ್ನು—ಈ ಮುದಿಯನನ್ನು—ಪ್ರೀತಿಸುವವರಾರು ? ಯಾರು ? ಅಷ್ಟು ಮಂದಿಯಲ್ಲಿ, ಒಬ್ಬಳು ಸಹ ಪ್ರೀತಿಸಳು, ಅಲ್ಗಲಾ—ಒಬ್ಬಳು—ಸಹ—ಪ್ರೀತಿಸಳು."

ಅಲ್ಗಲನು ಸದ್ದಿಲ್ಲದಿದ್ದ.

''ನೀನವಳನ್ನು ಆಲಿಂಗಿಸುತ್ತಿರುವೆಯೆಂದು, ನಿನ್ನನ್ನವಳು ಮುತ್ತಿಡುವಳೆಂದು ತಿಳಿದೂ ನಾನು ಸುಮ್ಮನಿರುವುದೆಂತು ? ತೊಲಾಯಕ್, **ಹೆಂಗಸಿನ ಸಂದರ್ಭದಲ್ಲಿ ನಾವು ತಂದೆ ಮಗನೆಂದರಾಗದು; ಹೆಂಗಸರ ವಿಚಾರದಲ್ಲಿ ನಾವೆಲ್ಲ ಗಂಡಸರು,** ಅಲ್ಗಲಾ! ತೊಲಾಯಕ್. ನನ್ನ ಮೈಮೇಲಿನ ಹಳೆಯ ಗಾಯಗಳ ಬಾಯ್ತೆರೆದು, ದೇಹದ ರಕ್ತವು ಪ್ರವಹಿಸಿ ಹೋದರೆ ಉತ್ತಮವಾದೀತು.........ಮಗನೇ, ನಾನೀರಾತ್ರಿ ಉಳಿದುಕೊಳ್ಳದಿದ್ದಲ್ಲಿ ಮೇಲಾದೀತು!"

ಅವನ ಮಗನು ಮಾತೆತ್ತಲಿಲ್ಲ. ಇಬ್ಬರೂ ಅಂತಃಪುರದ ಬಾಗಿಲಿನಲ್ಲಿ ನಿಂತರು. ಇಬ್ಬರ ತಲೆಗಳೂ ಕುಸಿದು ಎದೆಯಮೇಲಿದ್ದವು. ಬಹುಕಾಲ ಅಲ್ಲಿಯೇ ನಿಂತಿದ್ದರು. ಸುತ್ತಲೂ ಕತ್ತಲು; ಬಾನಿನಲ್ಲಿ ಮೋಡಗಳು ಒಂದನ್ನೊಂದಟ್ಟಿ ಹೋಗುತ್ತಿದ್ದವು. ಗಾಳಿಯು ಮರಳನ್ನಲುಗಿಸಿ, ಅವುಗಳಿಗೆ ಹಾಡುತ್ತಿರುವಂತಿತ್ತು.

ಅಲ್ಗಲನು ಮೆಲ್ಲನೆ ''ಅಪ್ಪಾ! ಬಹುಕಾಲದಿಂದ ನಾನವಳನ್ನು ಪ್ರೀತಿಸಿದ್ದೇನೆ'' ಎಂದ.

ಖಾನನೆಂದ: ''ನನಗೆ ಗೊತ್ತು. ಅಲ್ಲದೆ ಅವಳಿಗೆ ನಿನ್ನಲ್ಲಿ ಒಲವಿಲ್ಲವೆಂಬುದನ್ನೂ ಬಲ್ಲೆ.''

''ಅವಳನ್ನು ನೆನೆದಾಗಲೆಲ್ಲ ನನ್ನೆದೆಯು ಬೇಯುತ್ತದೆ.''

"ನನ್ನ ಮುದಿ ಹೃದಯದಲ್ಲೇನಾಗುತ್ತಿದೆ ಬಲ್ಲೆಯಾ ?"

ಪುನಃ ಅವರು ಸುಮ್ಮನಾದರು. ಅಲ್ಗಲನು ನಿಟ್ಟುಸಿರಿಟ್ಟನು.

''ಬಲ್ಲವರು-ವಹೌಲ್ವಿಗಳು ಹೇಳಿದುದನ್ನು ಸತ್ಯವೆಂದರಿತೆ. ಹೆಣ್ಣಿನಿಂದ ಮಾನವಗೆ ಎಂದೂ ತೊಂದರೆಯು. ಅವಳು ಚಲುವೆಯಾದರೆ, ಅವಳನ್ನು ಪಡೆಯಬೇಕೆಂಬಾಸೆಯನ್ನು ಇತರರಲ್ಲಿ ಉಂಟುಮಾಡುವಳು ; ಅವಳ ಗಂಡನು ಪ್ರೇಮ ಸಂಶಯಕ್ಕೆ ಸಿಲುಕುತ್ತಾನೆ. ಅವಳು ಕುರೂಪಿಯಾಗುವಳೆ, ಅವಳ ಗಂಡನು ಇತರರನ್ನು ನೋಡಿ ಅಸೂಯೆ ಪಟ್ಟು, ಆ ಅಸೂಯೆಯಿಂದ ತೊಂದರೆ ಬೀಳುತ್ತಾನೆ. ಒಂದುವೇಳೆ ಅವಳು ಸುರೂಪಿಯೂ ಅಲ್ಲದೆ, ಕುರುಪಿಯೂ ಅಲ್ಲದಿದ್ದಲ್ಲಿ, ಪುರುಷನು ಅವಳು ಸುಂದರಿಯೆಂದು ಭಾವಿಸಿ ಕೊಂಡು, ತಾನು ತಪ್ಪು ಮಾಡಿರುವೆನೆಂದು ತಿಳಿದುಕೊಂಡು ಅದಕ್ಕಾಗಿ ಒದ್ದಾಡುತ್ತಾನೆ—ಇಷ್ಟೆಲ್ಲ ಒಬ್ಬ ಹೆಂಗಸಿನಿಂದ.''

ಖಾನನೆಂದ : ''ಹೃದ್ರೋಗಕ್ಕೆ ಬುದ್ಧಿವಾದಗಳು ಮದ್ದಲ್ಲ.''

''ಅಪ್ಪ ? ಒಬ್ಬರನ್ನೊಬ್ಬರು ಕನಿಕರಿಸಬೇಕಾಗಿದೆ.''

ಖಾನನು ತಲೆಯೆತ್ತಿ, ವ್ಯಸನದಿಂದ ಮಗನತ್ತ ನೋಡಿದನು.

ತೊಲಾಯಕನೆಂದ : ''ಅವಳನ್ನು ಕೊಂದುಬಿಡುವ.''

ಖಾನನು ಒಂದು ಕ್ಷಣ ಯೋಚಿಸಿದನು ; ಆಮೇಲೆ ನಿದಾನವಾಗಿ ''ಅವಳನ್ನು ಪ್ರೀತಿಸುವುದಕ್ಕಿಂತ, ನನ್ನನ್ನು ಪ್ರೀತಿಸುವುದಕ್ಕಿಂತ, ನಿನ್ನನ್ನೇ ನೀನು ಹೆಚ್ಚು ಪ್ರೀತಿಸಿಕೊಳ್ಳುತ್ತೀಯೆ'' ಎಂದು ಮೆಲ್ಲನುಸುರಿದನು.

''ಹೌದು. ನೀವೂ ಹಾಗೆಯೆ.''

ಪುನಃ ಇಬ್ಬರೂ ನೀರವ.

ಖಾನನು ವ್ಯಸನದಿಂದ ''ಹೌದು. ನಾನೂ ಹಾಗೆಯೆ'' ಎಂದ. ಖೇದವು ಅವನನ್ನು ಹಸುಳೆಯನ್ನಾಗಿ ಮಾಡಿದ್ದಿತು.

''ಸರಿ, ಅವಳನ್ನು ಕೊಲ್ಲೋಣವೆ ?''

ಖಾನನೆಂದ : ''ನಾನವಳನ್ನು ನಿನಗೆ ಕೊಡಲಾರೆ — ನಾ ಕೊಡಲಾರೆ !''

''ನಾನಿನ್ನು ಹೆಚ್ಚುಕಾಲ ಸೈರಿಸಲಾರೆ. ನನ್ನೆದೆಯನ್ನು ಇರಿದುಬಿಡಿ, ಇಲ್ಲವೆ ಅವಳನ್ನು ನನಗೆ ಕೊಡಿರಿ.''

ಖಾನನು ಸುಮ್ಮನಿದ್ದನು.

"ಇಲ್ಲವಾದರೆ ಬಂಡೆಗಳ ಮೇಲಿಂದ ಅವಳನ್ನು ಸಮುದ್ರಕ್ಕೆ ಒಗೆಯೋಣ."

ಮಗನ ಧ್ವನಿಯ ಪ್ರತಿಧ್ವನಿಯಂತೆ "ಬಂಡೆಗಳ ಮೇಲಿಂದ ಅವಳನ್ನು ಸಮುದ್ರಕ್ಕೆ ಒಗೆಯೋಣ" ಎಂದು ಖಾನನು ಅವನ ಮಾತಗಳನ್ನು ಮರು ನುಡಿದನು.

ಆಮೇಲೆ ಇಬ್ಬರೂ ರಾಣಿವಾಸದೊಳಹೊಕ್ಕರು. ಸುಸಜ್ಜಿತವಾದ ಜಮಾಖಾನೆಹಾಸಿದ ನೆಲದ ಮೇಲೆ, ಆಸಳಾಗಲೇ ನಿದ್ದೆ ಹೋಗಿದ್ದಳು. ಅವಳೆದುರಿಗೆ ನಿಂತು ಅವರು ನೋಡಿದರು—ಬಹುಕಾಲ ನೋಡಿದರು. ಮುದಿ ಖಾನನ ಕಂಗಳಿಂದ ನೀರಿಳಿದು, ಅವನ ಬೆಳ್ಳಿಯ ಗಡ್ಡದಲ್ಲಿ ಹಿಂತು, ಮುತ್ತುಗಳಂತೆಸೆದುವು. ಅವನಾ ಕಾನಕ ಹುಡುಗಿಯನ್ನು ಎಚ್ಚರಗೊಳಿಸುವಾಗ, ಅವನ ಮಗನು ತನ್ನ ರಾಗವನ್ನಡಗಿಸಲು ಹಲ್ಗಡಿದು ಕಂಗಳನ್ನರಳಿಸುತ್ತ ನಿಂತಿದ್ದನು. ಅವಳೆದ್ದಳು—ಪ್ರಭಾತದಂತೆ ಸುಂದರವೂ ಕೋಮಲವೂ ಆದ ಅವಳ ಮುಖದಲ್ಲಿ, ತಾವರೆಗಳರಳುವಂತೆ ಕಣ್ಣುಗಳು ತೆರೆದವು. ಅವಳು ಅಲ್ಗಲನನ್ನು ಕಾಣಲಿಲ್ಲ. ಖಾನನಿಗೆ ತನ್ನ ಚಂದುಟಿಗಳನ್ನು ನೀಡಿದಳು.

"ನನ್ನ ಡೇಗೆಯು ಒಂದು ಮುತ್ತು ಕೊಡನೆ ?" ಎಂದಳು.

ಖಾನನು ಮೃದುವಾಗಿ "ಏಳು—ನೀನು ನಮ್ಮೊಡನೆ ಬರಬೇಕು" ಎಂದನು.

ಆಗ ಅವಳು ಅಲ್ಗಲನನ್ನು ನೋಡಿದಳು. ತನ್ನ ಡೇಗೆಯ ಕಣ್ಣಿನ ನೀರನ್ನು ಕಂಡಳು. ಕಾಣುವುದು ತಡ, ಎಲ್ಲವನ್ನೂ ತಿಳಿದಳು.

ಅವಳೆಂದಳು "ನಾನು ಬರುತ್ತೇನೆ ಇಬ್ಬರಲ್ಲಿ ಯಾರಿಗೂ ಬೇಡವೆಂದೊ ? ಹೀಗೆಯೆ ನೀವು ತೀರ್ಮಾನಿಸಿರುವುದು ? ಸ್ಥಿರಚಿತ್ತರು. ಹೀಗೆ ತೀರ್ಮಾನಿಸಲಾಯಿತೆ ! ಬರುತ್ತೇನೆ."

ಮೂವರೂ ಸಮುದ್ರದ ಕಡೆ ಸದ್ದಿಲ್ಲದೆ ಹೊರಟರು. ಇಕ್ಕಟ್ಟಿನ ದಾರಿಗಳಲ್ಲಿ ನಡೆದರು. ಗಾಳಿಯು ಕೂಗಿ ಚೀರಿಟ್ಟಿತು.

ಹುಡುಗಿಯು ಅಬಲೆ, ಬೇಗ ದಣಿದಳು. ಆದರವಳು ಸ್ವಾಭಿಮಾನ ದಿಂದ, ಅವರಿಗಿದನ್ನು ತಿಳಿಸಲಿಚ್ಛಿಸಲಿಲ್ಲ.

ಖಾನನ ಮಗನು ಅವಳು ಹಿಂದೆ ಜೋಲುತ್ತಿದ್ದುದನ್ನು ಕಂಡು "ಹೆದ ರಿಕೆಯಾಗುತ್ತದೆಯೆ ?" ಎಂದ.

ಅವಳು ಅವನಕಡೆ ದುರದುರನೆ ನೋಡಿ, ನೆತ್ತರು ಬಸಿವ ತನ್ನಡಿಗಳನ್ನ ವನಿಗೆ ತೋರಿದಳು.

ಅಲ್ಗಲನು "ನಿನ್ನ ನಾ ಎತ್ತಿಕೊಂಡು ಬರುವೆನು" ಎಂದು ಅವಳ ಕಡೆ ತೋಳನ್ನು ನೀಡಿದನು. ಆದರವಳು ತನ್ನ ಮುದಿ ಡೇಗೆಯ ಕುತ್ತಿಗೆಗೆ ಜೋಲಿ ಬಿದ್ದಳು. ಖಾನನು ಹುಲ್ಲಿಂಬಂತೆ ಅವಳನ್ನು ಎತ್ತಿ ಹೊತ್ತನು. ಅವಳು ಆವನ ತೋಳುಗಳಲ್ಲಿ ವಿಶ್ರಮಿಸಿ, ಅವನ ಮುಖಕ್ಕೆ ಬಡಿದು ಕಣ್ಣಿಗೆ ತಾಗಿ ಅಪಾಯವಾದೀತೆಂದು ಹೆದರಿ, ದಾರಿಗಡ್ಡಲಾದ ಕೊಂಬೆಗಳನ್ನು ಅತ್ತಲಾಗಿ ಸುತ್ತಿದ್ದಳು. ದೂರ ನಡೆದರು. ಕೊನೆಗೆ ದೂರದಲ್ಲಿ ಕಡಲ ಘೋಷವು ಕೇಳಿಸಿತು. ಆಗ, ಕಾಲುದಾರಿಯಲ್ಲಿ ಅವರನ್ನನುಸರಿಸುತ್ತಿದ್ದ ತೊಲಾಯ ಕನು "ನನ್ನನ್ನು ಮುಂದೆ ಹೋಗಲು ಬಿಡಿ. ಇಲ್ಲವಾದರೆ ನಿಮ್ಮ ಕುತ್ತಿಗೆ ಯಲ್ಲಿ ಬಾಕುವನ್ನು ನಾಟಬೇಕೆಂದು ಮನವಾಗುವುದು" ಎಂದು ತಂದೆ ಗಂದನು.

"ನಡೆ ಮುಂದೆ. ಅಲ್ಲಾನು ನಿನ್ನ ಮನದಾಸೆ ಪೂರ್ತಿ ಮಾಡುವನು— ಇಲ್ಲ ಕ್ಷಮಿಸುವನು. ನಾನು, ನಿನ್ನ ತಂದೆಯಾದ ನಾನು, ನಿನ್ನನ್ನು ಕ್ಷಮಿ ಸುವೆನು. ಪ್ರೀತಿಸುವುದೇನೆಂಬುದು ನನಗೆ ಗೊತ್ತು."

ಕೊನೆಗೆ ಸಾಗರವು ಸಿಕ್ಕಿತು. ಅಲ್ಲಿ, ದೂರದಲ್ಲಿ, ಕೆಳಗಡೆ, ಕಪ್ಪಗೆ ಸೀಮೆಯಿಲ್ಲದ ಶೂನ್ಯ. ಬಂಡೆಗಳ ಬುಡದಲ್ಲಿ ತೆರೆಗಳು ಉತ್ಸಾಹರಹಿತವಾಗಿ ಗಾನಮಾಡುತ್ತಿದ್ದವು. ಕೆಳಗಡೆ, ಕತ್ತಲು, ಛಳಿ, ಭೀಕರವಾಗಿತ್ತು.

ಖಾನನು ಹುಡುಗಿಗೆ ಮುತ್ತಿಟ್ಟು "ಹೋಗಿ ಬಾ" ಎಂದ.

ಅಲ್ಗಲನು ಅವಳಿಗೆ ವಂದಿಸಿ "ಹೋಗಿ ಬಾ" ಎಂದ.

ಹುಡುಗಿಯು ಕೆಳಗಡೆ ಅಲೆಗಳು ಹಾಡುತ್ತಿದ್ದ ಕಡೆ ನೋಡಿ, ಹಿಂಜ ರಿದು, ತನ್ನೆದೆಯ ಮೇಲೆ ಕೈಗಳನ್ನ ವಚಿಕೊಂಡಳು.

"ನನ್ನನ್ನು ಕೆಳಕ್ಕೆ ಒಗೆಯಿರಿ !" ಎಂದವರನ್ನು ಕುರಿತೆಂದಳು.

ಅಲ್ಗಲನು ಅವಳಕಡೆ ಕೈನೀಡಿ ಮುಲುಗಟ್ಟಿ ನರಳಿದನು. ಖಾನನಾದರೊ, ಅವಳನ್ನೆತ್ತಿ ಎದೆಗವಚಿಗೊಂಡು, ಮುತ್ತಿಟ್ಟು, ತಲೆಯ ಮೇಲ್ಗಡಿದೆತ್ತಿ, ಪ್ರಪಾತದಿಂದ ಕೆಳಗೆಸೆದನು.

ಕೆಳಗೆ ತೆರೆಗಳು ಅಪ್ಪಳಿಸಿ ಹಾಡಿದ ರಭಸದಲ್ಲಿ, ಅವಳು ನೀರನ್ನು ಮುಟ್ಟಿದುದು ಇವರಿಗೆ ಕೇಳಿಸಲಿಲ್ಲ—ಒಂದು ಕೂಗಾಗಲಿ, ಒಂದು ದನಿಯಾಗಲಿ ಕೇಳಿಸಲಿಲ್ಲ. ಖಾನನು ಬಂಡೆಗಳ ಮೇಲೆ ಕುಸಿದು, ಸದ್ದಿಲ್ಲದೆಯೆ ದೂರದ ಕತ್ತಲೆಯನ್ನು ನೋಡುತ್ತ ಕುಳಿತನು. ದೂರದಲ್ಲಿ ಸಾಗರವು ಮುಗಿಲೊಡನೆ ಲೀನವಾಗಿತ್ತು. ಅಲೆಗಳ ಮಂದವಾದ ಶಬ್ದವು ಅಲ್ಲಿಂದ ಬರುತ್ತಿತ್ತು. ಅಲ್ಲಿಂದ ಬೀಸಿಬಂದ ಗಾಳಿಯು ಅವನ ನರೆನವಿರನ್ನು ಚೆದುರಿಸುತ್ತಿತ್ತು. ಕಲ್ಲಿನಂತೆ, ಅಲುಗದಯೆ ; ನುಡಿಯದೆಯೆ, ಕೈಗಳಿಂದ ಮುಖವನ್ನು ಮರೆಮಾಡಿಕೊಂಡು, ತೊಲಾಯಕನು ಅವನ ಬಳಿ ನಿಂತಿದ್ದನು. ವೇಳೆಯಾಯಿತು. ಗಾಳಿಯಿಂದಟ್ಟಲ್ಪಟ್ಟ ಮೋಡಗಳು ಒಂದರ ಹಿಂದೊಂದು ನೀಲದಲ್ಲಿ ಓಡಿದವು. ಸಮುದ್ರದ ಮೇಲಿನ ಎತ್ತರದ ಪ್ರಪಾತದ ತುದಿಯಲ್ಲಿ ಬಿದ್ದಿದ್ದ ಮೋಡಗಳು ಖಾನನ ಯೋಜನೆಯಂತೆ ಭಾರವಾಗಿಯೂ ಕರಾಳವಾವಾಗಿಯೂ ಇದ್ದುವು.

"ಅಪ್ಪ, ಹೋಗೋಣ" ಎಂದು ತೊಲಾಯಕನೆಂದ.

"ತಡೆ" ಎಂದು, ಏನನ್ನೋ ಆಲಿಸುತ್ತಿರುವನಂತೆ, ಖಾನನು ಪಿಸುಮಾತಿನಲ್ಲೆಂದನು. ಪುನಃ ಕಾಲ ಹಾರಿತು, ಕೆಳಗೆ ಅಲೆಗಳು ಹೊರಳಿದವು. ಗಾಳಿಯು ಬಂಡೆಗಳ ಮೇಲ್ವಾಯ್ದು, ಮರಗಳಲ್ಲಿ ಹುಯ್ಯಲಿಟ್ಟಿತು.

"ಅಪ್ಪ, ಹೋಗೋಣ."

"ಇನ್ನು ಕೊಂಚ ತಡೆ."

ಅಲ್ಗಲನು ಎಷ್ಟೋಸಲ ಹೇಳಿದನು "ಅಪ್ಪ, ಹೋಗೋಣ" ಎಂದು. ಆದರೆ ಖಾನನು ತನ್ನ ಉಳಿದ ದಿನಗಳ ಬದುಕಿನ ಸಾರವನ್ನು ನೀಗಿಕೊಂಡ ಸ್ಥಳದಿಂದ ಕದಲಲಾರದಾದನು.

ಆದರೆ ಎಲ್ಲಕ್ಕೂ ಅಂತ್ಯವುಂಟು ! ಕೊನೆಗವನು ಸ್ವಾಭಿಮಾನದಿಂದ, ಹುರುಪಿನಿಂದ ಮೇಲೆದ್ದನು ; ಮೇಲೆದ್ದು, ಹುಬ್ಬು ಗಂಟಿಕ್ಕಿ, ಮಂದವಾಗಿ

"ಹೋಗೋಣ" ಎಂದ.

ಅವರು ಹೊರಟರು ಬೇಗನೆ. ಖಾನನು ನಿಂತುಕೊಂಡ.

ತನ್ನ ಮಗನನ್ನು ಕೇಳಿದನು : "ತೊಲಾಯಕ್! ನಾನೇತಕ್ಕೆ ಬರುತ್ತಿದ್ದೇನೆ? ಎಲ್ಲಿಗೆ? ನನ್ನ ಜೀವವೆಲ್ಲಿ ಅವಳಿಲ್ಲದಿರಲಾಗಿ, ನಾನು ಬದುಕಬೇಕಾಮದೇಕೀಗ? ನಾನು ಮುದುಕ, ನನ್ನನ್ನು ಈಗ ಯಾರೂ ಪ್ರೀತಿಸರು. ಪ್ರೀತಿಸುವವರು ಯಾರೂ ಇಲ್ಲದಿರಲು ಈ ಪ್ರಪಂಚದಲ್ಲಿ ಬಾಳುವುದು ಮೂಢತನ."

"ಅಪ್ಪ! ನಿಮಗೆ ಯಶಸ್ಸಿದೆ, ವಿಪುಲೈಶ್ವರ್ಯವಿದೆ."

"ಅವಳದೊಂದು ಮುತ್ತನ್ನು ಕೊಡು—ನೀನು ಹೇಳಿದ ಅದೆಲ್ಲವನ್ನೂ ನೀನೇ ಪಾರಿತೋಷಿಕವಾಗಿ ತೆಗೆದುಕೊ. ಅವುಗಳಲ್ಲಿ ಜೀವವಿಲ್ಲ. ನಲ್ಲೆಯ ಒಲವೊಂದರಲ್ಲಿ ಜೀವಕಳೆಯಿದೆ. ಮನುಷ್ಯನಿಗೆ ಆ ಒಲವಿಲ್ಲದಿದ್ದಲ್ಲಿ, ಅವನಿಗೆ ಜೀವವಿಲ್ಲದಂತೆಯೆ ಸರಿ—ಅವನೊಬ್ಬ ಭಿಕಾರಿ. ಅವನ ಬದುಕು ಶೋಚನೀಯವಾದುದು. ಹೋಗಿ ಬರುವೆನು ಮಗನೆ; ಅಲ್ಲಾನ ಆಶೀರ್ವಾದವು ನಿನಗಾಗಿ, ನೀನಿರುವ ಪರ್ಯಂತ ನಿನಗೊಳ್ಳೆಯದಾಗಲಿ" ಎಂದುಸುರಿ ಖಾನನು ಸಮುದ್ರದತ್ತ ತಿರುಗಿದನು.

ತೊಲಾಯಕನು "ಅಪ್ಪಾ! ಅಪ್ಪಾ!" ಎಂದನು. ಅಷ್ಟೆ. ಹೆಚ್ಚು ಹೇಳಲಾಗಲಿಲ್ಲ. ಸಾವು ಆಮಂತ್ರಿಸಿ ಕರೆದೊಯ್ಯುತ್ತಿರುವವನಿಗೆ ಏನೂ ಹೇಳುವಂತಿಲ್ಲ. ಅವನಿಗೆ ಜೀವದಾಸೆಯು ಮರಳಿ ಜನಿಸುವಂತೆ ಏನನ್ನೂ ಹೇಳಲಾಗುವುದಿಲ್ಲ.

"ನಾನು ಹೋಗಿ ಬರಲೆ ......."

"ಅಲ್ಲಾ........"

"ಅವನಿಗೆ ಗೊತ್ತು........"

ತ್ವರೆಯಿಂದ ಹೆಜ್ಜೆಯಿಡುತ್ತ, ಖಾನನು ಪ್ರಪಾತದ ಅಂಚಿಗೆ ನಡೆದು ಕೆಳಗೆ ಹಾರಿದನು. ಅವನ ಮಗನು ಅವನನ್ನು ತಡೆಯಲಿಲ್ಲ—ತಡೆಯಲಾಗಲಿಲ್ಲ, ಅದಕ್ಕೆ ಅವಕಾಶವಿರಲಿಲ್ಲ. ಪುನಃ ಸಮುದ್ರದಿಂದ ಕೂಗಾಗಲಿ, ಖಾನನು ನೀರನ್ನು ಮುಟ್ಟಿದ್ದ ಸಪ್ಪಳವಾಗಲಿ, ಯಾವದೂ ಕೇಳಿಬರಲಿಲ್ಲ. ಅಲೆಗಳುಮಾತ್ರ ಕೆಳಗೆ ಉರುಳಿದುವು. ಗಾಳಿಯು ಮನಬಂದಂತೆ ಮೊರೆದು

ಹಾಡುತ್ತಿತ್ತು.

ತೊಲಾಯಕ್—ಅಲ್ಗಲನು ಬಹಳ ಹೊತ್ತು ಪ್ರಪಾತದ ಕೆಳಗಡೆ ನೋಡುತ್ತಿದ್ದು ಕೊನೆಗೆ ಗಟ್ಟಿಯಾಗಿ ಹೇಳಿದನು: "ಅಲ್ಲಾ! ನನಗೂ ಅಂತಹ ಸ್ಥಿರಚಿತ್ತವನ್ನು ಕೊಡು."

ಆಮೇಲೆ ಅವನು ರಾತ್ರಿಯ ಕತ್ತಲೆಯಲ್ಲಿ ಹೊರಟನು............

ಹೀಗೆ ಖಾನ್—ಮೊಸೊಲೀಮ - ಎಲ್ - ಅಸ್ರಾಬನು ಕಾಲವಾದನು. ಖಾನ್-ತೊಲಾಯಕ್-ಅಲ್ಗಲನು ಕ್ರಿಮಿಯಾದಲ್ಲಿ ರಾಜ್ಯವಾಳಿದನು.

---

# ಸ್ಟೆಪಿಸ್ *

ಅನುವಾದಕ : ಗಣಪತಿ ಹೆಗ್ಗಡೆ

ಪರಕೊಪ್ಪವನ್ನು ಬಿಟ್ಟಾಗ ನಮಗೆ ಸಾಕಾಗಿ ಹೋಗಿತ್ತು. ಹಸಿದ ತೋಳದಂತಾಗಿದ್ದೆವು. ಜಗತ್ತಿನ ಬಗ್ಗೆ ನಮಗೆ ತಿರಸ್ಕಾರವುಂಟಾಗಿತ್ತು. ಹತ್ತು ಹನ್ನೆರಡು ತಾಸುಗಳವರೆಗೆ ನಾವು ಹೇಗಾದರೂ ಮಾಡಿ ಏನನ್ನಾದರೂ ಉಳಿಸಿಕೊಳ್ಳಲು ನಮ್ಮಿಂದಾದ ಎಲ್ಲ ಪ್ರಯತ್ನಗಳನ್ನೂ ಮಾಡಿದೆವು. ಯಾವದೂ ಸಾಧ್ಯವಾಗದೆಂದು ನಿಶ್ಚಯವಾಗಿ ತಿಳಿದಮೇಲೆ ಮುಂದೆ ಹೊರಟೆವು. ಎಲ್ಲಿಗೆ? .... ಎಲ್ಲಿಗಾದರೂ - ನಮ್ಮ ಕೈಲಿ ನಡೆಯುವಷ್ಟು ತ್ರಾಣ ವಿರುವವರೆಗೆ.

ಇಷ್ಟು ದಿನಗಳವರೆಗೆ ಸಾಗಿಸುತ್ತಿದ್ದ ಜೀವನವನ್ನೇ ಮುಂದೆಯೂ ಸಾಗಿಸುವದೆಂದು ನಿಶ್ಚಯವಾಗಿತ್ತು. ಪ್ರತಿಯೊಬ್ಬರ ಹಸಿದ ಕಣ್ಣುಗಳಲ್ಲಿ ಈ ನಿರ್ಧಾರ ಒಡಮೂಡಿ ಕಾಣುತ್ತಿತ್ತು.

ನಾವು ಒಟ್ಟಿಗೆ ಮೂವರು. ಒಂದು ದಿನ ಕಾರಿನಲ್ಲಿ ನೀಪರ ನದಿಯ ದಡದಮೇಲೆ ಸಾರಾಯಿ ಅಂಗಡಿಯಲ್ಲಿ ಕೂಡಿದ್ದೆವು. ನಮ್ಮಲ್ಲಿ ಒಬ್ಬನು ಹಿಂದೆ ಯುದ್ಧದಲ್ಲಿ ಸೇರಿ ಸಿಪಾಯಿಯಾಗಿದ್ದ. ಅವನು ಕಪ್ಪಾಗಿ ಬಲಿಷ್ಠನಾಗಿ ಕಬ್ಬಿಣ ದಂತಿದ್ದನು. ಅವನ ಕಾಜುಕಣ್ಣುಗಳಲ್ಲಿ ಒಂದು ತರದ ಕ್ರೌರ್ಯ ಉಕ್ಕುತ್ತಿತ್ತು. ಅವನು ಅನೇಕ ವರ್ಷಗಳನ್ನು ಜೈಲಿನಲ್ಲಿ ಕಳೆದಿದ್ದ. ಅಲ್ಪಸ್ವಲ್ಪ ಜರ್ಮನ್ ಭಾಷೆ ಬರುತ್ತಿತ್ತು. ನಮ್ಮ ಕಸಬಿನವರು ಹಿಂದಿನ ವಿಷಯವಾಗಿ ಯಾರೊಡನೆಯೂ ಹೇಳುವದಿಲ್ಲ. ಅದಕ್ಕೆ ಕಾರಣಗಳಿವೆ ಅದಕ್ಕಾಗಿ ನಾವು ಅವರು ಹೇಳಿದ ಸಂಗತಿಗಳನ್ನು ನಂಬುತ್ತೇವೆ. ಹೊರಗಾದರೂ ಹಾಗೆಂದು ತೋರಿಸಿಕೊಳ್ಳುತ್ತೇವೆ. ಏಕೆಂದರೆ ಪ್ರತಿಯೊಬ್ಬನಲ್ಲಿ ತನ್ನ ವಿಷಯವಾಗಿ ತನದೇ ನಂಬಿಕೆ ಇರುವದಿಲ್ಲ.

ನಮ್ಮಲ್ಲಿ ಎರಡನೆಯವನು ತಾನು ಮೆಟ್ರಿಕ್ಕಿನವರೆಗೆ ಓದಿದ್ದೇನೆಂದು ನಮ್ಮೊಡನೆ ಹೇಳಿದ್ದನು. ನಾವು ಅದನ್ನು ನಂಬಿದ್ದೆವು. ಅವನು ಕಲಿತವ

---

* Steppes.

ನಾದರೇನು ಕಳ್ಳನಾದರೇನು ನಮ್ಮೊಂದಿಗೆ ಇರುವವರೆಗೆ ನಮ್ಮ ಸರಿಕ. ಹಸಿವನ್ನೂ, ಪೋಲೀಸರ ಸರ್ಪಕಾವಲನ್ನೂ ತಡೆದುಕೊಂಡು ತಪ್ಪಿಸಿಕೊಳ್ಳಲು ತಯಾರಿರಬೇಕಿತ್ತು. ನಾಗರಿಕ ಜಗತ್ತನ್ನೇ ದ್ವೇಷಿಸುತ್ತಿರಬೇಕು. ನಮ್ಮಂತೆ ಸಮಾಜದ ಬಂಧನಗಳಿಂದ ಸರಳಿ ಸೃಷ್ಟಿಯ ಸ್ವಾತಂತ್ರ್ಯವನ್ನು ಅನುಭವಿಸುವ ಮನೋವೃತ್ತಿಯುವನಿರಬೇಕು.

ಮೂರನೆಯವನು ನಾನು. ನನ್ನ ಗುಣಗಳನ್ನು ನಾನೇ ವರ್ಣಿಸುವದು ನನಗೆ ಸೇರುವದಿಲ್ಲ. ಹೇಳಿದರೂ ನನ್ನ ದೋಷಗಳನ್ನು ಹೇಳುವದು ನಮ್ಮ ಕಸಬಿನ ಧರ್ಮದ ವಿರುದ್ಧವಾದ್ದರಿಂದ ಹೇಳುವದಿಲ್ಲ. ಆದರೂ ನನ್ನ ವಿಷಯವಾಗಿ ಒಂದು ಮಾತು ಮಾತ್ರ ಹೇಳುತ್ತೇನೆ. ನಾನು ಯಾವಾಗಲೂ ಅವರಿಗಿಂತಲೂ ಹೆಚ್ಚಿನವನೆಂದು ನನ್ನ ನಂಬಿಕೆಯಿದೆ.

ಇಂತಹ ಪರಿಸ್ಥಿತಿಯಲ್ಲಿ ಪರಕೊಪ್ಪವನ್ನು ಬಿಟ್ಟು ಮುಂದಕ್ಕೆ ನಡೆದೆವು. ರಸ್ತೆಯಲ್ಲಿ ಸಿಕ್ಕುವ ಕುರುಬರೊಡನೆ ಮೊದಲನೇ ದಿನ ಆಹಾರ ಬೇಡುವದು ಎಂದುಕೊಂಡಿದ್ದೆವು. ಕುರುಬರು ಯಾವಾಗಲೂ ರೊಟ್ಟಿ ತಿನ್ನುವಾಗ ಬೇಡಿದವನಿಗೆ ಒಂದು ಚೂರನ್ನಾದರೂ ಕೊಡದಿರುವದಿಲ್ಲ.

ನಾನೂ ಆ ಸಿಪಾಯಿಯೂ ಮುಂದೆ ಹೋಗುತ್ತಿದ್ದೆವು. ಆ ಕಲಿತವನು ಯಾವಾಗಲೂ ಹಿಂದೆ ಬೀಳುತ್ತಿದ್ದನು. ಹೆಗಲ ಮೇಲೆ ಒಂದು ಹರಿದುಹೋದ ಜಾಕೀಟನ್ನು ಟವಲಿನಂತೆ ಹಾಕಿಕೊಂಡಿದ್ದನು. ಪೊದೆ ಪೊದೆಯಾಗಿ ಬೆಳೆದ ಎಂದೋ ಮಾಡಿಸಿದ ಕ್ರಾಪಿನ ಮೇಲೆ ಎಣ್ಣೆ ಮಣ್ಣು ಮೆತ್ತಿಹೋಗಿ ಒಂದು ಹೊಲಸು ಬಣ್ಣ ಬಂದಿರುವ ಒಂದು ತುರ್ಕಿ ಟೊಪ್ಪಿಗೆಯನ್ನು ಹಾಕಿಕೊಂಡಿದ್ದನು. ಅದು ಹರಿದುಹೋಗಿ ಮೊಣಕಾಲಿನ ತನಕ ಬಂದಿತ್ತು. ಧೂಳು ಹಾರುವಂತೆ ಕಾಲನ್ನು ಹೊಸೆಯುತ್ತ ನಡೆದಿದ್ದ. ಶಿಪಾಯಿ ಒಂದು ಖಾಕಿ ಅಂಗಿಯನ್ನು ತೊಟ್ಟುಕೊಂಡಿದ್ದ. ತಲೆಯ ಮೇಲೆ ಒಂದು ಮಿಲಿಟರಿ ಟೊಪ್ಪಿಗೆಯನ್ನು ಮಿಲಿಟರಿ ಶಿಸ್ತಿನಂತೆ ಬಲಗಡೆ ಕಣ್ಣಿನ ಮೇಲೆ ಬರುವಂತೆ ಹಾಕಿಕೊಂಡಿದ್ದನು. ಅವನು ಕೆಂಪಾದ ಪಠಾಣ ಚಡ್ಡಿಯನ್ನು ಧರಿಸಿದ್ದ. ಅವನ ಕಾಲುಗಳಲ್ಲಿ ಒಂದು ಹಳೆಯ ಎಕ್ಕಡವನ್ನು ಮೆಟ್ಟಿಕೊಂಡಿದ್ದನು.

ನನ್ನ ಮೇಲೂ ಅಂಗಿ ರುಮಾಲುಗಳಿದ್ದವು. ದೂರದವರೆಗೆ ಅತಿಯಾಗಿ ಹಬ್ಬಿದ ಹುಲ್ಲುಗಾವಲಿನ (Steppes) ಭೂಮಿಯ ಮೇಲೆ ಮೋಡಗಳಿಲ್ಲದ

ನೀಲೀ ಆಕಾಶ. ಅವುಗಳ ನಡುವೆ ನಮ್ಮ ಹಾದಿ ಧೂಳು ಮುಚ್ಚಿಕೊಂಡು ಕೆಂಪಾಗಿ ಕಣ್ಣು ಹಾಯುವವರೆಗೂ ಕಾಣುತ್ತಿತ್ತು. ಕೆಲವೊಂದು ವೇಳೆ ತೊಯ್ದು ಗದ್ದೆಗಳೊಳಗಿಂದ ಹಾಯ್ದುಹೋಗುತ್ತಿದ್ದೆವು. ಸಿಪಾಯಿಯು ಹೋಗುತ್ತ ಹೋಗುತ್ತ ಯಾವುದೋ ಮಿಲಿಟರಿ ಹಾಡನ್ನು ತನ್ನ ಗಡಸು ದನಿಯಲ್ಲಿ ಹಾಡತೊಡಗಿದನು.

"ಸಾಗುವೆವು, ಹೋಗುವೆವು ...." ಅವನು ಸೈನಿಕರಿಗೆ ಮೇಳಗೀತೆಯನ್ನು ಹಾಡಿ ಮನರಂಜನೆ ಮಾಡುತ್ತಿದ್ದನಂತೆ. ಅವನಿಗೆ ಅನೇಕ ಹಾಡುಗಳು ಬರುತ್ತಿದ್ದವು.

ನಮ್ಮ ಕಣ್ಣಮುಂದೆ ದೂರದಲ್ಲಿ ಬೆಳ್ಳಗೆ ಗುಡ್ಡಗಳ ಸಾಲಿನಂತೆ ಕಾಣಿಸಹತ್ತಿತು. "ಅವೇ ಕ್ರಿಮಿಯಾದ ಗುಡ್ಡಗಳಾಗಿರಬೇಕು" ಎಂದು ಹಿಂದೆ ಬರುತ್ತಿದ್ದ ಆ ಕಲಿತವನು ನಮ್ಮನ್ನು ಕರೆದು ಹೇಳಿದ.

"ಅವು ಗುಡ್ಡಗಳಲ್ಲ. ಮೋಡಗಳು ಹಾಗೇ ಕಾಣುತ್ತಿವೆ. ನೋಡಿದರೆ ಕಾಣುವದಿಲ್ಲ, ಬೆಳ್ಳಗೆ ಹಾಲು ಹೆಪ್ಪುಗಟ್ಟಿದಂತೆ ಕಾಣುವದು ?" ಎಂದ ಸಿಪಾಯಿ.

"ಮೋಡಗಳೆಲ್ಲ ಹಾಗೇ ಆಗಿದ್ದರೆ ?" ಎಂದೆ ನಾನು. ಇದರಿಂದ ನಮ್ಮ ಹಸಿವೆ ಹೆಚ್ಚಿತು.

"ಜೀವಂತ ಒಂದು ಹುಳುವಾದರೂ ಕಣ್ಣಿಗೆ ಬೀಳುವದಿಲ್ಲ! ನಮ್ಮ ಹೊಟ್ಟೆಗೆ ಬೇಕಾದರೆ ನಮ್ಮ ಕೈಗಳನ್ನೇ ನೆಕ್ಕಿಕೊಳ್ಳಬೇಕು" ಎಂದು ಸಿಪಾಯಿ ಗುಣುಗುಟ್ಟುತ್ತಿದ್ದ.

"ನಾನು ಹೊರಡುವಾಗಲೇ ಹೇಳಿದೆನಲ್ಲ! ಜನರು ಯಾವಾಗಲೂ ಹೆಚ್ಚಾಗಿದ್ದ ಜಾಗಕ್ಕೇ ಹೋಗಬೇಕು ಎಂದು" ಈಗ ಆ ಕಲಿತವನು ಎಲ್ಲರಿಗೂ ಕೇಳುವ ಹಾಗೆ ಹೇಳಿದ.

"ಜನ ಇದ್ದ ಜಾಗ! ಎಲ್ಲ ಹೇಳುತ್ತೀ. ನೀನು ಕಲಿತವ. ಬರಿಯ ಮಾತಾಡಲಿಕ್ಕೆ ಬರುತ್ತದೆ. ಎಲ್ಲಿದೆ ಜನ ಇದ್ದ ಜಾಗ ?"

ವಿದ್ಯಾರ್ಥಿ ಮಾತನಾಡಲಿಲ್ಲ. ಸೂರ್ಯ ಮುಳುಗುತ್ತಿದ್ದ. ಮೋಡಗಳು ತರತರದ ಬಣ್ಣಗಳನ್ನು ಚೆಲ್ಲಿ ಚಿತ್ರಿಸಿದಂತೆ ಇದ್ದುವು! ವಿಲಕ್ಷಣವಾಗಿ ಹಸಿವಾಗಿತ್ತು. ದೇಹದ ಎಲ್ಲ ಭಾಗಗಳ ಶಕ್ತಿ ಹಾರಿಹೋಗುತ್ತಿದ್ದಂತೆ ಭಾಸ

ವಾಗುತ್ತಿತ್ತು. ನಾಲಿಗೆ ದ್ರವವಿಲ್ಲದೆ ಅಂಗಳಕ್ಕೆ ಹತ್ತಿಹೋಗಿತ್ತು. ಆಗಾ ಬಾಯಲ್ಲಿ ಬರುತ್ತಿದ್ದ ಜಿಗಿಯಾದ ಎಂಜಲನ್ನೇ ನುಂಗಿ ಗಂಟಲನ್ನು ಹ ಮಾಡಿಕೊಳ್ಳುತ್ತಿದ್ದೆವು. ಪ್ರಾಣ ಬಂದಂತಾಗುತ್ತಿತ್ತು. ಕಣ್ಣು ಮುಚ್ಚಿ ಕೊಂಡರೆ ಮಾಂಸವೋ ರೊಟ್ಟಿಯ ಚೂರೋ ಬಂದಂತಾಗುತ್ತಿತ್ತು. ಹೊಟ್ಟೆ ಯಲ್ಲಿ ಚಾಕುವಿನ ಇರಿತಕ್ಕಿಂತಲೂ ತೀವ್ರವಾದ ಸಂಕಟವಾಗುತ್ತಿತ್ತು.

ಆದರೂ ನಾವು ಮುಂದುವರಿಯುತ್ತಲೇ ಇದ್ದೆವು. ಕುರಿಗಳ ಹಿಂಡಾ ಗಲಿ, ಹಳ್ಳಿಯ ಸಾಮಾನು ತುಂಬಿಕೊಂಡು ಪೇಟೆಗೆ ಹೋಗುವ ಬಂಡಿಯಾಗಲಿ ಕಣ್ಣಿಗೆ ಬೀಳುತ್ತದೆಯೋನೊ ಎಂದು ಆಸೆಯಿಂದ ಸುತ್ತಲೂ ನೋಡುತ್ತಿದ್ದೆವು.

ಆದರೆ ಆ ಸ್ಟೆಪಿಸ್ ಜೀವರಹಿತವಾಗಿತ್ತು, ನಿಶ್ಶಬ್ದವಾಗಿತ್ತು.

ಹಿಂದಿನ ಪೆರಿಕೊಪ್ಪಿನಲ್ಲಿ ಧರ್ಮಶಾಲೆಯಲ್ಲಿ ಕುಳಿತು ಎರಡು ಮೂರು ರೊಟ್ಟಿಗಳನ್ನು ತಿಂದು ನೀರು ಕುಡಿದಿದ್ದೆವು. ಆದರೆ ಅಂದು ನಡೆದದ್ದು ಇಪ್ಪತ್ತೈದು ಮೈಲುಗಳಿಗಿಂತ ಹೆಚ್ಚಿನ ದೂರದಲ್ಲಿ.

ವಿದ್ಯಾರ್ಥಿಯು ನಮ್ಮೊಂದಿಗೆ ಹೇಳಿದ್ದ ರಾತ್ರಿ ಮಲಗದೆ ನಮ್ಮ ಮುಂದಿನ .... ನಾಗರಿಕರ ಮಧ್ಯದಲ್ಲಿ ಕಳುವಿನ ಉಪಾಯಗಳನ್ನು ಹೇಳ ಬಾರದು. ಅದಕ್ಕಾಗಿ ನಾವು ಹೇಳುವದಿಲ್ಲ. ನಾನು ನಿಮಗೆ ಸತ್ಯವನ್ನೇ ಹೇಳಬೇಕಾದರೂ ನಾನೇ ಹೇಳುವದು ಒಳಿತಾಗಲಿಕ್ಕಿಲ್ಲ. ಈಗೀಗ ಜನರು- ಕಲಿತವರು, ನಾಗರಿಕರು ದಯಾಳುಗಳಾಗುತ್ತಿದಾರೆ. ಬೇರೆಯವರನ್ನು ಕೊಲ್ಲಬೇಕೆಂದೆಣಿಸಿದರೂ ಬಹಳ ಕರುಣೆಯಿಂದಲೇ ಕುತ್ತಿಗೆಗೆ ಚೂರಿಯ ನ್ನಿಕ್ಕುತ್ತಲಿದಾರೆ. ಕಾಯಿದೆಯಿಂದಲೇ ಕುತ್ತಿಗೆ ಕೊಯ್ಯುತ್ತಲಿದಾರೆ ನಮಗೆ ಹಾಗೆ ಮಾಡಲಿಕ್ಕೆ ಬರುವದಿಲ್ಲ. ನನ್ನದೇ ಕುತ್ತಿಗೆಯ ಅನುಭವ ದಿಂದ ಹೇಳುತ್ತೇನೆ. ನನಗೆ ಅನಿಸುತ್ತದೆ ಜಗತ್ತಿನಲ್ಲಿ ಎಲ್ಲವೂ ಹೀಗೆಯೇ ಸಾಗಬೇಕು. ಜೈಲುಗಳು ವೇಶ್ಯಾಗೃಹಗಳು ಹೆಚ್ಚುವದಕ್ಕೆ ಇದೇ ಕಾರಣ.

ನಾವು ಹಸಿವಿನಿಂದ ಕಂಗಾಲಾಗಿದ್ದೆವು. ಅದನ್ನು ಇದನ್ನು ಮಾತಾ ಡುತ್ತ ನಮ್ಮ ಹಸಿವನ್ನು ಮರೆಯಲು ಪ್ರಯತ್ನಿಸುತ್ತಿದ್ದೆವು. ಆ ಹಾಳ ಸ್ಟೆಪಿಸ್‌ನಲ್ಲಿ ಹಾಗೆಯೇ ಮುಂದೆ ಸಾಗಿದ್ದೆವು. ಸೂರ್ಯನು ಮುಳುಗ ತ್ತಿದ್ದಾಗ ನಾವಿನ್ನೂ ನಡೆಯುತ್ತಲೇ ಇದ್ದೆವು. ದೂರದಲ್ಲಿ ಕೆಂಪು ಮೋಡಗಳ

ರಾಶಿಯಲ್ಲಿ ಸೂರ್ಯನು ಮುಳುಗತೊಡಗಿದ್ದ. ಕತ್ತಲು ಸುತ್ತಲೂ ಆವರಿಸ ತೊಡಗಿತ್ತು.

ರಸ್ತೆಯಲ್ಲಿ ಬಿದ್ದ ಒಂದು ಕಟ್ಟಿಗೆ ತುಂಡನ್ನು ಆರಿಸಿಕೊಂಡು "ಈ ಹೊತ್ತು ರಾತ್ರಿ ಪಟಪಟ ಚಳಿಯಲ್ಲೇ ಬಿದ್ದುಕೊಳ್ಳಬೇಕು. ಉಪಾಯವಿಲ್ಲ, ಕಟ್ಟಿಗೆ ತುಂಡುಗಳನ್ನೂ ಕುರುಳುಗಳನ್ನೂ ಆರಿಸಿ, ರಾತ್ರಿ ಕಾಯಿಸಿಕೊಳ್ಳ ಬೇಕು" ಎಂದ ಸಿಪಾಯಿ.

ನಾವು ಆಚೆ ಈಚೆ ಹೋಗಿ ಕಟ್ಟಿಗೆ ಚೂರು, ಒಣಕುರುಳು, ಒಣಹುಲ್ಲು ಬೆಂಕಿ ಹತ್ತಬಹುದಾದ ಎಲ್ಲವನ್ನೂ ಕೂಡಿಸತೊಡಗಿದೆವು. ಪ್ರತಿ ಸಾರೆ ಆರಿಸಲಿಕ್ಕೆ ಬಗ್ಗುವಾಗ ನರಗಳ ನಿತ್ರಾಣದಿಂದ ಮುಗ್ಗರಿಸಿ ಬೀಳುವಂತಾಗು ತ್ತಿತ್ತು. ಹೊಟ್ಟೆ ತುಂಬ ಆ ಮಣ್ಣನ್ನೇ ತಿಂದುಕೊಂಡು ಬಿದ್ದಿಕೊಳ್ಳುವಾ ಎಂದೆನಿಸುತ್ತಿತ್ತು. ನಮಗೆ ಎಂತಹ ಆಯಾಸವಾಗಿದ್ದರೂ ಬಿದ್ದುಹೋಗಿ ರುವ ಹೊಟ್ಟೆಗೆ ಏನಾದರೂ ತುಂಬಿಕೊಂಡ ಹೊರತು ನಿದ್ದೆ ಬರುವಂತಿದ್ದಿಲ್ಲ.

"ಏನಾದರೂ ಗಡ್ಡೆಯಿದೆಯೆ? ಇದ್ದಿದ್ದರೆ ತಿನ್ನಬಹುದಾಗಿತ್ತು" ಎಂದು ಸಿಪಾಯಿ ಬಾಯಿ ಚಪ್ಪರಿಸಿದ. ಆದರೆ ಸ್ಟೆಪಿಸ್‌ನಲ್ಲಿ ಗಡ್ಡೆಯೆಲ್ಲಿಂದ ಬರಬೇಕು? ಕತ್ತಲಾಗುತ್ತ ಬಂದಿತ್ತು. ನಕ್ಷತ್ರಗಳು ಕಾಣಹತ್ತಿದ್ದವು. ಕವಿ ಯುತ್ತಿದ್ದ ಕತ್ತಲು ನಮ್ಮನ್ನು ಸುತ್ತಿಕೊಂಡಿತು. ಸುತ್ತಲಿನದೆಲ್ಲ ಮಸಕಾಗುತ್ತ ಬಂದಿತು.

ಹಿಂದಿನಿಂದ ವಿದ್ಯಾರ್ಥಿಯು ಕರೆದನು. "ತಡೆಯಿರಿ, ಅದೋ ಅಲ್ಲಿ ಎಡಕ್ಕೆ ಒಬ್ಬ ಮಲಗಿದಂತೆ ಕಾಣುತ್ತದೆ."

"ಅಲ್ಲಿ ಏಕೆ ಮಲಗಿದ್ದಾನೆ?" ಸಿಪಾಯಿ ನಮ್ಮ ಕಡೆಗೆ ಸಂಶಯದೃಷ್ಟಿ ಯಿಂದ ನೋಡಿದನು.

"ಅಲ್ಲಿ ಹೋಗಿ ಅವನನ್ನು ಕೇಳಬೇಕಾದರೆ. ಅವನು ಇಲ್ಲಿ ಸ್ಟೆಪಿಸ್‌ನಲ್ಲಿ ಇರಬೇಕಾದರೆ ಅವನ ಹತ್ತರ ಆಹಾರವೇನಾದರೂ ಇದ್ದಿರಬೇಕು" ಎಂದು ವಿದ್ಯಾರ್ಥಿ ವಿಚಾರಮಾಡಿ ಹೇಳಿದನು. ಸಿಪಾಯಿ ಅವನ ಕಡೆಗೆ ನೋಡಿದನು. "ಏನಾದುದಾಗಲಿ, ಅವನಿದ್ದಲ್ಲಿಗೆ ಹೋಗುವ" ಎಂದು ಹೊರಡಲು ತಯಾ ರಾದನು. ಸುಮಾರು ಐವತ್ತುಮಾರು ದೂರದಲ್ಲಿ ಮುದ್ದೆಯಾಗಿ ಬಿದ್ದಿರು ವದು ಒಂದು ಮನುಷ್ಯಪ್ರಾಣಿ ಎಂದು ವಿದ್ಯಾರ್ಥಿಯ ತೀಕ್ಷ್ಣ ಕಣ್ಣುಗಳಿ

ಗಲ್ಲದೆ ನಮಗೆ ತಿಳಿಯುವಂತಿರಲಿಲ್ಲ. ಆದರೂ ನಮ್ಮ ಕಾಲುಗಳು ಆಹಾರ ದೊರಕಿಸುವ ಹೊಸ ಆಸೆಯಿಂದ ವೇಗವಾಗಿ ಸಾಗಿದವು. ನಾವು ತೀರ ಹತ್ತಿರಕ್ಕೆ ಬರುವವರೆಗೂ ಆ ಮನುಷ್ಯ ಏಳಲಿಲ್ಲ.

''ಅವ ಮನುಷ್ಯನಲ್ಲ'' ಎಂದು ಸಿಪಾಯಿ ನಿಟ್ಟುಸುರುಬಿಟ್ಟನು. ಅವನಿಗಷ್ಟೇ ಎನಿಸಿತೆಂದಲ್ಲ ನಮ್ಮೆಲ್ಲರಿಗೂ ಆ ಅನಿಶ್ಚಲ ಮುದ್ದೆಯನ್ನು ಕಂಡು ಹಾಗೇ ಅನಿಸಿತ್ತು. ಅಷ್ಟರಲ್ಲಿ ಆ ಮುದ್ದೆ ವ್ಯೆಮುರಿಯುತ್ತ ಎದ್ದು ಕುಳಿತದ್ದರಿಂದ ನಮ್ಮ ಸಂಶಯ ಪರಿಹಾರವಾಯ್ತು. ಅವನು ಒಬ್ಬ ಮನುಷ್ಯ ಎದ್ದು ಕುಳಿತು ಪಿಸ್ತೂಲನ್ನು ಮುಂದೆ ಮಾಡಿದ.

''ಮುಂದೆ ನನ್ನ ಹತ್ತಿರ ಬಂದರೆ ಜೋಕೆ! ನಿಮ್ಮನ್ನು ಸುಟ್ಟುಹಾಕುತ್ತೇನೆ '' ಎಂದು ಅವನು ತನ್ನಿಂದಾದಷ್ಟು ಜೋರಿನಿಂದ ಹೇಳಿದನು. ಅವನ ದನಿ ನಡುಗುತ್ತಿತ್ತು.

ಒಂದು ಸಾರೆ ಹವೆಯಲ್ಲಿ ಢಂ ಎಂದಿತು. ಮುಂದೇನು ಮಾಡಬೇಕೆಂದು ತಿಳಿಯದೆ ನಾವು ಒಮ್ಮೆಲೇ ನಿಂತೆವು.

''ದುಷ್ಟ'' ಎಂದ ಸಿಪಾಯಿ. ವಿದ್ಯಾರ್ಥಿ "ಹೌದು, ಆದರೆ, ಅವನು ರಿವಾಲ್ವರನ್ನು ತೆಗೆದುಕೊಂಡು ಬಂದಿದ್ದಾನೆ. ಬೇಕಾದ ಬೇಟೆ ಸಿಕ್ಕಂತಾಯಿತು.''

''ಏ '' ಸೋಲ್ಜರ್ ಅವನನ್ನು ಕರೆದ. ಅವನೊಂದು ಉಪಾಯ ಹುಡುಕಿದ್ದನು. ಕೂತವನು ನಮ್ಮ ಕಡೆಗೆ ನೋಡುತ್ತ ಕುಳಿತಿದ್ದನು. ''ಏ, ಏ, ನಿನ್ನ ಕೈಲಿ ಏನಾದರೂ ತಿನ್ನಲಿಕ್ಕೆ ಇದೆಯೆಂದು ಅನ್ನಿಸುತ್ತದೆ. ನಮಗಂತೂ ಬಹಳ ಹಸಿವಾಗಿದೆ. ಏನಾದರೂ ಕೈಲಿದ್ದರೆ ಕೊಡು. ನಾವು ನಿನ್ನನ್ನು ಮುಟ್ಟಬರುವದಿಲ್ಲ."

ಮನುಷ್ಯನು ಕೂತವನು ಸರಿದಾಡಲಿಲ್ಲ. ನಮಗೆಲ್ಲ ಸಿಟ್ಟು ಬಂತು. "ಕೇಳುತ್ತೇನೆ, ನೀನು ಅಲ್ಲಿಂದಲೇ ನಿನ್ನ ಹತ್ತಿರ ಇದ್ದುದನ್ನು ಒಗೆ. ನಾವು ಮುಂದೆ ಬರುವದೇ ಇಲ್ಲ." ಸೋಲ್ಜರ್ ಜೋರಿನಿಂದ ಹೇಳಿದ.

"ಆಗಬಹುದು." ಮನುಷ್ಯ ಮೆತ್ತಗೆ ಹೇಳಿದ. ಅವನು ನಿಮ್ಮಹಾಗೆ (ಸಭ್ಯ ಗೃಹಸ್ಥನ ಹಾಗೆ) ಅಣ್ಣಾ, ಅಣ್ಣಗಳಿರಾ....ಇನ್ನೂ ಏನೇನೋ ಅತ್ಯಂತ

ನಯವಾದ ಮಾತುಗಳನ್ನು ಹೇಳಿದ್ದರೂ ಆನಂದವಾಗುತ್ತಿರಲಿಲ್ಲ. ಆತನು "ಆಗಬಹುದು" ಎಂದು ಹೇಳಿದ ಶಬ್ದಗಳು ತುಂಬಾ ಆನಂದವನ್ನುಂಟು ಮಾಡಿದವು.

''ನಮ್ಮನ್ನು ಕಂಡು ಹೆದರುವದು ಬೇಡಣ್ಣಾ; ನಾವು ರಷ್ಯಾವನ್ನು ಬಿಟ್ಟು ಕುಬಾನಕ್ಕೆ ಹೋಗುವವರು. ನಮ್ಮಲ್ಲಿದ್ದ ದುಡ್ಡು ತೀರಿಹೋಯಿತು. ಆಹಾರವನ್ನು ಮುಗಿಸಿಯಾಯಿತು. ಹೊಟ್ಟೆಗೆ ಏನೂ ತಿನ್ನದೆ ಎರಡು ದಿನಗಳಾಗಿವೆ." ಸೋಲ್ಜರ್ ತೆಳ್ಳಗೆ ನಗುತ್ತಿದ್ದುದನ್ನು ಆತ ಕಾಣಲಿಲ್ಲ.

"ತೆಗೆದುಕೊಳ್ಳಿ'' ಎಂದು ಆ ಮನುಷ್ಯ ನಮ್ಮ ಕಡೆಗೆ ಏನೋ ಬೀಸಿ ಒಗೆದ. ವಿದ್ಯಾರ್ಥಿ ಅದನ್ನು ತಂದ. ಎಂಟು ರೊಟ್ಟಿಗಳಿದ್ದವು ಆ ಗಂಟಿನಲ್ಲಿ ನೆಲದ ಧೂಳು ತಾಗಿದ್ದುದನ್ನು ಝಾಡಿಸಿದನು ವಿದ್ಯಾರ್ಥಿ. ಸರಿಯಾಗಿ ನಮ್ಮೊಳಗೆ ಹಂಚಿದವನು ಸೋಲ್ಜರ್.

ನಾನು ಆ ಒಣಗಿದ ರೊಟ್ಟಿಯ ತುಂಡುಗಳನ್ನು ಅಗಿದೆ. ಸಾವಕಾಶವಾಗಿ ಅಗಿಯಬೇಕಿತ್ತು. ಕಲ್ಲುಗಳನ್ನು ಕೂಡ ಅಗಿದುಬಿಡಲು ತಯಾರಾಗಿರುವ ದವಡೆಯ ನರಗಳನ್ನು ಆದಷ್ಟು ಸಾವರಿಸಿಕೊಂಡು ಅಗಿಯಬೇಕಿತ್ತು. ಅಗಿದ ರೊಟ್ಟಿಯ ತುಂಡುಗಳನ್ನು ನುಂಗಲು ಸಾಕಷ್ಟು ಎಂಜಲು ಸಾಲದ ಆ ಮುದ್ದೆಗೆ ಮುದ್ದೆಯೇ ಗಂಟಲಲ್ಲಿ ಸಿಕ್ಕಿಕೊಳ್ಳುತ್ತಿತ್ತು. ರೊಟ್ಟಿಯ ಮುದ್ದೆಯನ್ನು ಬಾಯಲ್ಲಿ ಇಟ್ಟು ಅಗಿಯುವಾಗ ಅಮೃತಾನ್ನದ ಅನುಭವ ಉಂಟಾಗುತ್ತಿತ್ತು. ಒಂದೊಂದು ತುತ್ತು ರೊಟ್ಟಿ ಹೊಟ್ಟೆಗೆ ಹೋದ ಕೂಡಲೇ ಅದೇ ರಕ್ತವಾಗಿ ಹೊಸ ಚೈತನ್ಯ ಬಂದಂತಾಗುತ್ತಿತ್ತು. ಹೊಟ್ಟೆಯಲ್ಲಿ ಆಹಾರ ಹೋಗುತ್ತಿದ್ದಾಗ ಆನಂದದ ಸಮಾಧಿ ಹತ್ತಿದಂತಿತ್ತು. ಎರಡು ದಿನಗಳಿಂದ ಹಸಿವೆಯಿಂದ ಕಂಗೆಟ್ಟಿದ್ದು ಮರೆತೇ ಹೋಯಿತು. ಹತ್ತಿರಿದ್ದ ಗೆಳೆಯರ ನೆನಪು ಕೂಡ ಆಗಲಿಲ್ಲ. ಬರೇ ಆನಂದದಲ್ಲಿ ಮುಳುಗಿ ಕೂತಂತಿತ್ತು.

ಆದರೆ ನನ್ನ ಕೈಲಿದ್ದ ಕಡೆಯ ರೊಟ್ಟಿಯ ತುಣುಕನ್ನು ನುಂಗಿದ ಮೇಲೆ ನನ್ನ ಆಸೆ ತೀರಲಿಲ್ಲ. ಮೊದಲಿಗಿಂತ ನೂರುಮಡಿ ಹೆಚ್ಚಾಗಿತ್ತು.

''ಅವನ ಹತ್ತಿರ ಇನ್ನೂ ಏನಾದರೂ ಇದ್ದಿರಲೇ ಬೇಕು'' ಎಂದು ಹತ್ತಿರವೇ ಕುಳಿತ ಸೋಲ್ಜರ್ ಬಾಯಿ ಚಪ್ಪರಿಸುತ್ತ ಹೇಳಿದ.

''ರೊಟ್ಟಿಗೆ ಮಾಂಸದ ವಾಸನೆ ಬರುತ್ತಿರಲಿಲ್ಲವೇ? ಅವನ ಹತ್ತಿರ

ಇವೆ. ನಾನು ಎವೆ ತಟ್ಟ ಹೇಳಬಲ್ಲೆ. ಅವನ ಹತ್ತಿರ ಪಿಸ್ತೂಲ್ ಇಲ್ಲದಿದ್ದರೆ ........"

"ಅವನು ಯಾರು ?"

"ಆಂ ?"

"ಅವನೋ ! ಸಮ್ಮಂಧವನೇ ಇರಬೇಕು."

" ಕುನ್ನಿ........ಕುನ್ನಿ".

ನಾವು ಕೂತುಕೊಂಡು ಆ ಕುಳಿತ ಮನುಷ್ಯನ ಕಡೆಗೇ ನೋಡುತ್ತ ಬಾಯಿ ತೆರೆದುಕೊಂಡು ಕೂತಿದ್ದೆವು. ಜೀವವಿಲ್ಲದ ಮುದ್ದೆಯಾಗಿ ಕೂತಿದ್ದ ಆ ಮನುಷ್ಯ.

ಕತ್ತಲೆ ಸಂಪೂರ್ಣವಾಗಿ ಕವಿದಿತ್ತು. ಸ್ಪೈಪಿಸ್‌ನಲ್ಲಿ ಪೂರ್ಣಶಾಂತಿ ಪಸರಿಸಿತ್ತು. ಒಬ್ಬರು ಉಸರಾಡಿಸುವದು ಇನ್ನೊಬ್ಬರಿಗೆ ಕೇಳಿಸುತ್ತಿತ್ತು. "ನಾವೆಲ್ಲ ಕೂಡಿಯೇ ಅವನಿದ್ದಲ್ಲಿಗೆ ಹೋಗೋಣ. ಅವನನ್ನು ಮುಟ್ಟುವದು ಬೇಡ. ಅವನಲ್ಲಿ ತಿನ್ನಲಿಕ್ಕೆ ಇದ್ದುದನ್ನು ತಂದುಬಿಡೋಣ. ಅವನು ಪಿಸ್ತೂಲು ಹಾರಿಸಿದರೆ ಹಾರಿಸಲಿ. ಸತ್ತರೆ ಒಬ್ಬನು ಸತ್ತಾನು. ಆ ಗುಂಡಾದರೂ ತಾಗಿಯೇ ತಾಗುತ್ತದೆಂದು ನಿಶ್ಚಯವಾದರೂ ಎಲ್ಲಿ" ಎಂದು ನಾನು ಸೂಚನೆ ಮಾಡಿದೆ.

"ಹೋಗೋಣ" ಎಂದು ಸೋಲ್ಜರ್ ಹೊರಟೇ ಬಿಟ್ಟ. ನಾವು ಅವನಿದ್ದಲ್ಲಿಗೆ ಓಡಿದೆವು. ವಿದ್ಯಾರ್ಥಿ ಹಿಂದೆ ಸಾವಕಾಶವಾಗಿ ಬರುತ್ತಿದ್ದ.

ಆ ಮನುಷ್ಯ ಕೆಮ್ಮಿದ. ಪಿಸ್ತೂಲಿನ ಕುದುರೆಯನ್ನು ಮಿಾಟಿದ. ಸಪ್ಪಳವಾಯಿತು. ಪ್ರಕಾಶ ಕಾಣಿಸಿತು. ಗುಂಡು ಹಾರಿದ ಸಪ್ಪಳ ಕೇಳಿಸಿತು "ತಪ್ಪಿತು" ಎಂದು ಕೂಗುತ್ತ ಸೋಲ್ಜರ್ ಒಂದೇ ಜಿಗಿತಕ್ಕೆ ಅವನನ್ನು ಹಿಡಿದ ವಿದ್ಯಾರ್ಥಿ ಚೀಲವನ್ನು ಕಸುಗೊಂಡ.

ಕೂತ ಮನುಷ್ಯ ಕೆಳಕ್ಕೆ ಬಿದ್ದ. ದೊಡ್ಡ ಉಸಿರು ಬಿಡಹತ್ತಿದ ಸೋಲ್ಜರನಿಗೆ ಆಶ್ಚರ್ಯವಾಯ್ತು. "ಏ, ಓ, ನೀನೇ ಗುಂಡು ಹಾಕಿಕೊಂಡಿಯೇನೋ ?" ಎಂದು ಕೇಳಿದ,

"ಇಲ್ಲಿ ಮಾಂಸವಿದೆ, ರೊಟ್ಟಿಯಿದೆ, ನೀರಿದೆ, ನೀವು ತಿನ್ನಿ" ಎಂದ ಆ ಮನುಷ್ಯ. ಉಸಿರನ್ನು ಎಳೆದುಕೊಳ್ಳುತ್ತಲೇ ಇದ್ದ.

"ನೀನು ಸತ್ತರೇನು, ಇದ್ದರೇನು, ಎರಡೂ ನಮಗೆ ಸಮ. ನಾವು ಇದ್ದುದನ್ನು ಖಾಲಿ ಮಾಡೋಣ ಬನ್ನಿ" ಎಂದು ಸೋಲ್ಜರ್ ವಿದ್ಯಾರ್ಥಿ ಕೂತಲ್ಲಿಗೆ ಬಂದ.

ನಾನು ಪಿಸ್ತೂಲನ್ನು ಕಸುಕೊಂಡಿದ್ದೆ. ಒಂದೇ ಗುಂಡು ಅದರಲ್ಲಿತ್ತು. ಮನುಷ್ಯ ಉಸಿರೆಳೆಯುವುದು ಕಡಮೆಯಾಗುತ್ತ ಬಂತು. ನಾವು ಮಾತ ನಾಡದೆ ತಿನ್ನುತ್ತಿದ್ದೆವು. ಆ ಮನುಷ್ಯ ಕಟ್ಟಿಗೆಯ ಹಾಗೆ ಬಿದ್ದಿದ್ದ. ನಾವು ಅವನನ್ನು ಒಂದಿಷ್ಟೂ ಗಣನೆಗೆ ತಂದುಕೊಳ್ಳಲಿಲ್ಲ "ರೊಟ್ಟಿಗಾಗಿ ಇಷ್ಟೆಲ್ಲ ಮಾಡಬೇಕಾಯ್ತೇ?" ಆ ಮನುಷ್ಯ ಕೇಳಿದ ಆ ನಡುಗುವ ಗಡಸು ದನಿಕೇಳಿ ನಾವು ಬೆಚ್ಚಿದೆವು. ವಿದ್ಯಾರ್ಥಿ ಗಂಟಲಲ್ಲಿ ತಿನ್ನುತ್ತಿದ್ದ ಮಾಂಸದ ತುಂಡು ಸಿಕ್ಕಿಕೊಂಡು ಅವನು ಕೆಮ್ಮತೊಡಗಿದ. ಸೋಲ್ಜರ್ ತಾನು ತಿನ್ನು ತ್ತಿದ್ದುದನ್ನು ಪೂರಾ ತೀರಿಸಿಕೊಂಡು ಮನಸ್ವೀ ಆತನನ್ನು ಬೈದ. "ಏನು ಹಾಗೆ ಕತ್ತೆಯಂತೆ ಮಾಡಿದರ? ನಾವು ನಿನ್ನನ್ನು ಕೊಲ್ಲಬೇಕೆಂದೆಣಿಸಿರು ವೆವೇ? ನಮಗೆ ಅದರಿಂದ ಏನೂ ಲಾಭವಿಲ್ಲ. ನಿನ್ನನ್ನೇನಾದರೂ ತಿನ್ನಲಿಕ್ಕೆ ಬರುತ್ತದೆಯೇ? ಕೈಲಿ ಪಿಸ್ತೂಲು ಹಿಡಿದು ಗುಂಡು ಹಾರಿಸಿ ಹೆದರಿಸುತ್ತಾನೆ ಕಳ್ಳ ಸೂಳೇಮಗ." ಅವನು ತಿನ್ನುತ್ತಿರುವಾಗ ಬೈಯುತ್ತಲೇ ಇರುತ್ತಿದ್ದ. ವಿದ್ಯಾರ್ಥಿ ಗಂಟಲನ್ನು ಸರಿಪಡಿಸಿಕೊಂಡು "ತಡೆ, ನಮ್ಮದಷ್ಟು ತಿಂದದ್ದು ಮುಗಿಯಲಿ ನಿನ್ನ ವಿಚಾರಕ್ಕೆ ಬರುತ್ತೇವೆ" ಎಂದ.

ನಿಶ್ಶಬ್ದ ರಾತ್ರಿಯಲ್ಲಿ ಅವನು ಜೀವ ಹೋಗುವ ಹಾಗೆ ಬಿಕ್ಕುತ್ತ ಅಳುವದು ನಮಗೆ ಭಯಂಕರ ಅನ್ನಿಸಿತು.

"ಅಣ್ಣಗಳಿರಾ, ನನಗೆ ಇಷ್ಟು ಗೊತ್ತಾಗಲಿಲ್ಲ! ನನಗೆ ಹೆದರಿಕೆ ಯಾದ್ದರಿಂದ ಗುಂಡು ಹಾರಿಸಿದೆ. ಕೋನ್ಯೋಆಫನದಿಂದ ಬರುತ್ತಿದ್ದೆ. ಸ್ಮೊಲೆನಸ್ಕ ಜಿಲ್ಲೆಯಲ್ಲಿ ...ಅಬ್ಬ ದೇವರೇ! ಜ್ವರ ಜೋರಾಗಿ ಬಂದಿತು........ ಸೂರ್ಯನು ಮುಳುಗಿದ. ಈಗ ನನ್ನ ಅವಸ್ಥೆ ಮುಗಿಯಿತು. ಜ್ವರ ಇದ್ದಾಗಲೇ ಆಫನದಿಂದ ಹೊರಟೆ. ಆಫನದ ಕಮ್ಮಾರ ನಾನು. ಮನೆಯಲ್ಲಿ ಹೆಂಡತಿ ........ ಎರಡು ಚಿಕ್ಕ ಚಿಕ್ಕ ಹುಡುಗಿಯರು ........ ಅವರನ್ನು ನೋಡಿ

ಮೂರು ವರ್ಷದ ಮೇಲಾಯಿತು........ನಿಮಗೆ ಸಿಕ್ಕಿದ್ದನ್ನು ನೀವು ತಿನ್ನಿ.... ಉಳಿಸಬೇಡಿ."

"ನೀನು ಹೇಳದಿದ್ದರೂ ಅದನ್ನು ಮಾಡುತ್ತಿದ್ದೇವಲ್ಲ!" ವಿದ್ಯಾರ್ಥಿಯೆಂದ.

"ದೇವರಾಣೆಯಾಗಿ ನೀವೆಲ್ಲ ಒಳ್ಳೆಯ ಜನವೆಂದು ಗೊತ್ತಾಗಲಿಲ್ಲ. ಗೊತ್ತಾಗಿದ್ದರೆ ಗುಂಡು ಹಾರಿಸುತ್ತಲೇ ಇದ್ದಿಲ್ಲ. ಈ ಸ್ಟೆಪಿಸ್‌ನಲ್ಲಿ ಹೇಗೆಂಬುದು ನಿಮಗೆ ಗೊತ್ತೇ ಇದೆಯಲ್ಲ ...ಅಂದಮೇಲೆ ನನ್ನದೇನು ತಪ್ಪು!" ಹೀಗೆ ಹೇಳುತ್ತಿರುವಾಗ ಅವನು ತ[illegible]ತ್ತಿದ್ದ ಅಂಜಿದವರಂತೆ ನಡುಗುವ ದನಿ ತೆಗೆಯುತ್ತಿದ್ದನೆನ್ನಬಹುದು. "ಏನು ಹೀಗೆ ಇವನು" ಸಿಪಾಯಿ ಬೇಸರದಿಂದ ಅಂದ.

ವಿದ್ಯಾರ್ಥಿ "ಇವನ ಹತ್ತಿರ ಸ್ವಲ್ಪ ಹಣಗಿಣ ಇರಬೇಕು" ಎಂದು ತರ್ಕಿಸಿದ.

ಸಿಪಾಯಿ ಅವನ ಕಡೆಗೆ ಅರೆತೆರೆದ ಕಣ್ಣುಗಳಿಂದ ನೋಡುತ್ತ "ಹೌದು ಹೌದು ... ..ಒಳ್ಳೇದು ಬೆಂಕಿಹೊತ್ತಿಸಿ ಮಲಗಿ ಬಿದ್ದುಕೊಳ್ಳುವ" ಎಂದ.

"ಮತ್ತೆ ಅವನು ? " ವಿದ್ಯಾರ್ಥಿ ಕೇಳಿದ.

ಅವನು ಸಾಯಲಿ ನಮಗೇಕೆ ಅವನ ಸುದ್ದಿ. ಸಾಯಲಿ" ಎನ್ನುತ್ತ ಮುಖ ತಿರುವಿದ.

ಕವ್ಮಾರನು ಪಿಸ್ತೂಲನ್ನು ಎತ್ತಿ ತೋರಿಸಿ ನಮ್ಮನ್ನು ತಡೆದ ಜಾಗದಲ್ಲಿಯೇ ತನ್ನ ಕೋಲುಗಳನ್ನಿಟ್ಟಿದ್ದ. ಹುಲ್ಲಿನ ಹಾಸಿಗೆಯನ್ನು ಬಿಚ್ಚಿಕೊಂಡಿದ್ದ. ಬೇಗ ಬೇಗ ಹೋಗಿ ಅವನ್ನೆಲ್ಲ ತಂದು ಬೆಂಕಿ ಹೊತ್ತಿಸಿ ಅದರ ಸುತ್ತಲೂ ಕುಳಿತೆವು. ರಾತ್ರಿಯ ತಂಪಾದ ಹವೆಯಲ್ಲಿ ಬೆಂಕಿ ಸಾವಕಾಶವಾಗಿ ಹೊತ್ತಿಕೊಂಡು ಉರಿಯತೊಡಗಿತು. ನಮ್ಮ ಸುತ್ತಮುತ್ತಲೆಲ್ಲ ಪ್ರಕಾಶವಾಯಿತು. ಸಾವಕಾಶವಾಗಿ ನಮಗೂ ಕಣ್ಣು ಎಳೆಯತೊಡಗಿತು. "ಗೆಳೆಯರೇ ?" ಆ ಕವ್ಮಾರ ನಮ್ಮನ್ನು ಕರೆದ. ನಮ್ಮಿಂದ ನಾಲ್ಕಾರು ಹೆಜ್ಜೆ ದೂರ ಅವನು ಬಿದ್ದಿದ್ದ. ಆಗಾಗ ಅವನು ತನ್ನಷ್ಟಕ್ಕೆ ತಾನೇ ಏನೋ ಗುಣುಗುಟ್ಟುತ್ತಿದ್ದ.

ಸಿಪಾಯಿ ಕೇಳಿದ "ಏನು ?"

"ನಾನೂ ನಿಮ್ಮ ಹತ್ತಿರ ಬರಲೇ ? ... ಬೆಂಕಿಯಹತ್ತಿರ....! ಸಾವಂತೂ

ಸಮಿಾಪಿಸಿದೆ....ಮೂಳೆ ಮೂಳೆಗಳೆಲ್ಲ ಕಿತ್ತುಹೋಗುವಂತೆ ವೇದನೆಯಾಗು ತ್ತಿದೆ...ಅಯ್ಯೋ....ಅಯ್ಯೋ ದೇವರೇ! ನಾನು ಇನ್ನು ಮನೆ ಮುಟ್ಟಲಾರೆ ....ಇನ್ನೆಂದೂ....ಇನ್ನೆಂದಿಗೂ....".

"ಇಲ್ಲಿ ತೆವಳಿಕೊಂಡು ಬಾ" ಎಂದ ವಿದ್ಯಾರ್ಥಿ.

ಕಸಮ್ಮಾರ ಕೈಕಾಲು ಮುರಿದು ಹೋಗುತ್ತಿದ್ದವರಂತೆ ಸಾವಕಾಶವಾಗಿ ಬೆಂಕಿಯ ಬಳಿ ಬಂದ. ಉದ್ದವಾದ ಕ್ಷೀಣದೇಹ. ವಸ್ತ್ರಗಳು ಮೈಮೇಲೆ ಜೋಲುತ್ತಿದ್ದವು. ಗುಳಿಬಿದ್ದ ಕಣ್ಣುಗಳೊಳಗಿಂದ ತೀಕ್ಷ್ಣವಾದ ದೃಷ್ಟಿ ಹೊರಬೀಳುತ್ತಿತ್ತು. ಅವನ ಮುಖಮುದ್ರೆ ಉರಿಯ ಬೆಳಕಿನಲ್ಲಿ ಬಹು ಭಯಾನಕವಾಗಿ ಕಾಣುತ್ತಿತ್ತು. ಮೈಯೆಲ್ಲ ನಡುಗುತ್ತಿತ್ತು. ಅವನನ್ನು ಕಂಡ ಮೇಲೆ ನಮ್ಮ ಬೇಸರದೊಡನೆ ದಯೆಯೂ ಮೂಡಿತು. ಬೆಂಕಿಯಲ್ಲಿ ಕೈಕಾಸಿ ಕೊಂಡು ಮೈಯೆಲ್ಲ ತಿಕ್ಕಿಕೊಳ್ಳತೊಡಗಿದ. ಅವನನ್ನು ಕಂಡರೆ ಅಂಜಿಕೆ ಬರುತ್ತಿತ್ತು.

"ಇಷ್ಟಾಗಿದ್ದರೂ ಕಾಲ್ನಡಿಗೆಯಲ್ಲಿ ಹೊರಟಿದ್ದೀಯಲ್ಲಾ! ದುಡ್ಡು ಖರ್ಚು ಮಾಡಿದರೆ ಜೀವ ಹೋಗುತ್ತಿತ್ತೇ?'' ಎಂದು ಸಿಪಾಯಿ ಕಠೋರತನ ದಿಂದ ಕೇಳಿದ.

''ಹಡಗಿನಲ್ಲಿ ಹೋಗುವದಕ್ಕಿಂತ ಕ್ರಿಮಿಯಾದ ಮೇಲಿಂದ ಹೋಗು ವದೇ ಒಳಿತೆಂದು ಜನ ಹೇಳಿದರು. ಇಲ್ಲಿಯ ಹವೆಯಿಂದ ನನ್ನ ಪ್ರಕೃತಿಗೂ ಒಳಿತು ಎಂದರು. ಆದರೆ ಈಗ ನನ್ನ ಕೈಕಾಲು ಸೋತು ನಡೆಯಲಾಗುವದಿಲ್ಲ .... ಈಗ ಸಾಯುತ್ತಿದ್ದೇನೆ. ಈ ಸ್ಟೆಪಿಸ್‌ನಲ್ಲಿ ಒಬ್ಬನೇ ಸಾಯುತ್ತಿದೇನೆ. ನನ್ನ ಮಾಂಸ ಹದ್ದು ಕಾಗೆಗಳ ಪಾಲಾಗುವದು. ಯಾರಿಗೂ ನನ್ನ ಸುದ್ದಿ ಸಹ ಸಿಗಲಿಕ್ಕಿಲ್ಲ ...ನನ್ನ ಹೆಂಡತಿ....ನನ್ನ ಹೆಣ್ಣು ಮಕ್ಕಳು.... ...ನನ್ನ ದಾರಿ ನೋಡುತ್ತಿದ್ದಾರೆ ನಾನು ಬರುತ್ತೇನೆಂದು. ಅವರಿಗೆ ಪತ್ರ ಬರೆದಿದ್ದೆ. ಆದರೆ ಈಗ ಈ ಸ್ಟೆಪಿಸ್‌ನಲ್ಲಿ ನನ್ನ ಎಲುಬು ಬೀಳುತ್ತದೆ. ದೇವರೇ!''

"ಬಾಯಿ ಮುಚ್ಚು" ಸಿಪಾಯಿ ತಟ್ಟನೆ ಜಿಗಿದು ನಿಂತು ಸಿಟ್ಟಿನಿಂದ ಹೇಳತೊಡಗಿದ—"ಯಾಕೆ ಇಷ್ಟು ಒದರುವದು. ಸುಮ್ಮನೆ ಮಲಗಲಿಕ್ಕೂ ಬಿಡುವದಿಲ್ಲ! ಸಾಯುವವನಿದ್ದರೆ ಸುಮ್ಮನೆ ಸಾಯಿ....ನಿನ್ನಿಂದ ನಮಗಿರುವ ಲಾಭವೂ ಅಷ್ಟೇ! ಸುಮ್ಮನಿರು.''

"ಕೊಡು ಅವನ ನೆತ್ತಿಯಮೇಲೆ ಎರಡು ಏಟು! ಸುಮ್ಮನೇ ಬಿದ್ದಿರಲಿ" ವಿದ್ಯಾರ್ಥಿ ಎಂದ.

"ಒಳ್ಳೇದು ಬನ್ನಿ. ಎಲ್ಲ ಮಲಗಿಕೊಳ್ಳೋಣ ಈಗ" ಎಂದೆ ನಾನು. ಬಾಕಿ ಎಲ್ಲಾ ಇರಲಿ, ಜೆಂಕಿ ಹತ್ತಿರ ಬಿದ್ದುಕೊಳ್ಳುವವು ಬೇಕಾಗಿದ್ದಾರೆ ನಿನ್ನ ಎಲ್ಲ ಕರಕರೆಯನ್ನು ಸಾಕುಮಾಡು. ಸುಮ್ಮನೇ ಬಿದ್ದುಕೋ! ನಾವೂ ಮಲಗಬೇಕು..ಕೇಳಿಸಿತೇನು?" ಸಿಪಾಯಿ ಕೆಂಪಾಗಿ ಕೇಳಿದ. "ಈಗಲಾದರೂ ತಿಳಿದುಕೋ ...ತುಸು ರೊಟ್ಟಿ ತಂದು ನಮಗೆ ಕೊಟ್ಟಿದ್ದೀ. ನಮ್ಮ ಮೇಲೆ ಗುಂಡು ಹಾರಿಸಿದಿ ಎಂದು ನಿನ್ನ ಮೇಲೆ ದಯೆ ತೋರಿಸಿ ಇಡೀ ದಿವಸ ತ್ರಾಸು ತೆಗೆದುಕೊಳ್ಳುತ್ತ ಇರಬೇಕೆಂದು ನಿನ್ನ ಹೇಳಿಕೆಯೋ? ನರಕದಲ್ಲಿ ಬಿದ್ದು ಸಾಯಿ ... ಜೇರೆಯವರಾಗಿದ್ದರೆ ..."

ಸಿಪಾಯಿ ಸುಮ್ಮನಾಗಿ ನೆಲದ ಮೇಲೆ ಬಿದ್ದುಕೊಂಡ.

ವಿದ್ಯಾರ್ಥಿ ಮೊದಲೇ ಮಲಗಿಕೊಂಡಿದ್ದ. ನಾನು ಮಲಗಿಕೊಂಡಿದ್ದೆ. ಕಮ್ಮಾರ ಮೆದರಿಕೆಯಿಂದ ಜೆಂಕಿಯ ಹತ್ತಿರ ಮುದುರಿ ಮುದ್ದೆಯಾಗಿ ಜೆಂಕಿ ನೋಡುತ್ತ ಸುಮ್ಮನೆ ಕುಳಿತ. ನಾನು ಅವನ ಬಲಕ್ಕೆ ಮಲಗಿದ್ದೆ. ಅವನ ಹಲ್ಲುಗಳ ಕಟಕಟ ಕಡಿಯುವ ಶಬ್ದ ಕೇಳುತ್ತಿತ್ತು. ಸಿಪಾಯಿ ಕೈಯ ಮೇಲೆ ತಲೆಯಿಟ್ಟು ಅಂಗಾತ ಮಲಗಿ ನಕ್ಷತ್ರ ಎಣಿಸುತ್ತಿದ್ದ.

ತುಸುಹೊತ್ತು ಸುಮ್ಮನಿದ್ದು ನನ್ನ ಕಡೆಗೆ ಮೋರೆ ಮಾಡಿ ಅವನೆಂದ. "ರಾತ್ರಿ ಎಷ್ಟು ಚೆನ್ನಾಗಿದೆ. ಎಷ್ಟು ಸುಂದರವಾಗಿ ಹೊಳೆಯುತ್ತಿವೆ ನಕ್ಷತ್ರಗಳು! ಆಕಾರ ಎಷ್ಟು ನಿರಭ್ರವಾಗಿದೆ. ಹವೆ ಎಷ್ಟು ಬೆಚ್ಚಗಿದೆ. ಆಕಾಶವೇ ಹೊದೆಯುವ ಕಂಬಳಿಯಾಗಿವೆ ನನಗೆ... ತಿರುಗಾಟದ ಜೀವನ ಒಳಿತೆಂದು ಅನ್ನಿಸುತ್ತದೆ. ಆದರೆ ಸ್ವಲ್ಪ ಕಷ್ಟ ಸಹಿಸಬೇಕು. ಹೊಟ್ಟೆಗಿಲ್ಲದೆ ಸಾಯಲೂ ಬೇಕು ಒಮ್ಮೊಮ್ಮೆ. ಆದರೇನು! ಸ್ವಾತಂತ್ರ್ಯವಿದೆ. ಸಂಪೂರ್ಣ ಸ್ವಾತಂತ್ರ್ಯ ....ನಿಮ್ಮ ಮೇಲೆ ಅಧಿಕಾರ ವಹಿಸುವವರು ಇಲ್ಲಿ ಯಾರೂ ಇಲ್ಲ. ನಿಮ್ಮ ಹಣೇ ಬರಹ ನಿಮ್ಮ ಕೈಲಿವೆ. ಜೀವ ಬಿಡುತ್ತೇವೆಂದರೂ ಯಾರೂ ಏನೂ ಹೇಳುವವರಿಲ್ಲ. ಇದೇ ಬಹಳ ಒಳ್ಳೇದು ... ಈ ಎರಡು ಮೂರು ದಿನ ಹೊಟ್ಟೆಗೇನೂ ಇಲ್ಲದೆ ತಲೆ ಕಾದು ಹೋಗಿತ್ತು ಆದರೆ ಈಗ ಆರಾಮಾಗಿ ಬಿದ್ದುಕೊಂಡು ಆಕಾಶವನ್ನು ನೋಡುತ್ತ ಇದ್ದೇನೆ. ಏ, ಲಿಕುಟಿನ್! ಇಂಥ

ಜೀವನದಲ್ಲಿ ಕೆಡುಕಿಲ್ಲ. ಜಗತ್ತನ್ನೆಲ್ಲ ತಿರುಗಿ ಕಲಿಯಬೇಕಾದುದನ್ನೆಲ್ಲ ಕಲಿ. ಯಾರ ಅಧೀನವೂ ಬೇಡ ಎಂದು ನಕ್ಷತ್ರಗಳು ಕೈಮಾಡಿ ನಮಗೆ ಹೇಳುವಂತಿದೆ....ಹೌದು....ಇದರಿಂದ ಮನಸ್ಸಿಗೆ ಬಹಳ ಆನಂದ....ನಿನ್ನ ಪರಿಸ್ಥಿತಿ ಏನಾಗಿ ಹೋಯಿತು ನಮ್ಮಿಂದ! ನಾನು ಬಿರುಸು ಮಾತನಾಡಿದೆನೆಂದು ಸಿಟ್ಟಿಗೇಳಬೇಡ. ನೀನು ಯಾವದರ ವಿಷಯವೂ ಹೆದರುವದು ಬೇಡ. ನಾವು ನಿನ್ನ ರೊಟ್ಟಿಯನ್ನು ತಿಂದೆವೇ ಹೊರತು ನಿನಗೆ ತೊಂದರೆ ಕೊಡಬೇಕೆಂದಿದ್ದಿಲ್ಲ. ನಿನ್ನ ಹತ್ತರ ರೊಟ್ಟಿಯಿತ್ತು. ನಮ್ಮ ಹತ್ತರ ಇರಲಿಲ್ಲ. ಅದು ನಮಗೆ ಬೇಕಾಗಿತ್ತು. ನಾವು ತಿಂದೆವು...ನೀನು ಮಾತ್ರ ಅದಕ್ಕಾಗಿ ನಮ್ಮ ಮೇಲೆ ಗುಂಡು ಹಾರಿಸಿದೆ. ಗುಂಡು ತಾಗಿದ್ದರೆ ನಾವು ಸತ್ತೇ ಹೋಗುತ್ತಿದ್ದೆವು. ಈಗ ನಿನ್ನ ಹತ್ತಿರ ಇರುವ ರೊಟ್ಟಿ ಪರಕೊಪ್ಪಕ್ಕೆ ಹೋಗುವದಕ್ಕೆ ನಿನಗೆ ಸಾಕು. ಅಲ್ಲ ಮತ್ತೆ ಸ್ವಲ್ಪ ಖರೀದಿ ಮಾಡು. ನಿನ್ನ ಹತ್ತಿರ ದುಡ್ಡಿರಬೇಕು:—ನಿನಗೆ ಯಾವಾಗಿನಿಂದ ಜ್ವರ ಬರಹತ್ತಿದೆ?"

ಬಹಳ ಹೊತ್ತಿನ ತನಕ ಗಂಭೀರ ನಿನಾದ. ಜತೆಗೆ ಕಮ್ಮಾರನ ನರಳುವ ದನಿ ನನ್ನ ಕಿವಿಗೆ ಕೇಳುತ್ತಲೇ ಇತ್ತು. ರಾತ್ರಿ ಹೆಚ್ಚಿಗೆ ಕತ್ತಲೆಯುನ್ನುಂಟು ಮಾಡುತ್ತ ನಡೆಯಿತು. ಪ್ರಶಾಂತ ಹವೆಯಲ್ಲಿ ಉಸಿರಾಡಿಸುತ್ತ ಬಿದ್ದಿರುವದು ಆನಂದವನ್ನುಂಟುಮಾಡುತ್ತದೆ. ಬೆಂಕಿಯ ಬೆಳಕು ಎಲ್ಲ ಕಡೆಗೆ ಹಬ್ಬಿತ್ತು. ಅದರಿಂದುಂಟಾದ ಬೆಚ್ಚಗಿನ ವಾತಾವರಣ ಆಹ್ಲಾದಕರವಾಗಿತ್ತು. ಕಣ್ಣು ಭಾರವಾಗಹತ್ತಿತ್ತು.

* * * *

"ಏಳ್, ಏಳೋ ಬೇಗ! ಬೇಗ ಹೋಗಬೇಕು!"

ಬೆದರಿ ಕಣ್ಣುಬಿಟ್ಟು ಟಣ್ಣನೆ ಚಿಗಿದು ನಿಂತೆ. ಸಿಪಾಯಿ ನನ್ನ ಕೈ ಹಿಡಿದು ಎಳೆಯತೊಡಗಿದ್ದ. "ಏಳು, ಹೊರಡು". ಅವನ ಮೋರೆ ಗಂಭೀರವಾಗಿತ್ತು. ತುಸು ಬೆದರಿದವನಂತಿತ್ತು. ನಾನು ನಾಲ್ಕೂ ಕಡೆಗೆ ನೋಡಿದೆ. ಸೂರ್ಯ ಉದಯಿಸತೊಡಗಿದ್ದ. ಕಮ್ಮಾರ ನಿಶ್ಚೇಷ್ಟನಾಗಿ ಬಿದ್ದಿದ್ದ. ಅವನ ಮೈಮೇಲೆ ಸೂರ್ಯ ಕಿರಣಬಿದ್ದಿತು. ಬಾಯಿ ತೆರೆದಿತ್ತು. ಕಣ್ಣು ಅರೆ ತೆರೆದಿತ್ತು. ಅವನ ಎದೆಯ ಮೇಲಿನ ಅರಿವೆಗಳೆಲ್ಲ ಹರಿದಿತ್ತು. ಅವನು

ಬಿದ್ದಿರುವ ರೀತಿ ಭಯವನ್ನು ಹುಟ್ಟಿಸುತ್ತಿತ್ತು. ಆದರೆ ವಿದ್ಯಾರ್ಥಿ ಇರಲೇ ಇಲ್ಲ. ಕಣ್ಣಿಗೆ ಕಾಣಲಿಲ್ಲ.

"ನೋಡಿದ್ದು ಸಾಕು, ತಡವಾಯಿತು, ಕೇಳಿತೇನೋ?" ಸಿಪಾಯಿ ಅರ್ಥಪೂರ್ಣ ಧ್ವನಿಯಲ್ಲಿ ಒತ್ತಿ ಹೇಳಿದ.

"ಇವನು ಸತ್ತು ಹೋದನೇ?" ಬೆಳಗಿನ ಛಂಡಿಯಲ್ಲಿ ನನಗೇ ನಡುಕ ಬಂದಿತ್ತು.

"ಕಣ್ಣಿಗೆ ಕಾಣುವುದಿಲ್ಲವೇ? ನಿನ್ನ ಕುತ್ತಿಗೆಯನ್ನು ಹಿಚುಕಿದರೆ ನೀನೂ ಹೀಗೇ ಸಾಯುತ್ತೀ?"

"ವಿದ್ಯಾರ್ಥಿ....?" ನಾನು ಆಶ್ಚರ್ಯದಿಂದ ಕೇಳಿದೆ.

"ಮತ್ತೆ ಯಾರು? ನೀನಾಗಲೀ ನಾನಾಗಲೀ ಆಗಬೇಕು. ಅವನು ಇದನ್ನು ಸರಿಗೊಳಿಸಿ ನಮ್ಮಿಬ್ಬರಿಗೆ ಮೋಸಮಾಡಿ ಪಾರಾದ. ನನಗೆ ಸ್ವಲ್ಪ ಸಂಶಯ ಬಂದಿದ್ದರೆ ಆ ವಿದ್ಯಾರ್ಥಿಯನ್ನು ನಿನ್ನೆಯೇ ನಾನು ತೀರಿಸಿ ಬಿಡುತ್ತಿದ್ದೆ ಒಂದೇ ಹೊಡೆತಕ್ಕೆ. ಭೂಮಿಯಮೇಲೆ ಒಬ್ಬ ಬದಮಾಷ ಕಡಿಮೆಯಾಗುತ್ತಿದ್ದ ಅಷ್ಟೇ! ಏನು ಮಾಡಿಬಿಟ್ಟೆ ನೋಡಿದೆಯೋ ಇಲ್ಲವೋ? ಈಗ ಈ ಸ್ಟೆಪಿಸ್‌ನಲ್ಲಿ ನಾವು ಯಾರಿಗೂ ಕಾಣಿಸಿಕೊಳ್ಳಬಾರದು. ತಿಳಿಯಿತೇನು? ಈ ಹೊತ್ತು ಇವನನ್ನು ನೋಡುತ್ತಾರೆ; ಕುತ್ತಿಗೆ ಹಿಚುಕಿ ಲೂಟಿಮಾಡಿದ್ದು ಕಾಣುತ್ತಾರೆ. ಅಪರ ದೆಸೆಯಿಂದ ನಮ್ಮಂತಹ ಜನರನ್ನು ಹುಡುಕುತ್ತಾರೆ.

'ನೀವು ಯಾರು ಎಲ್ಲಿ ಹೋಗುತ್ತೀರಿ ರಾತ್ರಿ ಎಲ್ಲಿ ಕಳೆದಿರಿ' ಎಂದು ಕೇಳತೊಡಗುವರು; ಕಡೆಗೆ ನಮ್ಮನ್ನು ಹಿಡಿದು ಹಾಕುವರು ನನ್ನ ನಿನ್ನ ಹತ್ತಿರ ಏನೂ ಇಲ್ಲ ಅನ್ನು. ಆದರೂ ನನ್ನ ಹತ್ತಿರ ರಿವ್ವಾಲ್ವರ್ ಇದೆ. ನಾವೇ ಎಂದು ಅವರು ತಿಳಿದುಕೊಳ್ಳಲಿಕ್ಕೆ ಸಾಕು ಇದು." "ಚಲ್ಲಿಬಿಡು ಅದನ್ನು" ಎಂದು ಸೂಚಿಸಿದೆ ನಾನು. "ಚಲ್ಲಿಬಿಡಲೇ" ಅವನಿಗೆ ವಿಚಾರಕ್ಕೆ ಹತ್ತಿಕೊಂಡಿತು. ಕಡೆಗೆ ಹೇಳಿದ "ಬೆಲೆ ಬಾಳುವಂತಹದ್ದು. ಯಾರೂ ನಮ್ಮನ್ನು ಹಿಡಿಯಲಾರರು. ಬೇಡ ಬೇಡ ಇದನ್ನು ಒಕ್ಕೊಡುವದಿಲ್ಲ. ಕವಮ್ಮಾರನ ಹತ್ತರ ರಿವಾಲ್ವರ್ ಇತ್ತೆಂದು ಯಾರಿಗೂ ಗೊತ್ತಿಲ್ಲ. ಇದರ ಬೆಲೆ ಸುಮಾರು ೨ ರುಬೆಲ್ಲಾದರೂ ಇರಬೇಕು. ಗುಂಡುಗಳೂ ಒಂದೆರಡು ಇದರಲ್ಲಿ ಇರಬೇಕು. ಇದರಿಂದ ಆ ಕಳ್ಳ ವಿದ್ಯಾರ್ಥಿಯನ್ನು ಹೊಡೆದು ಹಾಕಿದರೆ

ಸಮಾಧಾನ. ನಾಯಿ. ಎಷ್ಟು ರೂಪಾಯಿ ತೆಗೆದುಕೊಂಡು ಪಾರಾದನೋ ಹಂದಿ–ಹಂದಿ".

"ಅವನ ಹೆಂಡತಿ ಮಕ್ಕಳ ಗತಿಯೇನು ?" ನಾನು ತುಸು ಧೈರ್ಯ ಮಾಡಿ ಕೇಳಿದೆ.

"ಹೆಣ್ಣುಮಕ್ಕಳು ? ಯಾವ ಹೆಣ್ಣು ಮಕ್ಕಳು ? ಓಹೋ ಕಮ್ಮಾರನ ಹೆಣ್ಣು ಮಕ್ಕಳೇ ? ಅವರು ಬೆಳೆದು ದೊಡ್ಡವರಾದಮೇಲೆ ಮದುವೆ ಮಾಡಿ ಕೊಂಡಾರು. ಇದರ ಹೊರತು ಅವರ ವಿಷಯಕ್ಕೆ ಈಗೇನು ಹೇಳುವದು ? ಬಾರಣ್ಣ. ಬಾ ಹೋಗೋಣ. ತಡವಾಯಿತು. ಯಾವ ರಸ್ತೆ ಹಿಡಿಯು ವದು ?"

"ನನಗೆ ಗೊತ್ತಿಲ್ಲ ಯಾವ ದಾರಿಯಿಂದ ಹೋದರೂ ಒಂದೇ !"

"ನನಗೂ ಗೊತ್ತಿಲ್ಲ. ತಿಳಿದರೂ ಲಾಭವೇನು ? ಆಗಲಿ ! ಬಾ–ಈ ರಸ್ತೆಯಿಂದಲೇ ಹೋಗೋಣ. ಹತ್ತಿರ ಸಮುದ್ರ ಸಿಗಬಹುದು."

ನಾವು ಬಲಬದಿಗೆ ತಿರುಗಿದೆವು.

ನಾನು ಒಮ್ಮೆ ಹಿಂತಿರುಗಿ ನೋಡಿದೆ. ದೂರದಲ್ಲಿ ಕಪ್ಪು ದಿಣ್ಣೆ ಇತ್ತು. ಸೂರ್ಯ ಅದನ್ನು ಹತ್ತಿ ತುಳಿವಂತಿತ್ತು.

"ಅವನು ಎದ್ದುಗಿದ್ದು ಬಿಟ್ಟನೆಂದು ನೋಡುತ್ತೀಯೇನು ? ಹೆದರ ಬೇಡ. ಅವನು ನಮ್ಮ ಬೆನ್ನು ಹಿಡಿದು ಬರಲಿಕ್ಕಿಲ್ಲ. ನಮ್ಮ ಆ ವಿದ್ಯಾರ್ಥಿ ಮಹಾರಾಯ ಅವನನ್ನು ಚೆನ್ನಾಗಿ ಮುಗಿಸಿ ಬಿಟ್ಟಿದ್ದಾನೆ. ಗೆಳೆಯನೆಂದರೆ ಹೀಗಿರಬೇಕು. ಅವನು ನಮಗೆ ಪೂರಾ ಮೋಸ ಮಾಡಿದ. ಈಗ ವರುಷ ವರುಷಕ್ಕೆ ಜನ ಹೆಚ್ಚು ಕೆಡುತ್ತಿದ್ದಾರಪ್ಪ" ಸಿಪಾಯಿ ಖೇದಪೂರ್ಣ ಸ್ವರದಿಂದ ಹೇಳಿದ. ನಿಸ್ತಬ್ಧವಾದ ಸ್ಟೆಪಿಸ್‌ನಲ್ಲಿ ಉಜ್ವಲವಾದ ಸೂರ್ಯಪ್ರಕಾಶ ಬೀಳ ತೊಡಗಿತು. ಕ್ಷಿತಿಜದಲ್ಲಿ ಆಕಾಶ ಸ್ಟೆಪಿಸ್ ಮುಟ್ಟುವಂತೆ ಕಾಣುತ್ತಿತ್ತು.

ನೀಲವಾದ ಆಕಾಶದ ಕೆಳಗೆ ಹಬ್ಬಿರುವ ಸ್ಟೆಪಿಸ್‌ನಲ್ಲಿ ಪ್ರತಿಯೊಂದು ವಸ್ತು ಶುದ್ಧ ಸೌಂದರ್ಯದಿಂದ ಕಾಣುತ್ತಿತ್ತು. ಆಗ ಯಾವ ದುಷ್ಕರ್ಮದ ಕಲ್ಪನೆ ಕೂಡ ಮೂಡುತ್ತಿರಲಿಲ್ಲ. "ಏನಾದರೂ ಆಗಿಯಲಿಕ್ಕೆ ಬೇಕಣ್ಣ ನನಗೆ" ಸನ್ನ ಹಳ್ಳಿಯ ಅಗ್ಗದ ಸಿಗಾರಿನಿಂದ ತಂಬಾಕು ಬಿಚ್ಚುತ್ತ ಹೇಳಿದೆ.

"ಈ ಹೊತ್ತು ನಾವು ಎಲ್ಲಿ, ಹೇಗೆ ಏನನ್ನು ತಿನ್ನಬಹುದೆಂದು ಯಾರಿಗೂ ಹೇಳಲಿಕ್ಕೆ ಸಾಧ್ಯವಿಲ್ಲ".

* * * *

ಆಸ್ಪತ್ರೆಯಲ್ಲಿ ನನ್ನ ಆಚೆಗೆ ಮಲಗಿದ ರೋಗಿ ಮೇಲೆ ಹೇಳಿದ ಕತೆ ಹೇಳಿದ ಮತ್ತು ಮುಂದೆ—"ಆಯಿತು ಕಥೆ ಇಷ್ಟೇ! ನನಗೂ ಸಿಪಾಯಿಗೂ ಬಹಳ ಗೆಳೆತನವಾಯಿತು. ನಾವಿಬ್ಬರೂ ಕೂಡಿ ಕಾರಸ್ಕೀ ಪ್ರಾಂತ್ಯದವರೆಗೆ ಹೋದೆವು. ಬರೀ ಕಾಲಿನಿಂದ ತಿರುಗುವ ಖಾನಬ ದೇಶದವರಂತೆ ಬಹಳ ದಯಾಳು ಮತ್ತು ವ್ಯವಹಾರಸ್ಥ ಆವನು. ನನಗೆ ಅವನ ವಿಷಯದಲ್ಲಿ ಬಹಳ ಪೂಜ್ಯತೆಯಿದೆ. ಏಶಿಯಾಮೈನರ ತನಕ ನಾವಿಬ್ಬರೂ ಹೋದೆವು. ಅಲ್ಲಿ ಅಗಲಿವೆವು.... ...".

"ಯಾವಾಗಲಾದರೂ ಕಮ್ಮಾರನ ವಿಚಾರ ಮಾಡುತ್ತೀರಾ ?"

"ಇಷ್ಟೇ! ನೀವು ಕೇಳಿದ್ದೀರಲ್ಲ. ಅಷ್ಟೇ!"

"ಅಷ್ಟೇ ?"

ಅವನು ನಗತೊಡಗಿದ.

"ನಾನು ಅವನ ವಿಷಯ ಏಕೆ ವಿಚಾರ ಮಾಡುವುದು ? ಆಗಿ ಹೋದದ್ದರಲ್ಲಿ ನನ್ನದೇನೂ ಅಂಗವಿಲ್ಲ. ನನ್ನ ಮೇಲೆ ದೋಷ ಹೊರೆಸುವದಾದರೆ ನೀವೂ ಅಷ್ಟೇ ದೋಷಿಗಳಾಗುವಿರಿ. ಎಲ್ಲರೂ ಪಶುಗಳಾಗಿರುವಾಗ ಯಾರಿಗೆ ಯಾರೂ ದೋಷ ಕೊಡಲಾಗುವದಿಲ್ಲ" ಎಂದ.

# ಗುಪ್ತ ಧನ *

ಅನುವಾದಕ : ಕೆ. ಜಿ. ರಾಮಚಂದ್ರರಾಯ

ಬೆಟ್ಟದ ತಪ್ಪಲಿನ ರಸ್ತೆಯ ಪಕ್ಕದಲ್ಲಿ ಕುರಿಮುಂದೆಯ ಬೀಡು. ಇಬ್ಬರು ಕುರುಬರು ಈ ಕುರಿ ಮಂದೆಯನ್ನು ಕಾಯುತ್ತಿದ್ದರು. ಒಬ್ಬನಿಗೆ ಸುಮಾರು ೮೦ ವರ್ಷ, ಹಣ್ಣಣ್ಣು ಮುದುಕ, ಹಲ್ಲುಬಿದ್ದು ನಡುಗುತ್ತಿರುವ ದವಡೆಗಳು, ಗುಳಿಬಿದ್ದ ಕೆನ್ನೆಗಳು. ನೆಲದಕಡೆ ಮುಖಮಾಡಿ ನಡುರಸ್ತೆಯಲ್ಲಿ ಮಲಗಿದ್ದಾನೆ. ಆತನ ಕೈಗಳೇ ತಲೆದಿಂಬು. ಇನ್ನೊಬ್ಬ ಕೇವಲ ಯುವಕ. ತುಂಬಿದ ಹಣೆ. ತುಟಿಯ ಮೇಲೆ ಇನ್ನೂ ಕೂದಲು ಚಿಗರಿಲ್ಲ. ಗೋಣೀಪಟ್ಟೆಯ ಬಟ್ಟೆಯನ್ನು ಹೊದೆದಿದ್ದಾನೆ. ತನ್ನ ಎರಡು ಕೈಗಳನ್ನೂ ತಲೆಯ ಕೆಳಗಿಟ್ಟುಕೊಂಡು, ನೀಲಾಕಾಶವನ್ನು ನೋಡುತ್ತಾ, ಏನೋ ದೀರ್ಘಾಲೋಚನೆಯಲ್ಲಿರುವವನಂತೆ ಮಲಗಿದ್ದಾನೆ.

ಈ ಕುರುಬರಿಬ್ಬರೇ ಒಂಟಿಯಾಗಿರಲಿಲ್ಲ. ಅವರಿಗೆ ಕೇವಲ ಸಮೀಪದಲ್ಲಿಯೇ ಜೀನುಹಾಕಿ ಸಿದ್ಧವಾಗಿದ್ದ ಕುದುರೆಯೊಂದನ್ನು ಒರಗಿಕೊಂಡು ಸವಾರನೊಬ್ಬನು ನಿಂತಿದ್ದಾನೆ. ಅವನು ಧರಿಸಿರುವ ಉಡುಪು, ಅವನ ಕಾಲಿನಲ್ಲಿರುವ ಜೋಡುಗಳನ್ನು ನೋಡಿದರೆ ಅವನು ಯಾರೋ ಒಬ್ಬ ದೊಡ್ಡ ಮನುಷ್ಯನ ಪ್ರತಿನಿಧಿ ಇರಬಹುದೆಂದು ತೋರುತ್ತಿತ್ತು.

ಕುರಿಗಳು ಹಾಗೆಯೇ ಮಲಗಿವೆ, ಎಲ್ಲಿಯೋ ಅಲ್ಲೊಂದು, ಇಲ್ಲೊಂದು ನಿಂತು ತಲೆಬಾಗಿ ಯೋಚಿಸುತ್ತಿರುವಂತೆ ಕಾಣುವ ಕುರಿಗಳ ನೆರಳು ಮಾತ್ರ ಬಿದ್ದಿದೆ. ಆಯಾ ಜಾಗಗಳಲ್ಲಿ ಅವುಗಳು ಅಲ್ಲಾಡದಂತೆ ನಿಂತಿರುವುದನ್ನು ನೋಡಿದರೆ ಅಲ್ಲಿಯೇ ಅಂಟಿಸಿ ಬಿಟ್ಟಿದ್ದಾರೆಯೋ ಎನ್ನುವಂತೆ ಭಾಸವಾಗುತಿತ್ತು. ಎದುರಿಗೆ ನಿಂತಿರುವ ಮನುಷ್ಯನ ವಿಷಯದಲ್ಲಾಗಲಿ ಅಥವಾ ದೂರದಲ್ಲಿ ಬಗಳುತ್ತಿರುವ ನಾಯಿಗಳ ಕಡೆಗಾಗಲಿ ಲಕ್ಷ್ಯವಿದ್ದಂತೆ ಕಾಣಲಿಲ್ಲ.

---

* Secret Treasure

ಸಾಧಾರಣವಾಗಿ ಬೇಸಿಗೆಯ ರಾತ್ರಿಯಲ್ಲಿ ಆಗುವ ಎಲ್ಲಾ ಶಬ್ದಗಳೂ ಆ ಬೆಟ್ಟದ ತಪ್ಪಲಿನಲ್ಲಿ ಆಗುತಿತ್ತು. ಒಂದೆಡೆಯಲ್ಲಿ ಮಿಡತೆಗಳ ಧ್ವನಿ. ಮತ್ತೊಂದೆಡೆ ಲಾವಕ್ಕಿಗಳ ನಿನಾದ, ಸ್ವಲ್ಪ ದೂರದಲ್ಲಿಯೇ ಗಿರಿಕಂದರಗಳಲ್ಲಿ ಹರಿದು ಬರುತ್ತಿರುವ ಹೊಳೆಯ ಮೊರೆ, ಅದರೊಡನೆ ಬೆರತು ಹಾಡುತ್ತಿರುವ ಕೋಗಿಲೆಯ ಧ್ವನಿ.

ಇಂತಹ ಅವೇಳೆಯಲ್ಲಿ ಪ್ರಯಾಣಿಕನು ಹಾಗೆಯೇ ನಿಂತು ಎದುರಿಗಿದ್ದ ಕುರುಬನನ್ನು ಕೇಳಿ ಬೆಂಕಿಯಕಡ್ಡಿಯನ್ನು ತೆಗೆದುಕೊಂಡು ಅದರ ಸಹಾಯ ದಿಂದ ತನ್ನ ಚುಟ್ಟಾ ಹತ್ತಿಸಿಕೊಂಡು ಯಾವ ಮಾತನ್ನೂ ಆಡದೆ ತನ್ನ ಕುದುರೆಗೆ ಒರಗಿಕೊಂಡು ಹಾಗೆಯೇ ಹೊಗೆ ಬಿಡುತ್ತಾ ನಿಂತನು.

ಪಕ್ಕದಲ್ಲಿಯೇ ಮಲಗಿದ್ದ ಯುವಕನು ಇವು ಯಾವುದಕ್ಕೂ ತನ್ನ ಗಮನವನ್ನು ಕೊಟ್ಟಂತೆ ಕಾಣಲಿಲ್ಲ. ಮೊದಲಿನಂತೆ ಈಗಲೂ ಹಾಗೆಯೇ ಗಗನವನ್ನು ನೋಡುತ್ತಾ ಮಲಗಿದ್ದನು. ಮುದುಕನು ಮಾತ್ರ ಒಂದು ರೀತಿಯ ಕುತೂಹಲದಿಂದ ಒಂದಾವರ್ತಿ ಆ ಪ್ರಯಾಣಿಕನನ್ನು ಮೇಲಿನಿಂದ ಕೆಳಗಿನವರೆಗೂ ನೋಡಿ

''ನೀವು ಮೊಕರಾವ್ ಜಮಿನ್ದಾರಿಯವರ ಕಡೆಯವರಲ್ಲವೆ ?''

''ಹೌದು'' ಎಂದು ಪ್ರಯಾಣಿಕ ಉತ್ತರಕೊಟ್ಟ.

''ಅಷ್ಟು ಖಂಡಿತವಲ್ಲದಿದ್ದರೂ, ಹಾಗೆಯೇ ಇರಬಹುದೆಂದುಕೊಂ ಡಿದ್ದೆ. ತಾವು ದೊಡ್ಡ ಆಸ್ತಿವಂತರ ಕಡೆಯಿಂದ ಬಂದಿರಬೇಕು. ನಿಮ್ಮದು ಯಾವ ಸ್ಥಳ.''

''ಕೋವಿಲ್''

"ಬಹಳ ದೂರವಾಯಿತು. ಅಲ್ಲಿ ನಿಮ್ಮ ಭೂಮಿಗಳನ್ನು ಯಾವ ರೀತಿ ಬೇಸಾಯಕ್ಕೆ ಕೊಡುತ್ತಿದ್ದೀರಿ ? ಕಾಳುಕಡ್ಡಿಗೆ ತಾನೆ?''

"'ಕಾಳಿಗೂ ಮತ್ತು ಗುತ್ತಿಗೆಯ ಹಣಕ್ಕೂ ಕೊಡುತ್ತಿದ್ದೇವೆ. ಕೆಲವು ವೇಳೆ ಕೆಕ್ಕರೆ ಹಣ್ಣು, ಕಲ್ಲಂಗಡಿ ಮುಂತಾದ ಫಲಗಳನ್ನು ಬೆಳೆಯುವುದಕ್ಕೂ ಕೊಡುತ್ತಲಿದ್ದೇವೆ."

ಇವರ ಸಂಭಾಷಣೆಯ ಮಧ್ಯೆ ಕುರುಬರಿಗೆ ಸೇರಿದ ಮುದಿ ಜೂಲು ನಾಯಿ ಅವರ ಕಡೆಗೆ ಬಂದು, ನಿಂತಿದ್ದ ಕುದುರೆಯನ್ನು ಒಂದಾವರ್ತಿ

ಸುತ್ತುಹಾಕಿ, ಹೊಸಬನ ಮುಖವನ್ನು ನೋಡಿ ರೌದ್ರಾವತಾರದಿಂದ ಬಗುಳ ಲಾರಂಭಿಸಿ ಸವಾರನ ಮೇಲೆ ಬೀಳುವಂತೆ ಹಾರಿಬಂತು. ದೂರದಲ್ಲಿದ್ದ ಇತರ ನಾಯಿಗಳೂ, ಇದರ ಧ್ವನಿಗೆ ಧ್ವನಿಗೂಡಿಸಿ ತಾವೂ ಆಯಾಯ ಜಾಗ ಗಳಲ್ಲಿದ್ದೇವೆ ಎಂಬುದನ್ನು ತೋರ್ಪಡಿಸಲು ಬಗುಳಲಾರಂಭಿಸಿದವು. ಮಲ ಗಿದ್ದ ಮುದುಕನಿಗೆ ಇದು ನೋಡಿ ಬೇಜಾರಾಗಿ ಮಲಗಿದ್ದವನು ತಲೆಯೆತ್ತಿ "ದೂರ ಹೋಗು, ಪಿಶಾಚಿ" ಎಂದೊಮ್ಮೆ ಕೂಗಿದನು. ನಾಯಿಗಳು ಹೊರಟುಹೋದ ಮೇಲೆ ಪುನಃ ಮೊದಲಿನಂತೆಯೇ ಮಲಗಿ ಮಾತನಾಡ ಲಾರಂಭಿಸಿದನು.

"'ಕ್ರೈಸ್ತನ ರಾಜ್ಯಾರೋಹಣದ ದಿನ' ಕೋವಿಲ್ ನಗರದಲ್ಲಿ ಸತ್ತ ನಲ್ಲ ಎಫಿಂ ಎಂಬುವನು ನಿಮಗೆ ಪರಿಚಯುವಿದೆಯೇ? ದೇವರಿಲ್ಲದ ಮನುಷ್ಯ ಅವನು. ಅವನ ವಿಚಾರ ಮಾತನಾಡುವುದೇ ಪಾಪಕರ. ಅವನ ಜ್ಞಾಪಕ ತಮಗಿದೆಯೇ?"

"ಇಲ್ಲ."

"ಎಫಿಂ ಜಮೀನಿಯಾ ಕಮ್ಮಾರ ಜಾತಿಯವನು. ಸ್ಟೇಪನ್ಸನ ಚಿಕ್ಕಪ್ಪ. ಈ ಕಡೆಗಳಲ್ಲಿ ಅವನು ಹೆಸರುವಾಸಿಯಾಗಿದ್ದವನು. ಆದರೆ ಬಹಳ ಕೆಟ್ಟ ಮನುಷ್ಯ. ಅರವತ್ತು ವರ್ಷಗಳಿಂದ—ಫ್ರೆಂಚರನ್ನು ಓಡಿಸಿದ ಜಾರ್ ಅಲೆಗ್ಸಾಂಡರಿನ ದೇಹವನ್ನು ಟಾಗನ್‌ರಾಗ್‌ನಿಂದ ಮಾಸ್ಕೋವಿಗೆ ತೆಗೆದು ಕೊಂಡು ಹೋದಾಗಿನಿಂದ—ಅವನನ್ನು ನಾನು ಬಲ್ಲೆ. ಆಗ ನಾನೂ ಅವನೂ ಕೂಡಿಯೇ ಆ ಮೆರವಣಿಗೆಯನ್ನು ನೋಡಲು ಹೋಗಿದ್ದೆವು. ಅವನು ಕೆಟ್ಟ ಆತ್ಮ ಉಳ್ಳವನೆಂದೂ ಮತ್ತು ಯಾವುದೋ ಒಂದು ಕೆಟ್ಟ ಶಕ್ತಿಯುಳ್ಳವ ನೆಂದೂ, ಆಗಲೇ ನಾನು ಬಲ್ಲೆ. "ಯುವಕ ರೈತ ಸುಮ್ಮನಿರುವ ಮುದುಕ ನನ್ನು ಗೋಳು ಹುಯಿದುಕೊಂಡರೆ ಏನು ತಾನೆ ಒಳ್ಳೆಯದಾದೀತು" ಎಂದು ನಾನು ತಿಳಿದಿದ್ದೆ. ಹುಡುಗತನದಿಂದಲೂ ಅವನು ಹಾಗೆಯೇ. ಏನು ಅಸಮಾಧಾನವಾದರೂ ಕೋಳಿಗಳ ಮಧ್ಯೆ ಇರುವ ಹುಂಜ ರೇಗುವಂತೆ ಸಣ್ಣ ಪುಟ್ಟ ವಿಚಾರಗಳಿಗೂ ರೇಗಿ ಬೀಳುತ್ತಿದ್ದ. ಅವನು ದೇವಸ್ಥಾನಗಳಿಗೆ ಹೋಗುವುದಾಗಲೀ, ಸ್ನೇಹಿತರೊಡನೆ ಬೆರೆತು ಇರುವುದಾಗಲೀ ಇಲ್ಲವೇ ಇಲ್ಲ. ಬೆರೆತರೆ ಮುದುಕರೊಡನೆ ಮಾತ್ರ ಕಲೆಯುತ್ತಿದ್ದನು. ಅವನು ತನ್ನ ಕಾಲದಲ್ಲಿ

ನ್ಯೆಯಲ್ಲಿ ಕೆಲಸವಮಾಡಲು ಶಕ್ತಿಯಿದ್ದಾಗ, ಸುಗ್ಗಿಯ ಕಾಲಗಳಲ್ಲಿ ಕೂಲಿ ಕೆಲಸಗಳಿಗೆ ಹೋಗುವುದು ಇಲ್ಲವೆ ಕೆಕ್ಕರೆ ಮತ್ತು ಕಲ್ಲಂಗರೆ ಹಣ್ಣಿನ ತೋಟ ಗಳಲ್ಲಿ ಕೆಲಸ ಮಾಡುವುದು ಪದ್ಧತಿ. ಆ ಕಾಲದಲ್ಲಿ, ಅವನನ್ನು ಅವನ ತೋಟದಲ್ಲಿ ಯಾರಾದರೂ ನೋಡಲು ಬಂದರೆ ಬೆಳೆದ ಹಣ್ಣುಗಳೂ ಸಹ ಶಬ್ದ ಮಾಡುತ್ತಿದ್ದುವು. ಆತನು ಒಂದು ಸಲ ಒಂದು ಹಕ್ಕಿಯನ್ನು ಹಿಡಿದಿದ್ದನು. ಅದು ಸಹಾ ಇವನನ್ನು ನೋಡಿ ನಕ್ಕು ಬಿಟ್ಟಿತು."

"ಒಂದೊಂದು ವೇಳೆ ಹಾಗೂ ಆಗುತ್ತದೆ" ಎಂದನು ಪ್ಯಾಂಟ್ಲಿ. ಪಕ್ಕ ದಲ್ಲಿ ಮಲಗಿದ ಯುವಕನಿಗೆ ಕೊಂಚ ಕುತೂಹಲ ಉಂಟಾಯಿತು. ಹಾಗೆಯೇ ಇವರಿದ್ದಕಡೆ ಮುಖ ತಿರುಗಿಸಿ ಸೂಕ್ಷ್ಮ ದೃಷ್ಟಿಯಿಂದ ಮುದುಕನನ್ನು ನೋಡ ಲಾರಂಭಿಸಿದನು. ಸ್ವಲ್ಪ ಹೊತ್ತು ಯೋಚಿಸಿ, "ಆ ಹಣ್ಣುಗಳು ಕೂಗಿದುದು ದನ್ನು ತಾವು ಕೇಳಿದಿರಾ '' ಎಂದು ಪ್ರಶ್ನಿಸಿದನು.

''ಇಲ್ಲ, ನಾನು ಕೇಳಿಲ್ಲ, ಸದ್ಯ ದೇವರ ದಯೆ", ಎನ್ನುತ್ತಾ ಮುದು ಕನು ಒಂದು ನಿಟ್ಟುಸಿರು ಬಿಟ್ಟು "ಇತರರು ಕೇಳಿದ್ದಾರೆ. ಅದರಲ್ಲೇನೂ ಆಶ್ಚರ್ಯವಿಲ್ಲ ; ಅಮಾನುಷ ಶಕ್ತಿಯುಳ್ಳವನು. ಮನಸ್ಸು ಮಾಡಿದರೆ ಕಲ್ಲನ್ನು ಬೇಕಾದರೂ ಕೂಗಿಸಬಲ್ಲನು. ಸ್ವಾತಂತ್ರ್ಯಸಾಧನೆಯ ದಿನಗಳ ಮುಂಚೆ, ಮೂರು ಹಗಲು ಮೂರು ರಾತ್ರಿ ಕಲ್ಲುಗಳೂ ಸಹಾ ಶಬ್ದಮಾಡುತ್ತಿದ್ದವು. ನಾನೇ ಕಿವಿಯಾರೆ ಕೇಳಿದ್ದೇನೆ. ಇನ್ನು ಜವಿಾಸಿಯ ಹಿಡಿದುದು ಪಕ್ಷಿಯಲ್ಲ ಪಿಶಾಚಿ."

ಇಷ್ಟು ಹೊತ್ತಿಗೆ ಮುದುಕನಿಗೆ ಏನೋ ಜ್ಞಾಪಕ ಬಂದ ಹಾಗಾಯಿತು. ಮೊಣಕಾಲಿನ ಮೇಲೆ ನಿಂತು, ಚಳಿ ಬಂದವನಂತೆ ನಡುಗುತ್ತಾ, ತನ್ನೊಳಗೆ ತಾನೆ ಗೊಣಗುಟ್ಟಿ ಪೆಂಗಸಿನಂತೆ ''ದೇವರೇ ಕಾಪಾಡು, ನಮ್ಮ ಮೇಲೆ ನಿನ್ನ ದಯೆ ಇರಲಿ'' ಎಂದುಕೊಂಡು ಪುನಃ ಆರಂಭಿಸಿದನು.

"ನೋಡಿ, ಒಂದು ಸಲ ನದಿಯ ದಡವಲ್ಲಿ ನಡೆದುಹೋಗುತ್ತಿದ್ದಾಗ ದೊಡ್ಡ ಬಿರುಗಾಳಿ ಬಂತು. ಅಂತಹ ಬಿರುಗಾಳಿ, ಮಳೆಯನ್ನು ನಾನು ಎಂದೂ ನೋಡಿರಲಿಲ್ಲ. ಇನ್ನು ಮುಂದೆ ಅಂತಹ ಗಾಳಿ ಮಳೆ ದೇವರ ದಯೆಯಿಂದ ಬಾರದಿರಲಿ. ಆಗ ಹಾಗೆಯೇ ನಡೆದು ಹೋಗುತ್ತಿರುವಾಗ ಪಕ್ಕದಲ್ಲಿದ್ದ ಪೊದೆಯ ಮಧ್ಯೆ ಒಂದು ಗೂಳಿ ಇರುವುದು ನನಗೆ ಕಂಡುಬಂತು. 'ಯಾರ

ದಿರಬಹುದು, ಈ ಗೂಳಿ ಇಲ್ಲಿಗೇಕೆ ಬಂದಿತು’ ಎಂದು ನಾನೇ ಯೋಚನೆ ಮಾಡಿದೆ. ಅದೇ ದಾರಿಯಲ್ಲಿ ಬಾಲವನ್ನು ಅಲ್ಲಾಡಿಸಿಕೊಂಡು ಗುಟರು ಹಾಕುತ್ತಾ ಹೋಗುತ್ತಿತ್ತು. ಇನ್ನೂ ಕೊಂಚ ಅವರ ಹತ್ತಿರಕ್ಕೆ ಬಂದೆ. ಆಗ ನಾನು ಕಂಡದ್ದೇನು? ಗೂಳಿಯಲ್ಲ, ದುಷ್ಟ ಜಮೀನಿಯಾನ ಆಕೃತಿ. ಅವನು ನನ್ನನ್ನು ದೃಷ್ಟಿಸಿ ನೋಡುತ್ತಿರುವಾಗಲೇ ನಾನು ದಡದಡನೆ ಹೊರಟೆ. ಆಗ ನನಗೆ ಎಷ್ಟು ಹೆದರಿಕೆಯಾಗಿರಬಹುದೆಂದು ನೀವು ಊಹಿಸಬಹುದು. ಕೊಂಚ ದೂರ ಇಬ್ಬರೂ ಜೊತೆಯಲ್ಲಿಯೇ ಸದ್ದಿಲ್ಲವೆ ಮುಂದೆ ಹೋದೆವು - ಮಾತ ನಾಡಲು ಹೆದರಿಕೆಯಿಂದ. ಬಿರುಗಾಳಿ, ಮಳೆ, ಗುಡುಗು, ಮಿಂಚು, ಸಿಡಲು ಗಳ ಆರ್ಭಟ ವಿಪರೀತವಾಯಿತು. ಆಗಿದ್ದ ನನ್ನ ಸ್ಥಿತಿಯನ್ನು ನೋಡಿದರೆ ನಾನು ಪುನಃ ಜೀವಿಸಿರುತ್ತೇನೆಂದು ತಿಳಿದಿರಲಿಲ್ಲ. ಸುಳ್ಳು ಹೇಳಿದರೆ ನನಗೆ ಕೆಟ್ಟಸಾವು ಲಭಿಸೀತು. ಇಷ್ಟರಲ್ಲಿ ನಮ್ಮ ದಾರಿಗೆ ಅಡ್ಡಲಾಗಿ ಒಂದು ಮೊಲವು ಓಡಿಹೋಯಿತು. ಅದು ಕೂಡ ಮನುಷ್ಯನಂತೆ ‘ರೈತನಿಗೆ ಶುಭವಾಗಲಿ’ ಎಂದು ಕೂಗಿತು.’’

ಅಷ್ಟರಲ್ಲಿ ಪುನಃ ಬಗಳುತ್ತ ಬಂದ ನಾಯಿಯನ್ನು ಮುದುಕನು “ದೂರ ಹೋಗು ಶನಿಯೇ” ಎಂದು ಬಯ್ಯುತ್ತಾ ದೊಣ್ಣೆಯನ್ನು ಮೇಲಕ್ಕೆತ್ತಿದನು. ನಾಯಿ ಹೆದರಿ ಓಡಿತು.

ಇದುವರೆಗೂ ಮುದುಕನು ಹೇಳುತ್ತಿದ್ದುದನ್ನು ಕೇಳುತ್ತಿದ್ದ ಪ್ರಯಾಣಿ ಕನು ‘‘ಇಂತಹ ವಿಚಾರಗಳು ಆಗಾಗ ನಡೆಯುತ್ತಿರುತ್ತವೆ ಎಂಬುದನ್ನು ನಾನು ಬಲ್ಲೆ’’ ಎಂದು ಹೇಳಿ ಮೊದಲಿನಂತೆಯೇ ಕುದುರೆಯನ್ನು ಒರಗಿಕೊಂಡೇ ನಿಂತಿದ್ದನು. ಈಗಲೂ ಅದೇ ರೀತಿಯ ಗತ್ತು ಅವನಲ್ಲಿ ಎದ್ದು ಕಾಣುತ್ತಿತ್ತು. ದೀರ್ಘಾಲೋಚನೆಯಲ್ಲಿರುವವನು ಒಂದೊಂದು ವೇಳೆ ಮಾತನಾಡುವಂತೆ ‘‘ಅಂತಹ ವಿಷಯಗಳು ಆಗಾಗ ಕಿವಿಗೆ ಬೀಳುತ್ತಿರುತ್ತವೆ” ಎಂದು ಗಂಭೀರ ವಾಣಿಯಿಂದ ನುಡಿದನು.

“ಜಮೀನಿಯಾನು ಬಹಳ ಕೆಟ್ಟ ಮನುಷ್ಯನಾಗಿದ್ದನು” ಎಂದು ಮುದುಕ ಕುರುಬರವನು ಪುನಃ ಆರಂಭಿಸಿದನು. ಆದರೆ ಈಗ ಹೇಳುವಾಗ ಮೊದಲಿನ ಹುರುಪಿರಲಿಲ್ಲ.

“ಐದು ವರ್ಷಗಳನಂತರ ಪ್ರಜಾ ಸರ್ಕಾರವು ಅವನನ್ನು ಹಿಡಿದು

ಚನ್ನಾಗಿ ಚಡಿ ಏಟು ಕೊಡಿಸಿದರು. ಪ್ರಜೆಗಳ ಮೇಲಿನ ಈ ಸೇಡನ್ನು ತೀರಿಸಿ ಕೊಳ್ಳುವುದಕ್ಕಾಗಿ ತನ್ನ ಶಕ್ತಿಯಿಂದ ಗಂಟಲಿನ ರೋಗವೊಂದನ್ನು ಕೋವಿಲ್ ಪ್ರದೇಶಕ್ಕೆ ಹರಡಿಬಿಟ್ಟನು. ಕಾಲರಾ ರೋಗಕ್ಕಿಂತಲೂ ಅತ್ಯಧಿಕವಾಗಿ ಜನರು ಮೃತರಾದರು."

"ಅದನ್ನು ಹೇಗೆ ಮಾಡಿದನು" ಎಂದು, ಇದುವರೆಗೆ ಸುಮ್ಮನೆ ಕೇಳುತ್ತ ಮಲಗಿದ್ದ ತರುಣ ಕೇಳಿದ.

"ಅದರಲ್ಲಿ ರಹಸ್ಯವೇನೂ ಇಲ್ಲ, ಮನಸ್ಸು ಮಾಡಿದರೆ ಅದೇನೂ ದೊಡ್ಡ ದಲ್ಲ. ಒಂದು ಹಾವಿನ ಕೊಬ್ಬಿನ ವಿಷವನ್ನು ಜನಗಳಲ್ಲಿ ಹರಡಿಬಿಟ್ಟನು. ಅದರ ವಾಸನೆಯೇ ವಿಷವಾಗಿ ಪರಿಣಮಿಸುವಾಗ ಇನ್ನು ಆಹಾರ ಕೊಬ್ಬಿನ ಪ್ರಭಾವವೆಷ್ಟಿರಬಹುದು".

"ನಾನೂ ಹಾಗೆ ಕೇಳಿದ್ದೇನೆ" ಎಂದು ಪ್ಲಾಂಟಿಯು ಟೀಕಿಸಿದನು.

"ಹುಡುಗರು ಅವನನ್ನು ಕೊಂದು ಬಿಡಬೇಕೆಂದಿದ್ದರು, ಆದರೆ ಮುದುಕರು ಅದಕ್ಕೊಪ್ಪಲಿಲ್ಲ. ಜಮಿಾಸಿಯಸ್ಸಿಗೆ ಎಲ್ಲೆಲ್ಲಿ ಎಷ್ಟೆಷ್ಟು ಬಚ್ಚಿ ಟ್ಟಿರುವ ನಿಧಿಗಳಿವೆಯೆಂದು ತಿಳಿದಿರುವಾಗ ಅವನನ್ನು ಕೊಲ್ಲಲು ಹೇಗೆ ತಾನೆ ಮುದುಕರು ಒಪ್ಪುವರು. ಅವನನ್ನು ಬಿಟ್ಟರೆ ಮತ್ತೆ ಯಾರಿಗೂ ಈ ನಿಧಿಗಳ ವಿಚಾರ ತಿಳಿದಿರಲಿಲ್ಲ. ಅವನು ನದಿಯ ದಂಡೆಯಲ್ಲಿ ಓಡಾಡುತ್ತಿದ್ದರೆ ಕಲ್ಲುಗಳ ಮತ್ತು ಪೊದೆಗಳ ಸಂದಿಯಿಂದ ಗಂಧಕದ ಬೆಳಕಿನಂತೆ ಕಾಂತಿ ಹೊರಸೂಸು ತಿತ್ತು. ಇದನ್ನು ನಾನು ಕಣ್ಣಾರ ಕಂಡಿದ್ದೇನೆ. ಆ ಜಾಗಗಳನ್ನು ತಮಗೆ ತೋರಿಸಲಿ ಎಂದು ಜನರು ಅವನ ಹಿಂದೆಯೇ ಕಾದಿರುತ್ತಿದ್ದರು. ಆದರೆ ದನದ ಕೊಟ್ಟಿಗೆಯಲ್ಲಿ ಸೇರಿಕೊಂಡಿರುವ ನಾಯಿಯಂತೆ, ತಾನೂ ಅನುಭವಿಸ ಲಿಲ್ಲ ಮತ್ತು ಇತರರು ಅನುಭವಿಸಲು ಅವರಿಗೆ ತೋರಿಸಲಿಲ್ಲ. ಅವನ್ನು ತಾನೂ ತೆಗೆಯದೆ, ಇತರರಾದರೂ ಹೇಗೆ ತೆಗೆಯುವುದೆಂಬುದನ್ನು ತಿಳಿಸದೆ ಪ್ರಾಣಬಿಟ್ಟನು."

ಕೇಳುತ್ತ ಗಂಭೀರವಾಗಿ ನಿಂತಿದ್ದ ಪ್ರಯಾಣಿಕನು ಮತ್ತೊಮ್ಮೆ ಚುಟ್ಟಾ ಹೊತ್ತಿಸಿದನು. ಆ ಬೆಳಕಿನಲ್ಲಿ ಅವನ ಹುರಿಮೀಸೆಯೂ ದಪ್ಪ ನೆಯ ಮೂಗೂ ಕಾಣಿಸಿದವು. ಚುಟ್ಟಾದಿಂದ ಹೊರಬಿದ್ದ ಕಿಡಿಯ ಕಣಗಳು

ಮುಖದ ಮುಂಭಾಗದಲ್ಲಿ ಹಾದು, ತಲೆಯ ಮೇಲೆ ಹಾರಿ ಪಕ್ಕದಲ್ಲಿ ಹಾರಿ ಹೋಯಿತು.

"ಈ ಪ್ರದೇಶದಲ್ಲಿ ಹೂತಿಟ್ಟಿರುವ ಹಣ ಬಹಳವಿದೆಯೆ ?'' ಎಂದು ಕೇಳಿದವನು ಒಂದಾವರ್ತಿ ಸುತ್ತಲೂ ನೋಡಿ "ಇರಬೇಕು" ಎಂದು ತಾನೆ ಉತ್ತರ ಹೇಳಿಕೊಂಡನು.

"ಜನ ಹಾಗೆ ಹೇಳುತ್ತಾರೆ" ಎಂದು ನಿರಾಶನಾದ ಮುದುಕ ನಿಟ್ಟುಸಿರು ಬಿಡುತ್ತಾ ಹೇಳಿದನು, "ಬೇಕಾದಷ್ಟು ಹೂತಿಟ್ಟಿರುವ ಆಸ್ತಿ ಇದೆ, ಆದರೆ ಹೇಗೆ ಅದನ್ನು ತೆಗೆಯಬಹುದು ಎಂಬುದು ಯಾರಿಗೂ ಗೊತ್ತಿಲ್ಲ. ಹೂತಿಟ್ಟಿರುವ ಸರಿಯಾದ ಜಾಗಗಳು ಯಾರಿಗೂ ತಿಳಿಯದು. ಆ ಜಾಗಗಳೆಲ್ಲವೂ ಮಂತ್ರ ಶಕ್ತಿಯಿಂದ ಆವರಿತವಾಗಿದೆ. ಅದಕ್ಕೆ ತಕ್ಕಂತೆ ಮಂತ್ರಶಕ್ತಿಯುಳ್ಳ ತಾಯಿತಿಗಳೇ ಬೇಕು. ತಾಯಿತಿಗಳಿಲ್ಲದೆ ಏನೂ ಸಾಧ್ಯವಿಲ್ಲ. ಜವಿಾಸಿಯಾ ಬಳಿ ಎಲ್ಲಾ ವಿಧವಾದ ತಾಯಿತಿಗಳೂ ಇದ್ದುವು. ಆದರೆ ಅವುಗಳನ್ನು ಬೇರೊಬ್ಬರಿಗೆ ಕೊಡದ ಪಿಶಾಚಿಯಾಗಿದ್ದನು."

ಇದನ್ನು ಕೇಳುತ್ತ ದೂರದಲ್ಲಿ ಮಲಗಿದ್ದ ಯುವಕ ಕುರುಬನು ಕುತೂಹಲದಿಂದ ಮುಂದೆ ಬಂದು ಹಾಗೆಯೇ ಕೈಗಳ ಸಹಾಯದಿಂದ ಮುಖವೆತ್ತಿ ಮುದುಕನು ಹೇಳುತ್ತಿದ್ದುದನ್ನೇ ದೃಷ್ಟಿಸಿ ಕೇಳುತ್ತಿದ್ದನು.

"ಈ ಜಾಗಗಳಲ್ಲಿ ಹೂತಿಟ್ಟಿರುವ ಹಣವಿದೆಯೆಂದು ಬರವಣಿಗೆಯಲ್ಲಿಯೂ ಇದೆ. ಇದಕ್ಕಿಂತಲೂ ಏನು ಬೇಕು ; ಒಂದುಸಲ ಒಬ್ಬ ಸೈನಿಕನು ಒಂದು ವೃತ್ತ ಪತ್ರಿಕೆಯನ್ನು ಓದುತ್ತಿರುವಾಗ ಆ ಪತ್ರಿಕೆಯಲ್ಲಿ ಯಾವ ಜಾಗವಲ್ಲಿ ಎಷ್ಟು ಹಣವಿದೆ ಎಂಬುದನ್ನೂ, ಈ ಹಣವಿಟ್ಟಿರುವ ಪಾತ್ರೆಯ ವಿವರಣೆಯನ್ನೂ ಸಹಾ ಕೊಡಲಾಗಿತ್ತು. ಈ ಹಣವು ಎಷ್ಟೋ ದಿನಗಳ ಮುಂಚೆಯೇ ತೆಗೆಯಬಹುದಾಗಿತ್ತು. ಆದರ ಅದರ ಹತ್ತಿರ ಹೋಗದಂತೆ ಒಂದು ಮಂತ್ರ ಶಕ್ತಿ ಅದರ ಸುತ್ತಲೂ ಆವರಿಸಿದೆ."

"ಏಕಾಗಬಾರದು, ತಾತ'' ಎಂದು ಯುವಕ ಹೇಳಿ "ಪಾಪ, ಸೈನಿಕನು ಈ ಪತ್ರಿಕೆಯನ್ನು ಓದುವಾಗ ಏನೋ ಕೊಂಚ ಬಿಟ್ಟಿರಬೇಕು. ಮಂತ್ರಶಕ್ತಿಯಿಂದ ಹೂತಿಟ್ಟಿರುವ ಈ ಆಸ್ತಿಗೆ ಒಂದು ತಾಯಿತಿ ಬೇಕು.''

ಮುದುಕನಿಗೆ ಒಂದು ರೀತಿಯ ಹುರುಪೇ ಬಂದಿತ್ತು. ತನ್ನ ಹೃದಯ ವನ್ನೇ ಬೇಕಾದರೂ ಅವನೆದುರಿಗೆ ತೆಗೆದಿಟ್ಟು ತನ್ನ ಮನಸ್ಸಿನಲ್ಲಿರುವುದನ್ನು ಆ ವ್ಯಕ್ತಿಗೆ ಹೇಳಬೇಕೆಂಬ ಉತ್ಸಾಹ. ಅವೆಲ್ಲವನ್ನೂ ತನ್ನ ಮಾತಿನ ಮೂಲಕ ಹೇಳುವಾಗ ಸಾಕಷ್ಟು ಸರಿಯಾದ ಪದಗಳು ದೊರೆಯದಿರುವ ಕಡೆ ತನ್ನ ದೇಹಾಂಗಗಳ ಹಾವ ಭಾವಗಳಿಂದ ತೋರಿಸಿ ಬಿಡುತ್ತಿದ್ದನು.

"ಏನು ಮಾಡುವುದು ಇಲ್ಲಿ ಹೂತಿಟ್ಟಿರುವ ಆಸ್ತಿ ಬೇಕಾದಷ್ಟಿದೆ. ಆದರೆ ಅದು ಯಾರಿಗೂ ಪ್ರಯೋಜನವಿಲ್ಲವಾಗಿದೆ. ಕುರಿಯ ಹಿಕ್ಕೆ ಮತ್ತು ನೊರಜು ಹುಲ್ಲು ಮನುಷ್ಯನಿಗೆ ಎಷ್ಟರಮಟ್ಟಿಗೆ ಉಪಯೋಗಕರವಾಗಿದೆಯೋ ಅಷ್ಟೇ ಮಟ್ಟಿಗೆ ಈ ಹೂತಿಟ್ಟಿರುವ ಹಣವೂ ಆಗಿದೆ. ಮಗೂ, ಎಲ್ಲರಿಗೂ ಸಾಕಾಗು ವಷ್ಟು ಆಸ್ತಿಯೇನೋ ಇದೆ ಆದರೆ ಅದನ್ನು ಸರ್ಕಾರದವರು ತೆಗೆದುಕೊಂಡು ಬಿಡುತ್ತಾರೆ. ದೊಡ್ಡ ಮನುಷ್ಯರು ಈಗಾಗಲೇ ಆ ಕಾರ್ಯಕ್ಕೆ ಆರಂಭಿ ಸಿದ್ದಾರೆಂದೂ ಕೇಳಿದ್ದೇನೆ. ರೈತನು ಮುಂದೆ ಬರುವುದು ಅವರಿಗೆ ಸರಿ ತೋರುವುದಿಲ್ಲ. ಆತನಿಗೇನಾದರೂ ಒಳ್ಳೆಯದಾದರೆ ಈ ಸಾಹುಕಾರರಿಗೆ ಸಹಿಸಲಾರದಷ್ಟು ಹೊಟ್ಟೆಕಿಚ್ಚು. ಸರ್ಕಾರದವರಿಗೂ ಅವರ ಕರ್ತವ್ಯ ಗೊತ್ತೇ ಇದೆ ಯಾರಾದರೂ ರೈತನಿಗೆ ಭೂಮಿಯಲ್ಲಿ ಹೂತಿಟ್ಟ ಆಸ್ತಿ ದೊರಕಿದರೆ ಅದನ್ನು ಅವರು ಸಂಬಂಧಪಟ್ಟ ಅಧಿಕಾರಿಗಳಿಗೆ ತಲುಪಿಸಬೇಕೆಂದು ಕಾನೂನಿ ನಲ್ಲಿಯೂ ಸಹ ಬರದಿದೆ. ಅದಕ್ಕಾಗಿ ಬಹಳ ದಿನಗಳು ಕಾಯಬೇಕು" ಎಂದು ಹೇಳುತ್ತಾ ಒಂದಾವರ್ತಿ ಹುಚ್ಚನಂತೆ ನಕ್ಕು ಕೂತುಬಿಟ್ಟನು.

ಇವನು ಹೇಳಿದುದೆಲ್ಲಾ ಪ್ರಯಾಣಿಕನ ಕಿವಿಗೆ ಬೀಳುತ್ತಿತ್ತು. ಅವನೂ ಕುತೂಹಲದಿಂದ ಕೇಳಿದನು. ಅವನ ನಡವಳಿಕೆಯಿಂದ ಮುದುಕನಿಗಿಂತಲೂ ಈ ವಿಚಾರದಲ್ಲಿ ಅವನಿಗೇ ಹೆಚ್ಚಿಗೆ ಗೊತ್ತಿರಬಹುದೆಂದೂ, ಆ ವಿಚಾರವಾಗಿ ಬೇಕಾದಷ್ಟು ಅವನು ಈಗಾಗಲೇ ಆಲೋಚನೆ ಮಾಡಿರಬಹುದಾಗಿಯೂ ತೋರುತ್ತಿತ್ತು.

"ನನ್ನ ಈ ವಯಸ್ಸಿಗೆ ಹತ್ತುಸಲವಾದರೂ ಈ ಆಸ್ತಿಯನ್ನು ಹುಡುಕಲು ಪ್ರಯತ್ನಪಟ್ಟಿದ್ದೇನೆ" ಎಂದು ತಲೆ ಕೆರೆದುಕೊಳ್ಳುತ್ತಾ ಹೇಳಿ "ಆದರೆ ನಾನು ಗುರುತಿಸಿದ ಸ್ಥಳಗಳೂ ಮಂತ್ರದಿಂದ ಆವರಿಸಲ್ಪಟ್ಟಿದ್ದವು. ನಮ್ಮ ತಂದೆ ಮತ್ತು ನಮ್ಮ ಅಣ್ಣ ಇಬ್ಬರೂ ಬೇಕಾದಷ್ಟು ಪ್ರಯತ್ನಪಟ್ಟಿದ್ದಾರೆ. ಆದರೆ

ನೇನೂ ಉಪಯೋಗವಾಗದೆ ಹಾಗೆಯೇ ಕಾಲವಾದರು. ಟಾಗನ್ ರಾಗ್ ಎಂಬ ಕೋಟೆಯ ಒಂದು ಬದಿಯಲ್ಲಿ ಮೂರು ಕಲ್ಲುಗಳ ಕೆಳಗೆ ಮಂತ್ರಶಕ್ತಿಯಿಂದ ಆವರಿಸಲ್ಪಟ್ಟ ಈ ಆಸ್ತಿ ಇದೆ ಎಂದು ಒಬ್ಬ ಬೈರಾಗಿ ನಮ್ಮ ಅಣ್ಣನಿಗೆ ಹೇಳಿದ್ದ. ಆ ಕಾಲದಲ್ಲಿ ತಾಯಿತಿಗಳನ್ನು ಮಾರುತ್ತಿದ್ದ ಒಬ್ಬ ಆರ್ಮೀನಿಯನ್ ದೇಶದವನು ಹತ್ತಿರದಲ್ಲಿ ವಾಸಿಸುತ್ತಿದ್ದನು. ಅವನಿಂದ ನಮ್ಮ ಅಣ್ಣ ಒಂದು ತಾಯಿತಿಯನ್ನು ಕೊಂಡುತಂದು ಮತ್ತಿಬ್ಬರ ಸಹಾಯದಿಂದ ಕೋಟೆಗೆ ಹೋಗಿದ್ದ. ಅವನು ಅವರ ಬಳಿಗೆ ಬರುವ ವೇಳೆಗೆ ಆಸ್ತಿ ಇದ್ದ ಜಾಗದ ಬಳಿ ಕಾರುಮಾಡಿದ ಬಂದೂಕನ್ನು ಹಿಡಿದು ಒಬ್ಬ ಸಿಪಾಯಿ ನಿಂತಿದ್ದ ..."

ಹೀಗೆ ಹೇಳುತ್ತಿರುವಂತೆಯೇ ಪ್ರಶಾಂತ ವಾತಾವರಣವನ್ನು ಭೇದಿಸಿಕೊಂಡು ಭಯಂಕರ ಶಬ್ದವಾಯಿತು. ಆ ಶಬ್ದದ ಮಾರ್ದನಿಯು ಬೆಟ್ಟದ ತಪ್ಪಲಿನ ಭಾಗದಿಂದ ಎಲ್ಲಾ ಕಡೆಗೂ ಹರಡಿತು. ಶಬ್ದ ನಿಂತ ಮೇಲೆ ಏನೂ ತಿಳಿಯದವನಂತೆ, ನಿಶ್ಚಿಂತನಾಗಿ ಅಲುಗಾಡದ ನಿಂತಿರುವ ಆ ಪ್ರಯಾಣಿಕನನ್ನು ಆಶ್ಚರ್ಯದಿಂದ ನೋಡಿದನು.

"ಹೆಂಗಸರು ಯಂತ್ರದ ಮೂಲಕ ಗಣಿಗಳೊಳಗೆ ಇಳಿಯುತ್ತಿರುವ ಶಬ್ದ" ಎಂದು ಯುವಕನು ಸಮಾಧಾನ ಹೇಳಿದನು.

ಅಷ್ಟರಲ್ಲಿ ಬೆಳಕಾಗುತ್ತಾ ಬಂತು. ಸೂರ್ಯನ ಉದಯವನ್ನು ಕಂಡು ಗರ್ತ್ತಲೆಯು ಎಲ್ಲಾ ಕಡೆಯಿಂದಲೂ ಚದುರಿತು. ಪ್ರಾತಃಕಾಲದ ಮಂದ ಮಾರುತನು ನಿಧಾನವಾಗಿ ಬೀಸಿ ಹೊಲಗದ್ದೆಗಳಲ್ಲಿ ಬೆಳೆದ ಪೈರುಗಳ ಮೇಲಿನ ತೆನೆಯನ್ನು ತಲೆದೂಗಿಸುವಂತೆ ಮಾಡುತ್ತಿದ್ದ.

ಇದುವರೆಗೆ ನಿಶ್ಶಬ್ದನಾಗಿದ್ದ ಪ್ರಯಾಣಿಕನು ನಿದ್ದೆಯಿಂದ ಎಚ್ಚತ್ತವನಂತೆ ದಿಗ್ಗನೆದ್ದು ಕುದುರೆಯ ಜೀನನ್ನು ಸರಿಪಡಿಸಿ ಕುದುರೆಯನ್ನು ಹತ್ತಬೇಕೆಂದಿದ್ದವನು ಪುನಃ ಏನೋ ಯೋಚನೆಮಾಡಿಕೊಂಡು

"ನಿಜ, ನಿನ್ನ ಮೊಣಕೈಗಳು ನಿನಗೆ ಬಹಳ ಹತ್ತಿರವೇ ಇವೆ, ಆದರೆ ಅದನ್ನು ನಿನ್ನ ಬಾಯಿಂದ ಕಚ್ಚಲಾರೆ. ಹೂತಿಟ್ಟಿರುವ ಹಣ ಬೇಕಾದಷ್ಟಿದ್ದರೂ ಅದನ್ನು ಪಡೆಯುವುದು ಹೇಗೆಂಬುದನ್ನು ತಿಳಿಯಲು ಬುದ್ಧಿಶಕ್ತಿ ಬೇಕು." ಹೀಗೆಂದು ಹೇಳಿ ಒಂದಾವರ್ತಿ ಕುರುಬರಿಬ್ಬರ ಮುಖವನ್ನೂ

ನೋಡಿದನು. ಅವರಿಬ್ಬರ ಮುಖವೂ ವಿವರ್ಣವಾಗಿ ದುಃಖಸೂಚಕವಾಗಿತ್ತು. ಹಾಗೆಯೇ ಕುದುರೆಯ ಮೇಲೆ ಒಂದು ಕಾಲನ್ನು ಹಾಕುತ್ತಾ "ಅದನ್ನು ಅನುಭವಿಸದೆ ನಾವು ಸಾಯುತ್ತೇವೆ, ನಿಜ. ನಮಗಿಂತಲೂ ಕಿರಿಯರು ಅದನ್ನು ಪಡೆಯಬಹುದು. ನಾವು ಅದರ ಯೋಚನೆ ಮಾಡುವುದನ್ನೂ ಸಹ ಬಿಟ್ಟು ಬಿಡಬೇಕು" ಎಂದು ಹೇಳಿದನು.

ಮಂಜಿನಿಂದ ಕೂಡಿದ್ದ ತನ್ನ ಉದ್ದನೆಯ ಮೀಸೆಯ ಮೇಲೆ ಒಂದಾವರ್ತಿ ಕೈಯಾಡಿಸಿ ತಿರುಗನಡುತ್ತಾ ಕುದುರೆಯ ಮೇಲೆ ಕೂತು ಎಲ್ಲಿಯೋ, ಏನನ್ನೋ ಮರೆತವನಂತೆ ಅರೆಗಣ್ಣಿನಿಂದ ದೂರದಲ್ಲಿ ಕಣ್ಣಿಗೆ ಕಾಣಿಸುವಷ್ಟು ದೂರ ದಿಟ್ಟಿಸಿ ನೋಡಿದನು. ಏನೊಂದರ ಚಲನವಲನವೂ ಕಾಣಲಿಲ್ಲ. ನಿಸ್ತೇಜವಾಗಿ ನಿಂತಿದ್ದ ಗುಡ್ಡಗಳು ಮಾತ್ರ ಅಲ್ಲೊಂದು ಇಲ್ಲೊಂದು ಕಾಣುತ್ತಿದ್ದವು. ಇನ್ನೂ ಸಾವಿರಾರು ವರ್ಷ ಕಳೆದು ಲಕ್ಷಾಂತರ ಜನರು ಸತ್ತರೂ, ಅವರ ವಿಚಾರವಾಗಿ ಸಂತಾಪವಾಗಲಿ ಇಲ್ಲವೆ ಇರುವವರ ವಿಚಾರದಲ್ಲಿ ಆಸಕ್ತಿಯಾಗಲಿ, ಅವುಗಳಲ್ಲಿ ಇರುವಂತೆ ತೋರಲಿಲ್ಲ. ಆ ಗುಡ್ಡಗಳ ಹಿಂದೆ ಯಾವ ಅಮಾನುಷ ಗೂಢವಿಚಾರಗಳಿವೆಯೋ ಗೊತ್ತಾಗುವಂತಿಲ್ಲ.

ಕತ್ತಲೆ ಹರಿಯಿತು ಎಂಬುದನ್ನು ಸೂಚಿಸುವುದಕ್ಕಾಗಿಯೋ ಎನ್ನುವಂತೆ ಹಕ್ಕಿಗಳು 'ಚಿಲಿಪಿಲಿ' ಗುಟ್ಟುತ್ತಾ ಹಾರಲಾರಂಭಿಸಿದುವು. ಹೊರಹಲನುವಾಗಿ ನಿಂತಿದ್ದ ಸವಾರನು ಒಮ್ಮೆ ನಕ್ಕು "ಏನು ವಿಶಾಲವಾದ ಪ್ರದೇಶ, ದೇವರೇ ರಕ್ಷಿಸಬೇಕು, ಇಂತಹ ಜಾಗದಲ್ಲಿ ಹೂತಿಟ್ಟಿರುವ ಹಣಕ್ಕಾಗಿ ಹುಡುಕುವುದೇ" ಎಂದು ಹೇಳುತ್ತಾ ಕೊಂಚ ಧ್ವನಿ ಬದಲಾಯಿಸಿ "ಅಗೋ ಅಲ್ಲಿ ಎರಡು ಜಾಗದಲ್ಲಿ ಹಣದ ಕುಂಡಗಳಿವೆ. ಅದರ ವಿಚಾರ ಸುಶಿಕ್ಷಿತರಿಗೆ ತಿಳಿಯದು. ರೈತರೂ ಅದರಲ್ಲಿಯೂ ಮುಖ್ಯವಾಗಿ ವೃದ್ಧ ಸಿಪಾಯಿಗಳು ಈ ವಿಚಾರ ಬಲ್ಲರು" ಎಂದು ಹೇಳುತ್ತಾ ತನ್ನ ಚಾವಟಿಯನ್ನು ಮುಂದೆ ಹಿಡಿದು ಯಾವುದೋ ಒಂದು ಜಾಗವನ್ನು ತೋರಿಸಿ

"ಬಹಳ ಹಿಂದೆ ಒಂದು ಪಡೆಯವರು ಸೆಂಟ್ ಪೀಟರ್ಸ್‌ಬರ್ಗಿನಿಂದ, ಚಕ್ರವರ್ತಿ ಪೀಟರನಿಗಾಗಿ ಬಂಗಾರವನ್ನು ತೆಗೆದುಕೊಂಡು ಹೋಗುತ್ತಿದ್ದಾಗ ಅವರನ್ನು ಒಂದು ಕಳ್ಳರ ಗುಂಪು ಮುತ್ತಿ ಕೊಂದು ಬಂಗಾರವೆಲ್ಲವನ್ನೂ ಕೊಳ್ಳೆಹೊಡೆದು ಅಲ್ಲಿಯೇ ಹೂತಿಟ್ಟರು. ಆಮೇಲೆ ಈ ಹೂತಿಟ್ಟ

ಬಂಗಾರವೂ ಅವರಿಗೂ ಸಿಕ್ಕಲಿಲ್ಲ.

ಮತ್ತೊಂದು ಸಲ ರಷ್ಯಾದೇಶದ ಕೊಸಾಕರು ಫ್ರೆಂಚರು ತೆಗೆದು ಕೊಂಡು ಹೋಗುತ್ತಿದ್ದ ಬೆಳ್ಳಿ ಬಂಗಾರವೆಲ್ಲವನ್ನೂ ದರೋಡೆಮಾಡಿದರು. ಈ ವಿಚಾರವು ಅಧಿಕಾರಿಗಳ ಕಿವಿ ಮುಟ್ಟಿ ಅದನ್ನು ಅವರೆಲ್ಲಿ ತಮ್ಮ ಸ್ವಾಧೀನ ಪಡಿಸಿಕೊಳ್ಳುವರೋ ಎಂದು ಹೆದರಿ ಇದೇ ದಾರಿಯಲ್ಲಿ ಹೂತಿಟ್ಟುಬಿಟ್ಟರು. ಆ ಜಾಗ ಯಾರಿಗೂ ತಿಳಿಯದು. ಹೀಗೆ ಹೂತಿಟ್ಟಿರುವ ಹಣದ ವಿಚಾರವೆಲ್ಲ ವನ್ನೂ ನಾನೂ ಬಲ್ಲೆ" ಎಂದು ದುಃಖದಿಂದ ಮುದುಕನು ಹೇಳಿದನು.

ಪ್ರಯಾಣಿಕನು ಪುನಃ ಏನೋ ಹೇಳಬೇಕೆಂದಿದ್ದವನು, ಅಲ್ಲಿಗೇ ತಡೆದು ಸುಮ್ಮನಾದನು. ಬಹಳ ಹೊತ್ತು ಯಾರೂ ಮಾತನಾಡದೆ ನಿಶ್ಯಬ್ದ ತೆಯು ಆವರಿಸಿತು. ಬಾಹ್ಯಪ್ರಪಂಚದ ಅರಿವಿಲ್ಲದವನಂತೆ ತನ್ನೊಳಗೆ ತಾನೇ ನಕ್ಕು ಕುದುರೆಯ ಜೀನನ್ನು ಒಂದು ಸಲ ಎಳೆದನು. ಕುದುರೆಯು ಅರೆ ಮನಸ್ಸಿನಿಂದ ಹೊರಟಿತು ಅದರಿಂದ ಎಚ್ಚತ್ತವನಂತಾಗಿ ಒಂದು ಸಲ ತಲೆ ಅಳ್ಳಾಡಿಸಿ ಕುದುರೆಯನ್ನು ಚುಚ್ಚಿದನು. ಕುದುರೆಯು ನಾಗಾಲೋಟದಿಂದ ಓಡಲಾರಂಭಿಸಿತು.

ಕುದುಬರಿಬ್ಬರೇ ಮಾತನಾಡಿಕೊಳ್ಳಲಾರಂಭಿಸಿದರು "ಮಾಕರೋವಿ ನಿಂದ ಬಂದಿದ್ದ ಸವಾರ ಬಹಳ ಚುರುಕು. ಆತನಿಗೆ ವರ್ಷಕ್ಕೆ ೧೫ ಸಾವಿರ ರೂಬಲ್ಲುಗಳ ಆದಾಯವಿದೆ" ಎಂದು ಮುದುಕ ಹೇಳಿದ.

ಒಂದೇ ಗುಂಪಿನಲ್ಲಿದ್ದ ಮೂರು ಸಾವಿರ ಕುರಿಗಳೂ ಒಂದೊಂದಾಗಿ ಮನಸ್ಸಿಲ್ಲದಿದ್ದರೂ ಎದ್ದು, ಬೇರೆ ಕೆಲಸವಿಲ್ಲದಿದ್ದುದರಿಂದ, ಕೆಳಗೆ ಬಿದ್ದು ತುಳಿಯಲಾಗಿದ್ದ ತುಣುಕು ಹುಲ್ಲನ್ನು ತಿನ್ನಲಾರಂಭಿಸಿದವು. ಇನ್ನೂ ಸೂರ್ಯನು ಉದಯಿಸಿರಲಿಲ್ಲ. ಆದರೂ ದೂರದಲ್ಲಿದ್ದ ಗುಡ್ಡಗಳು ಮಸಕು ಮಸಕಾಗಿ ಕಾಣುತ್ತಿದ್ದವು. ಅದರಲ್ಲಿಯೂ ಬೆಟ್ಟದ ತುದಿಯಲ್ಲಿದ್ದ ಸಾರ್‌ಮೊಗಿಲಾವು ದೂರಕ್ಕೆ ಒಂದು ದೊಡ್ಡ ಮೋಡದಂತೆ ಕಾಣುತ್ತಿತ್ತು. ಅದರ ಮೇಲೆ ನಿಂತು ನೋಡಿದರೆ ಕಣ್ಣು ಕಾಣುವವರೆಗೂ ಸುತ್ತಲೂ ಹರಡಿರುವ ಬೈಲುಪ್ರದೇಶವು ಗೋಚರವಾಗುತ್ತಿತ್ತು. ಅದರಲ್ಲಿ ಅಡಕವಾಗಿರುವ ಸಾಹುಕಾರರ ಮತ್ತು ಜರ್ಮನರ ಚಿರಸ್ಥಿರ ಸ್ವತ್ತುಗಳು ಶೋಭಾಯಮಾನವಾಗಿಯೂ ಕಾಣುತ್ತಿದ್ದು ದಲ್ಲದೆ, ಅಲ್ಲಲ್ಲಿ ಹರಡಿರುವ ಹಳ್ಳಿಗಳೂ, ಸೂಕ್ಷ್ಮದೃಷ್ಟಿಯುಳ್ಳವರಿಗೆ

ದೂರದಲ್ಲಿರುವ ಪಟ್ಟಣಗಳೂ, ನಿರಾಯಾಸವಾಗಿ ಓಡಾಡುತ್ತಿರುವ ಹೊಗೆ ಬಂಡಿಗಳೂ ಕಾಣುತ್ತಿದ್ದುವು. ಅಂತಹ ಎತ್ತರದಲ್ಲಿ ನೋಡಿದಾಗಲೀ, ಹೂತಿಟ್ಟಿರುವ ಈ ಹಣಕ್ಕಾಗಲೀ, ಇಲ್ಲವೆ ಈ ಕುರಿಗಳ ಧ್ಯಾನಕ್ಕಾಗಲೀ, ಸಂಬಂಧವಿಲ್ಲದಂತಹ, ಬೇರೊಂದು ಜೀವನವೂ ಇರುವುದೆಂಬುದು ಗೋಚರವಾಗುತ್ತಿತ್ತು."

ಮುದುಕನು ಮೆಲ್ಲನೆ ಕೋಲನ್ನೂರಿಕೊಂಡು ಮೇಲಕ್ಕೆದ್ದನು. ಯುವಕನಿಗೆ ಒಂದು ರೀತಿಯ ಹುಡುಗುತನದ ಹೆದರಿಕೆಯಾದರೂ ಪರಿಶೋಧನೆ ಮಾಡಬೇಕೆಂಬ ಆಶೆ. ರಾತ್ರಿಯೆಲ್ಲಾ ಮಾತನಾಡಿದ ವಿಷಯದ ಗುಂಗಿನಲ್ಲಿಯೇ ಸಿಕ್ಕಿಕೊಂಡಿದ್ದನು. ಅದೇ ವಿಚಾರವಾಗಿ ಮತ್ತೇನಾದರೂ ಹೆಚ್ಚಿನ ವಿಚಾರಗಳು ತಿಳಿಯುವುದೇನೋ ಎಂದು ಕಾತುರನಾಗಿದ್ದನು.

ಹಾಗೆಯೇ ತಟ್ಟನೆದ್ದು "ತಾತಾ, ನಿನ್ನ ಅಣ್ಣ ಅಲ್ಲಿಗೆ ಹೋಗಿದ್ದಾಗ, ಅಲ್ಲಿ ಒಬ್ಬ ಸಿಪಾಯಿ ಬಾರು ಮಾಡಿನ ಕೋವಿಯನ್ನು ಹಿಡಿದುಕೊಂಡಿದ್ದನೆಂದು ಹೇಳಿದೆಯಲ್ಲಾ, ಆಮೇಲೇನಾಯಿತು" ಎಂದು ಯುವಕನು ಕುತೂಹಲದಿಂದ ಕೇಳಿದನು.

ಹುಡುಗನ ಪ್ರಶ್ನೆ ಮುದುಕನಿಗೆ ಕೇಳಿಸಲಿಲ್ಲವೇನೋ, ಮುದುಕ ಏನೂ ಹೇಳದೆ ಸ್ಥಿಮಿತನಾದವನಂತೆ ಯುವಕನ ಕಡೆ ನೋಡುತ್ತಿದ್ದ.

"ಆ ಸಿಪಾಯಿ ಹೇಳಿದ ಕಾಗದದ ವಿಚಾರ ಯೋಚನೆ ಮಾಡುತ್ತಿದ್ದೇನೆ. ನೋಡು, ನಾನು ಪ್ಲಾಂಟಗೆ ಹೇಳುವುದು ಮರತೆ. ಕೊನೆಗೆ ಹೆಂಗಸು ಸಹಾ ಸುಲಭವಾಗಿ ಹುಡುಕಲು ಅನುಕೂಲವಾಗುವಂತೆ, ಆ ಕಾಗದದಲ್ಲಿ ಗುರುತು ಮಾಡಿದೆ. ಆ ಜಾಗ ಯಾವುದೆಂಬುದು ನಿನಗೆ ಗೊತ್ತೇ? ಬೋಗಾತಿ ಕಣಿವೆ ಮೂರು ಭಾಗವಾಗಿ ಹೋಗುತ್ತದೆ, ಅಲ್ಲೇ ಮಧ್ಯಭಾಗದಲ್ಲಿ"

"ಅಲ್ಲಿ ತೋಡಬಾರದೆ"

"ನನ್ನ ಅದೃಷ್ಟವನ್ನು ಪರೀಕ್ಷೆಮಾಡುತ್ತೇನೆ"

"ತಾತಾ, ನಿನಗೆ ಆಸ್ತಿ ದೊರತರೆ, ಅದನ್ನೇನು ಮಾಡುವೆ"

"ಮಾಡುವುದೇ?" ಯುವಕನ ಮಾತು ಕೇಳಿ ಮುದುಕನಿಗೆ ನಗು ಬಂತು. "ನನಗೆ ಅದು ದೊರೆಯಬೇಕು, ಆಗ ಏನು ಮಾಡುವುದೆಂದು ಹೇಳುತ್ತೇನೆ. ನನಗೆ ಅದು ದೊರೆಯಬೇಕು, ಅಷ್ಟೆ."

ಆಸ್ತಿ ದೊರೆತರೆ ತಾನು ಏನು ಮಾಡುವುದಾಗಿ ಮುದುಕ ಹೇಳಲಾರದೆ ಹೋದ. ಅವನ ಜೀವಮಾನದಲ್ಲಿ ಈ ರೀತಿಯ ಪ್ರಶ್ನೆಯನ್ನು ಆತನಿಗೆ ಹಾಕಿದುದು ಇದೇ ಮೊದಲು. ಅವನ ಮನಸ್ಸಿನಲ್ಲಾದ ಪರಿಣಾಮವನ್ನು ನೋಡಿದರೆ ಯುವಕನು ಹಾಕಿದ ಪ್ರಶ್ನೆ ಯೋಚನೆಮಾಡಲೂ ಸಹ ಅನರ್ಹ ವೆಂದು ಅದೊಂದು ಹುಚ್ಚು ಪ್ರಶ್ನೆಯೆಂದು ಅವನ ಮನಸ್ಸಿಗೆ ಬಂತು. ಆದರೆ ಯುವಕನಿಗೆ ಮಾತ್ರ ಬುದ್ಧಿ ಕೆಡುವಂತಹ ಮತ್ತೊಂದು ಯೋಚನೆ ಹೊಳೆದು ತಲೆ ಕೆಟ್ಟಿತು. ಮುದುಕರು ಮಾತ್ರವೇ ಏಕೆ ಈ ರೀತಿ ಗುಪ್ತ ಧನವನ್ನು ಹುಡು ಕಲು ಪ್ರಯತ್ನಮಾಡುತ್ತಾರೆ ಎಂದು ಅವನಿಗೆ ಆಶ್ಚರ್ಯವಾಯಿತು. ಕೇವಲ ಕೆಲವೇ ದಿನಗಳಲ್ಲಿ ಆಯುಸ್ಸು ಮುಗಿದು ಸಾಯುವ ಅವರಿಗೆ ಇದರಿಂದೇನು ಪ್ರಯೋಜನವಾದೀತು ? ಈ ಪ್ರಶ್ನೆಯನ್ನು ತನ್ನ ಮನಸ್ಸಿನಲ್ಲಿಯೇ ಇಟ್ಟು ಕೊಂಡಿರಲು ಸಮಾಧಾನವಿಲ್ಲ. ಆದರೆ, ಒಂದು ವೇಳೆ ಮುದುಕನಿಗೇ ಈ ಪ್ರಶ್ನೆಯನ್ನು ಹಾಕಿದಿದ್ದರೆ ಅವನಿಗೆ ಉತ್ತರ ಹೇಳಲು ಸಾಧ್ಯವಾಗುತ್ತಿತ್ತೊ ಇಲ್ಲವೋ ?

ಅತ್ತಲಾಗಿ ಸೂರ್ಯನು ಮಂಜನ್ನು ಬೇಧಿಸಿಕೊಂಡು ರಕ್ತವರ್ಣವಾಗಿ ತನ್ನ ಕಿರಣಗಳನ್ನು ಹರಡಲಾರಂಭಿಸಿದನು. ಎಲ್ಲಾ ಕಡೆಯೂ ಗಿಡ, ಮರ, ಬಳ್ಳಿಗಳಲ್ಲಿ ಹೂಗಳು ಅರಳಿ, ತಮ್ಮ ಸಂತೋಷವನ್ನು ಸೂಚಿಸುವುದ ಕ್ಕಾಗಿಯೋ ಎನ್ನುವಂತೆ ಕಂಪನ್ನು ಹರಡುತ್ತಿತ್ತು.

ಯುವಕನೂ ಮತ್ತು ಮುದುಕನೂ ಬೇರೆ ಬೇರೆಯಾಗಿ ಹೊರಟು ತಮ್ಮ ಕುರಿಮಂದೆಯ ಒಂದೊಂದು ಕಡೆ ಒಬ್ಬೊಬ್ಬರಂತೆ ನಿಂತರು. ಅಲ್ಲಾಡದೆ, ಜೀವರಹಿತವಾದ ಕಲ್ಲುಗಳಂತೆ ನಿಂತು ಭೂಮಿಯನ್ನೇ ದಿಟ್ಟಿಸಿ ನೋಡುತ್ತಾ, ಒಬ್ಬನು ಹುದುಗಿಟ್ಟಿರುವ ಧನದ ವಿಚಾರವಾಗಿಯೂ, ಮತ್ತೊಬ್ಬನು ಹಿಂದಿನ ರಾತ್ರಿ ನಡೆದ ಸಂಭಾಷಣೆ ಮತ್ತು ಮನುಷ್ಯನ ಆಶ್ಚರ್ಯಕರವಾದ ಸೌಖ್ಯದ ಕಲ್ಪನೆಯ ವಿಚಾರವಾಗಿಯೂ ಯೋಚಿಸಲಾರಂಭಿಸಿದರು. ಯುವಕನಿಗೆ ಈ ಗುಪ್ತ ಧನದ ವಿಚಾರದಲ್ಲಿ ಅಷ್ಟಾಗಿ ಆಸಕ್ತಿ ಕಾಣಲಿಲ್ಲ.

ಇದ್ದಕ್ಕಿದ್ದ ಹಾಗೆ ಮಂದೆಯಲಿದ್ದ ಕುರಿಗಳು ಯಾವುದೋ ಹೆದರಿಕೆಯಿಂದ ಪಕ್ಕಕ್ಕೆ ನುಗ್ಗಿತು. ತಾನೂ ಹೆದರಿದ ಯುವಕನು

ಆದರ ಜತೆಯಲ್ಲಿಯೇ ಕೊಂಚ ದೂರ ಓಡಿದವನು, ನಿಂತು "ಏ ನಿಮಗೇನು ಹುಚ್ಚು ಹಿಡಿದಿದೆಯೇ, ನಿಂತುಕೊಳ್ಳಿ, ನಿಂತುಕೊಳ್ಳಿ" ಎಂದು ಕೂಗಿದನು.

ಅತ್ತಲಾಗಿ ಸೂರ್ಯನು ತನ್ನ ಬಿಸಿಯ ಕಿರಣಗಳನ್ನು ಭೂಮಿಯ ಮೇಲೆ ಹರಡಿದನು. ರಾತ್ರಿಯ ವೇಳೆ ಓಡಾಡುವ ಪ್ರಾಣಿ ಪಕ್ಷಿಗಳು ಈಗ ತಮ್ಮ ತಮ್ಮ ಜಾಗಗಳಲ್ಲಿ ಹಾಗೆಯೇ ಮುದುರಿಕೊಂಡವು. ಯುವಕನೂ ಮತ್ತೊಂದು ಕಡೆ ಮುದುಕನೂ ತಮ್ಮ ತಮ್ಮ ದೊಣ್ಣೆಗಳನ್ನು ಹಿಡಿದು ಕೊಂಡು ಅಲುಗಾಡದೆ ಯೋಚನಾಕ್ರಾಂತರಾಗಿ ನಿಂತರು. ಸಮಾಧಿಗಳ ಮುಂದೆ ನಿಂತಿರುವ ಫಕೀರರಂತೆ ಅವರು ಆಗ ಕಾಣುತ್ತಿದ್ದರು. ಒಬ್ಬರ ಇರವು ಮತ್ತೊಬ್ಬರಿಗೆ ತಿಳಿದಿರಲಾರದು. ಇಬ್ಬರೂ ತಮ್ಮ ಭಾವನಾ ಪ್ರಪಂಚದಲ್ಲಿ ಮುಳುಗಿದ್ದರು. ಮಂದೆಯಲ್ಲಿ ಕುರಿಗಳೂ ಸಹಾ ಏನೋ ಯೋಚನೆ ಮಾಡುತ್ತಿದ್ದವು ........

———:———

# ಗಾರ್ಕಿ

ವ್ಯಕ್ತಿಯಲ್ಲವು **ಗಾರ್ಕಿ !** ಅದು ಮಹತ್ತಮ ಶಕ್ತಿ !
ಅವ್ಯಕ್ತದನುಭೂತಿ–ತಾನೆ ಮೈವೆತ್ತಂತೆ
ಭವ್ಯಾತ್ಮನುಸಿರೆ ಘನ ಸಂಗೀತವಾದಂತೆ
ಮುಕ್ತಮನ ಮೈದುಂಬಿ ತನ್ನ ಮೈಮರೆತಂತೆ
ಭವ್ಯತೆಯ ಭಾವನಾಲಹರಿ ಚಿಗುರೊಡೆದಂತೆ

ವ್ಯಕ್ತವೇಷದಿ ಸುಪ್ತಸಾಮರ್ಥ್ಯಕಿದು ಯುಕ್ತಿ !
ಗಾಳಿಗೂ ಹಗುರಾಗಿ – ಅಮೃತಕೂ ಮೇಲಾಗಿ
ಲೀಲಾತರಂಗಿಣಿಯ ಜಲವಲೆಯ ಮೇಲೊರಗಿ
ಕಾಲಮಾನದ ಕಲ್ಪತರುವಿನಿವಣ್ಣಾಗಿ
ಬಾಳಿನಲಿ ಬಂಧುರತೆ ಬಾನಗಲದಂತಾಗಿ

ನಮ್ಮ ಜೀವನಸುಧೆಯು ಹೊನಲನ್ನೆ ಹರಿಯಿಸಿದೆ
ದಿವ್ಯದೀಪದ ಹಣತೆ ಧರೆಯನ್ನೆ ಬೆಳಗಿಸಿದೆ !
ಶತಕೋಟಿ ಕಣ್ಣುಗಳ ನೋಟದಲಿ ಚಿರವಾಗಿ
ವಿತತ ಯಶ ನಿಂತಿರುವೆ ; ವಂದಿಸುವೆ ತಲೆವಾಗಿ !

—ಆರ್ತಿಕ ವೆಂಕಟೇಶ

———:———

# ಚೆಕಾಫರ ಕಾಗದಗಳು

ಅನುವಾದಕ : ತ. ರಾ. ಸುಬ್ಬರಾಯು

( ಆಂಟನ್ ಚೆಕಾಫ್ ೧೮೬೦–೧೯೦೪ )

ಆಂಟನ್ ಚೆಕಾಫ್ ರಷ್ಯದ ಕಥೆಗಾರರಲ್ಲಿ, ನಾಟಕಕಾರರಲ್ಲಿ ಚಿರಂಜೀವಿ. ಜಗತ್ಸಾಹಿತ್ಯದಲ್ಲಿ ಈತನದು ಅಮೃತಸ್ಥಾನ. ಈತನ ತಂದೆ ಒಬ್ಬ ವ್ಯಾಪಾರಿ. ತಾತ ಶ್ರೀಮಂತರ ಗುಲಾಮನಾಗಿದ್ದ. ಚೆಕಾಫ್ ಹುಟ್ಟಿದ್ದು ಅಜೋವ್ ಕಡಲ ತಡಿಯ ಟಾಗನ್‌ರಾಗ್ ಪಟ್ಟಣದಲ್ಲಿ. ಕಲಿಯಲು ಹೊರಟಿದ್ದು ವೈದ್ಯವಿದ್ಯೆ; ಮಾಡಿದ್ದು ಸಾಹಿತ್ಯಸೇವೆ ಮೊದ ಮೊದಲು ಕೆಲವು ಹಾಸ್ಯಕ್ಕಾಗಿ ಮೀಸಲಾದ ಪತ್ರಿಕೆಗಳಿಗೆ ತನ್ನ ಕತೆಗಳನ್ನು ಕಳಿಸುತ್ತಿದ್ದರು. ಆಗಿನ ಕಥೆಗಳಲ್ಲಿ ವ್ಯಂಗ್ಯ ಬಹಳ. 'ಮೋಟ್ಲಿ ಸ್ಟೋರೀಸ್' ಎಂಬ ಕಥಾಸಂಗ್ರಹವೇ ಒಂದಿದೆ ಈ ಅಣಕದ ಕಥೆಗಳದು.

ಗಾರ್ಕಿ, ಟಾಲ್ಸ್‌ಟಾಯರಂತೆ, ಕ್ರಾಂತಿಗೆ ಪಕ್ವವಾಗುತ್ತಿದ್ದ ದೇಶದ ಘೋರ ಪರಿಸ್ಥಿತಿ, ಚೆಕಾಫರ ಸಾಹಿತ್ಯದ ಮೇಲೂ ಪರಿಣಾಮ ಬೀರಿತು. ಈ ಪರಿಸ್ಥಿತಿಯ ಸೆಳೆತಕ್ಕೆ ಸಿಕ್ಕಿದಂತೆ ಧ್ವನಿಯಲ್ಲಿದ್ದ ಹಗುರ ನಗೆ ಹೋಗಿ, ವಿಷಣ್ಣತೆ, ನೋವು ಮೂಡಿತು. ಚೆಕಾಫರ ಕೃತಿಗಳಲ್ಲಿ ಈ ಭಾವ ಮೊಟ್ಟಮೊದಲಬಾರಿಗೆ ಕಾಣುವುದು ಇವರ "ಇವಾನೋವ್" ಎಂಬ ನಾಟಕದಲ್ಲಿ. ಕಾರ್ಗತ್ತಲು ಕವಿದ ಮಾನವ ಬಾಳು ಈ ನಾಟಕ, ಕಥೆಗಳಲ್ಲಿ ಇನ್ನಷ್ಟು ಕರ್‍ರಗೆ ಪ್ರತಿಬಿಂಬಿತವಾಗಿದೆ.

'ಅಂಕಲ್ ವಾನ್ಯಾ', 'ಮೂವರು ಸೋದರಿಯರು', 'ಚೆರಿ ತೋಟ', 'ಮೇಳದ ಕನ್ಯೆಯರು', 'ಕಂದರ', 'ಹುಲ್ಲುಗಾವಲು', 'ಈಸ್ಟರ್ ಸಂಜೆ', 'ದ್ವಂದ್ವ ಯುದ್ಧ', 'ವಾರ್ಡ್ ನಂ. ೬' ಇವು ಚೆಕಾಫರ ಕೃತಿಗಳೆಲ್ಲಾ ಅತ್ಯಂತ ಹೆಸರುವಾಸಿಯಾದವು.

ಚೆಕಾಫ್ ನಾಟಕರಚನೆಯಲ್ಲಿ ಸಿದ್ಧಹಸ್ತರಾದರೂ, ಸಣ್ಣಕಥೆಗಳ ರಂಗದಲ್ಲಿ ಇವರದೇ ಒಂದು ವಿಶಿಷ್ಟವಾದ ಕಲಾಮಾರ್ಗ. ಇಂದಿನ ಎಷ್ಟೋ ಜನ ಕಥೆಗಾರರು, ಚೆಕಾಫರ ಕಲೆಯ ನಿತ್ಯನಂದಾದೀಪದಲ್ಲಿ ತಮ್ಮ ಕಲೆಯ ಹಣತೆ ಹಚ್ಚಿಕೊಂಡು, ತಮ್ಮ ದಾರಿ ಬೆಳಗಿಸಿಕೊಂಡಿದಾರೆ.

ಬಡತನದಲ್ಲಿ ಚೆಕಾಫ್ ಶುದ್ಧ ಸರಸ್ವತಿ ಪುತ್ರ. ಜತೆಗೆ ತುಂಬಾ ಉದಾರಿ. ಎಲ್ಲಿ ಕ್ಷಾಮ ಬರಲಿ, ಎಲ್ಲಿ ರೋಗ ಹರಡಲಿ ಅಲ್ಲಿ ಸೇವೆಗೆ ಓಡಬೇಕು. ಇದರ ಜತೆಗೆ ಹುಟ್ಟುತ್ತಲೇ ಅಸ್ತಮದ ಬುತ್ತಿ ಕಟ್ಟಿಕೊಂಡು ಬಂದಿದ್ದರು. ಬಿಡುವಿಲ್ಲದ ದುಡಿತ, ಸಾಕಷ್ಟು ಪ್ರತಿಫಲ ಕೊಡದ ಸಾಹಿತ್ಯಸೇವೆ, ಜಗತ್ತಿನ ದುಃಖವನ್ನೆಲ್ಲಾ

ತನ್ನದಾಗಿ ಮಾಡಿಕೊಂಡು ಕೊರಗುವ ಹೃದಯ, ಬಿಟ್ಟು ಬಿಟ್ಟು ಬರುವ ವ್ಯಾಧಿ - ಚೆಕಾಫ್ 'ಬಾಳು ಬೇಸರ' ಎಂದು ಗಾರ್ಕಿಗೆ ಕಾಗದ ಬರೆದರೆ ಅದು ಎದೆಯಿಂ ಬಂದ ಮಾತು.

ಚೆಕಾಫ್ ಆದರ್ಶಪುತ್ರ, ಅಷ್ಟೇ ಒಳ್ಳೆ ಗಂಡ, ತಂದೆ, ಗೆಳೆಯ, ಸಾಹಿತಿ ಎದೆ ನೀಡಿ ಎದೆ ಗೆಲ್ಲುವ ಗೆಳೆತನ ಅವರದು. ಅವರ ಕಾಲದ ಸಾಹಿತಿಗಳೆಲ್ಲಾ ಅ ರಿಗೆ ಗೆಳೆಯರಾಗಿದ್ದರು. ಎಲ್ಲರ ವಿಶ್ವಾಸ, ಪ್ರೇಮಕ್ಕೆ ಪಾತ್ರರಾಗಿದ್ದರು.

ಚೆಕಾಫ್‌ಗೆ ದೇಶಸಂಚಾರದ ಪ್ರೀತಿ ತುಂಬಾ ಇತ್ತು. ಅವಕಾಶ ದೊರೆತಾ ಲೆಲ್ಲಾ ದೇಶಾಟನೆ ಮಾಡಿ ಬರುತ್ತಿದ್ದರು. ಯೂರೋಪನ್ನು ಎರಡು ಬಾರಿ ಸುತ್ತಿ ಬಂದಿದ್ದರು; ಇಂಡಿಯಾ, ಮಲೆಯಾಗಳಿಗೆ ಕೂಡ ಬಂದು ಹೋಗಿದ್ದರು. ಎ ಹೋದರೂ ತಮ್ಮ ದೇಶಕ್ಕೆ ತಾನೇನು ಮಾಡಬಹುದು ಎಂಬ ಬಯಕೆ, ಕಾತುರ ಖಾಯಿಲೆ ಎಂತ ಪ್ಯಾರಿಸ್ಸಿಗೆ ಹೋದರೆ, ಟಾಗನ್‌ರಾಗ್ ಸರಸ್ವತೀ ಭಂಡಾರ ಫ್ರೆಂಚ್ ಸಾಹಿತ್ಯದ ಗ್ರಂಥಗಳ ಸಂಗ್ರಹಮಾಡಿ ಕಳಿಸುವ ಕೆಲಸಮಾಡಿದರು. ಕ್ಷಯ ಬಂದು, ಯಾಲ್ಟಾದಲ್ಲ ನೆಲೆಸಿದರೆ, ಯಾಲ್ಟಾದಲ್ಲಿಯ ಇವರ ಮನೆ ದಿಕ್ಕಿಲ್ಲದ ಕ್ಷಯ ರೋಗಿಗಳ ಸೇವಾಶ್ರಮವಾಗಿ ಹೋಯಿತು.

ತಾವು ನರಳುತ್ತಿದ್ದರೂ ಅದನ್ನು ಇನ್ನೊಬ್ಬರಿಗೆ ತೋರಗೊಡಬಾರದು, ಅ ರಿಂದ ಅವರಿಗೆ ವ್ಯಥೆಯಾದೀತು ಎಂಬ ಮೃದುಜೀವ ಚೆಕಾಫ್. ರಕ್ತ ಕಾರಿ ವಸ್ತ್ರ ತೊಯ್ದುಹೋಗುತ್ತಿದ್ದರೂ ಯಾರಿಗೂ ಹೇಳುತ್ತಿರಲಿಲ್ಲ, ತೋರಿಸುತ್ತಿರಲಿಲ್ಲ ಮಾಸ್ಕೋ ಆಸ್ಪತ್ರೆಯಲ್ಲಿ ಬದುಕುವ ಭರವಸೆ ಇಲ್ಲದೆ ಮಲಗಿದ್ದಾಗ ಇವರ ತಂ ನೋಡಲು ಬಂದರೆ. ಮಾತಾಡಲು ಶಕ್ತಿಯಿಲ್ಲದಿದ್ದರೂ 'ತಂದೆಗೆ ಈ ವಿಷಯ ಹೇ ಬೇಡ' ಎಂದು ಚೀಟಿ ಬರೆದಿದ್ದರಂತೆ ಚೆಕಾಫ್. ಎಷ್ಟು ಮುಚ್ಚಿಟ್ಟರೂ ಕಡೆ ಕ್ಷಯರೋಗ ಅವರ ಬಲಿ ತೆಗೆದುಕೊಂಡೇ ಬಿಟ್ಟಿತು.

ಫ್ರಾನ್ಸಿನ ಬಾಡೆನ್ ವೀಲೆರ್ ಎಂಬ ಆರೋಗ್ಯತಾಣದಲ್ಲಿ ೧೯೦೪ರಲ್ಲಿ ಚೆಕಾಫ ಕಣ್ಮರೆಯಾದರು. ಮೃತರಾದಾಗ ಇವರಿಗೆ ನಲವತ್ತು ನಾಲ್ಕುವರ್ಷ ಮಾ ವಯಸ್ಸು. ಇವರ ಕಡೆಯಾಸೆ—ರಷ್ಯದಲ್ಲಿ ಸಾಯಬೇಕೆಂಬುದು. ಸಾಯು ಗಳಿಗೆಯವರೆಗೂ ರಷ್ಯಕ್ಕೆ ಹಿಂತಿರುಗಲು ಹಡಗಿನ ಅನುಕೂಲವಾಗುವುದೇನೊ ಎಂತ ವಿಚಾರಿಸುತ್ತಿದ್ದರಂತೆ. ತಾಯಿಮಣ್ಣಿನ ಮೇಲೆ ಅಷ್ಟು ಪ್ರೀತಿ.

ಅಂತೂ ತುಂಬಾ ಅಪೂರ್ವಜೀವ ಅಂಟನ್ ಚೆಕಾಫ್.

೧

ಯಾಲ್ಟಾ, ಡಿಸೆಂಬರ್ ೩, ೧೮೯೮

ನಿನ್ನ ಈ ಹಿಂದಿನ ಕಾಗದ ಓದಿ ತುಂಬಾ ಸಂತೋಷವಾಯಿತು. ಸಾವಿರ ವಂದನೆ. 'Uncle Vanya' ಬಹಳ ದಿನಗಳ ಕೆಳಗೆ ಬರೆದದ್ದು; ನಾಟಕ ಆಡಿದಾಗ ಹೇಗಿರುತ್ತದೋ ನಾ ನೋಡಿಲ್ಲ. ಇತ್ತೀಚೆಗೆ ಎಷ್ಟೋ ಕಡೆ ಅದನ್ನು ಆಡುತ್ತಿದ್ದಾರಂತೆ. ನಾಟಕಗಳ ಬಗ್ಗೆ ನನಗೇನೋ ಅಷ್ಟಕ್ಕಷ್ಟೆ; ರಂಗಭೂಮಿಯ ಸಹವಾಸ ನಾ ಬಿಟ್ಟು ಎಷ್ಟೋ ದಿನವಾಯಿತು. ಮತ್ತೆ ಆ ಸಂಬಂಧ ಬೆಳಸುವಾಸೆ ನನಗಿಲ್ಲ.

ನಿನ್ನ ಕಥೆಗಳ ಬಗ್ಗೆ ನನ್ನ ಅಭಿಪ್ರಾಯ ಏನು ಎಂತ ಕೇಳಿದೀಯ. ಏನು ಹೇಳಲಿ? ಎಲ್ಲ ಕಥೆಗಳಲ್ಲೂ ಪ್ರತಿಭೆ, ನಿಜವಾದ, ಉಜ್ವಲವಾದ ಪ್ರತಿಭೆ ಎದ್ದು ಕಾಣಿಸುತ್ತದೆ. 'Steppe' ಯಲ್ಲಿ ಆ ಶಕ್ತಿ ತುಂಬಾ ಪ್ರಭಾವಯುತವಾಗಿ ವ್ಯಕ್ತವಾಗಿದೆ. ಓದಿದ ಮೇಲೆ ಅದು ನಾನು ಬರೆದ ಹಾಗಿಲ್ಲವಲ್ಲಾ ಎಂತ ಎಷ್ಟೋ ಹೊಟ್ಟೆಕಿಚ್ಚುಪಟ್ಟೆ; ನಿಜವಾಗಿಯೂ. ನೀನು ಕಲಾವಿದ, ಜಾಣ, ಒಳ್ಳೆ ಭಾವಗ್ರಾಹಿ; ಬರೆಯುವುದನ್ನೆಲ್ಲಾ ಕಣ್ಣಲ್ಲಿ ಕಂಡು, ಮುಟ್ಟಿನೋಡಿ ಅನುಭವಿಸಿದ ಹಾಗೆ ಬರೆಯುತ್ತಿ. ಅದೇ ನಿಜವಾದ ಕಲೆ. ಇದಕ್ಕಿಂತ ಹೆಚ್ಚು ನಾನೇನು ಹೇಳಬಲ್ಲೆ. ಎಂದಾದರೂ ಒಬ್ಬರನ್ನೊಬ್ಬರು ಸಂಧಿಸಿ ಒಂದೆರಡು ಗಂಟೆ ಮಾತಾಡಬಹುದಾದರೆ, ನಿನ್ನ ಬಗ್ಗೆ ನನಗೆಷ್ಟು ಮೆಚ್ಚುಗೆಯಿದೆ, ನಿನ್ನ ಪ್ರತಿಭೆಯ ಬಗ್ಗೆ ನಾನೆಷ್ಟು ಕನಸು ಕಟ್ಟಿಕೊಂಡಿದೇನೆ ಎಂಬುದು ನಿನಗೇ ಗೊತ್ತಾಗುತ್ತದೆ.

ಇನ್ನು ಕುಂದುಗಳ ವಿಚಾರ? ಆದರೆ ಇವರ ವಿಚಾರ ಹೇಳುವುದು ಅಷ್ಟು ಸುಲಭವಲ್ಲ. ಪ್ರತಿಭಾಶಾಲಿಯ ಕುಂದುಕಗಳ ವಿಚಾರ ಮಾತನಾಡುವುದು ತೋಟದಲ್ಲಿರುವ ಮರದ ಕುಂದುಗಳನ್ನು ಎಣಿಸಿದ ಹಾಗೆ; ಕುಂದಿರುವುದು ಮರವಲ್ಲಲ್ಲ; ನೋಡುವ ನೋಟದಲ್ಲಿ, ನೋಡುವವನ ಅಭಿರುಚಿಯಲ್ಲಿ.

ಹಾಗೇ ನನ್ನ ದೃಷ್ಟಿಯಿಂದ ಕುಂದು ಎಂದು ಕಂಡದ್ದನ್ನು ಹೇಳುತ್ತೇನೆ. ಎಲ್ಲಕ್ಕಿಂತ ಹೆಚ್ಚಾಗಿ ನಿನಗೆ ಸಂಯಮ ಸಾಲದು. ನಾಟಕದ ಪ್ರೇಕ್ಷಕ ಸಂಯಮವಿಲ್ಲದೆ ತನ್ನ ಆನಂದೋದ್ರೇಕವನ್ನು ಗಟ್ಟಿಯಾಗಿ ವ್ಯಕ್ತಪಡಿಸಿ,

ತಾನು ಮೆಚ್ಚಿದ್ದನ್ನು ಇತರರು ಮೆಚ್ಚುವ ಹಾಗೆ ಮಾಡುವಂತೆ ನೀನೂ ಕೂಡ ಈ ಸಂಯಮರಾಹಿತ್ಯ ಹೆಚ್ಚಾಗಿ ಕಂಡುಬರುವುದು ನಿನ್ನ ಪ್ರಕೃತಿ ವರ್ಣನೆಯಲ್ಲಿ; ಸಂಭಾಷಣೆಯ ಮಧ್ಯ ಅದನ್ನು ಹೊಸೆದು ಬಿಡುತ್ತೀಯ. ಆ ವರ್ಣನೆಗಳನ್ನು ಓದಿದರೆ ಅವು ಇನ್ನು ಸಂಕ್ಷಿಪ್ತವಾಗಿ, ಎರಡು ಮೂರು ಸಾಲಿನಲ್ಲಿ ಅಚ್ಚುಕಟ್ಟಾಗಿ ಮುಗಿಯಬಹುದಾಗಿತ್ತು ಎನಿಸುತ್ತದೆ. 'ಮೃದುತೆ, ಪಿಸು ಮಾತು, ಮುಖಮಲ್ಲಿನ ಹಾಗೆ' ಈ ಶಬ್ದಗಳು ಮೇಲಿಂದ ಮೇಲೆ ಬಂದು, ಆ ಶಬ್ದಾಡಂಬರ ಬೇಸರ ಬರಿಸುತ್ತದೆ. ಈ ಸಂಯಮರಾಹಿತ್ಯದ ಲೋಪ ಹೆಂಗಸರನ್ನೂ, ಪ್ರಣಯ ಸನ್ನಿವೇಶಗಳನ್ನು ಬಣ್ಣಿಸುವುದರಲ್ಲೂ ಕಾಣು ತ್ತದೆ. (ಉದಾ: 'ಮಾಲ್ವಾ' 'ತೆಪ್ಪದ ಮೇಲೆ' ಕಥೆಗಳಲ್ಲಿ) ಅದು ಕಲೆಯೂ ಅಲ್ಲ, ಕೈವಾಡವೂ ಅಲ್ಲ; ಬರೀ ಸಂಯಮ ರಾಹಿತ್ಯ. ಅಲ್ಲದೆ ಕಥೆಯ ರಚನೆಗೆ ಅನಗತ್ಯವಾದ ಶಬ್ದಗಳನ್ನೂ ತುಂಬಾ ಬಳಸುತ್ತೀಯ. ಅಲೆಗಳ ವಿಚಾರ ತುಂಬಾ ಬರೆಯುತ್ತಿ. ಕಲಿತವರ ಬಣ್ಣನೆಯಲ್ಲಿ ಬಿಗುಮಾನ, ಸುತ್ತ ಬಳಸು ಹೆಚ್ಚು. ಅಂದಮಾತ್ರಕ್ಕೆ ಕಲಿತವರನ್ನು ನೀನು ನೋಡಿಲ್ಲ ಎಂತಲ್ಲ; ನೋಡಬೇಕಾದ ರೀತಿಯಲ್ಲಿ ನೋಡಿಲ್ಲ.

ನಿನಗೆ ವಯಸ್ಸೆಷ್ಟು? ನೀನು ಯಾರೋ ನಿನ್ನದು ಯಾವ ಊರೋ ನಿನ್ನ ವಿಚಾರ ನನಗೆ ಏನೇನೂ ಗೊತ್ತಿಲ್ಲ. ಆದರೆ ಇಷ್ಟು ಮಾತ್ರ ಹೇಳಬಲ್ಲೆ. ಇನ್ನೂ ಚಿಕ್ಕವನಾಗಿರುವಾಗಲೆ ನಿಜನಿಯನ್ನು ಬಿಟ್ಟು, ಎರಡು ಮೂರು ವರ್ಷಗಳು ಸಾಹಿತಿಗಳ ಗುಂಪಿನಲ್ಲಿ, ಸಾಹಿತ್ಯದ ವಾತಾವರಣದಲ್ಲಿ ಓಡಾಡಿದರೆ ಮೇಲು. ಅಂದರೆ ನಮ್ಮ ಹಾಗೇ ಕೂಗಾಡಿ, ಮಾತಿನ ಲಾಗ ಹಾಕುವುದನ್ನು ನೀನೂ ಕಲಿಯಬೇಕು ಎಂದಲ್ಲ. ಸಾಹಿತ್ಯದಲ್ಲೇ ಮುಳುಗಿ ಮೈಮರೆಯಬೇಕು ಎಂತ; ಅಷ್ಟೆ. ಅಲ್ಲದೆ ಹಳ್ಳಿಗಾಡಿನಲ್ಲಿ ಮನುಷ್ಯ ಬಹು ಬೇಗ ಮುಪ್ಪಾಗುತ್ತಾನೆ. ಕೋರಲೆಂಕೊ, ಪೊಟಾಪೆಂಕೊ, ಮಾಮಿನ್, ಎರ್ಟೆಲ್ - ಎಲ್ಲಾ ಸೊಗಸಾದ ಜನ. ಮೊದಲ ಎರಡು ದಿನ ಇವರ ಸಹವಾಸದಿಂದ ನಿನಗೆ ಬೇಸರವಾಗಬಹುದು. ಆದರೂ ಒಂದೆರಡು ವರ್ಷದಲ್ಲಿ ಅವರ ಗೆಳೆತನ ಒಗ್ಗಿ, ನೀನೂ ಅವರನ್ನು ಪ್ರೀತಿಸಲಾರಂಭಿಸುತ್ತೀಯ. ರಾಜಧಾನಿಯ ಬೇಸರ, ಅಡ್ಡಿ ಆತಂಕದ ಬಾಳಿಗೆ, ಎಲ್ಲವನ್ನೂ ಇವರ ಸ್ನೇಹ ಮರೆಸುತ್ತದೆ ಅದಕ್ಕಿಂತ ಹೆಚ್ಚು ಇನ್ನೇನು ತಾನೇ ಬೇಕು?........

೨

ಯಾಲ್ಟಾ, ಜನವರಿ ೩, ೧೮೯೯

……ನನ್ನ ಕಾಗದವನ್ನು ನೀನು ತಪ್ಪಾಗಿ ಅರ್ಥಮಾಡಿಕೊಂಡಿರುವುದು ನಿನ್ನ ಕಾಗದದಲ್ಲಿ ಸ್ಪಷ್ಟವಾಗಿದೆ. ನಾನು ನಿನ್ನ ಶೈಲಿ ಒರಟು, ಗಡುಸು ಎಂತ ಹೇಳಲಿಲ್ಲ; ಬಳಕೆಯಲಿಲ್ಲದ ಮಾತಿನ ಉಪಯೋಗ ಹೆಚ್ಚು ಎಂತ ಹೇಳಿದೆ. ಉಳಿದ ಲೇಖಕರಲ್ಲಿ ಅಂತ ಪದಪ್ರಯೋಗ ಹೇಗೋ ಇದ್ದೀತಾಗಲಿ, ನಿನ್ನ ಮಧುರವಾದ ಶೈಲಿಯಲ್ಲಿ ಇಂಥ ಒಂದೊಂದು ಮಾತೂ ಅಪಸ್ವರ ನುಡಿಯುತ್ತವೆ ಎಂತಲೇ ಅದು ಬೇಡ ಎಂದೆ. ಅದೂ ನನ್ನ ಅಭಿಪ್ರಾಯ, ಅಭಿರುಚಿ. ಬಹುಶಃ ಶೈಲಿಯ ಬಗ್ಗೆ ನಾನು ಅತಿ ಸೊಗಸುಗಾರನೋ ಏನೋ, ಇಲ್ಲವೇ ತನ್ನನ್ನು ತಾನೆ ನಿಯಮಗಳಿಂದ ಬಂಧಿಸಿಕೊಂಡವನ ಸಂಕುಚಿತ ಬುದ್ಧಿ ಇದ್ದರೂ ಇರಬಹುದು … ..

ನಿನಗೆ ನೀನೇ ಗುರು ಎಂತ ಕಾಣುತ್ತದೆ. ಅಹುದೇನು? ಆದರೂ ನಿನ್ನ ಕಥೆಗಳಲ್ಲಿ ಎಂಥ ಸೊಗಸಾದ ಕಲೆಯ ಕೈವಾಡವಿದೆ. ನಿಜವಾಗಿಯೂ ನೀನೊಬ್ಬ ಮಹಾ ಕಲಾವಿದ; ನಿಜವಾಗಿಯೂ ಜ್ಞಾನಿ.

ನಿನ್ನಲ್ಲಿ ಎಲ್ಲೂ ಒರಟುತನವಿಲ್ಲ. ಮಾತು ಬಲು ಮಿದು, ಭಾವ ಸೂಕ್ಷ್ಮಾತಿಸೂಕ್ಷ್ಮ. 'ಹುಲ್ಲುಗಾವಲಿನಲ್ಲಿ' 'ತೆಪ್ಪದ ಮೇಲೆ' – ಇವೆರಡು ನಿನ್ನ ಕಥೆಗಳಲ್ಲೆಲ್ಲಾ ಅತ್ಯುತ್ತಮವಾದವು. ಈ ವಿಚಾರ ಆಗಲೇ ಹೇಳಿದೆನೇನು? ಖಂಡಿತವಾಗಿಯೂ ಅವು ಕೃತಿರತ್ನಗಳು. ಅವನ್ನು ಓದಿದರೆ ಅವನ್ನು ಸೃಷ್ಟಿಸಿದ ಕಲಾವಿದನ ಹಿರಿಮೆ ಎದ್ದು ಕಾಣುತ್ತದೆ. ನನಗೆ ಕಂಡ ಒಂದೇ ದೋಷ ಸಂಯಮರಾಹಿತ್ಯ, ಲಾಲಿತ್ಯಲೋಪ. ಮಾತು ಮಿಂಚು ಹೊಳೆದ ಹಾಗೆ ಬರಬೇಕು; ಹತ್ತು ಬರುವ ಕಡೆ ಒಂದು ಮಿನುಗಬೇಕು. ಅದೇ ಸೊಗಸು. ಆದರೆ ನಿನ್ನಲ್ಲಿ ಮಾತು ಹೆಚ್ಚು; ಎದ್ದು ಕಾಣುತ್ತದೆ ಈ ದೋಷ.

ನಿನ್ನ ಪ್ರಕೃತಿ ವರ್ಣನೆ ನಿಜವಾಗಿಯೂ ಕಲಾಸೃಷ್ಟಿ; ಒಳ್ಳೆ ಚಿತ್ರಗಾರ ನೀನು. ಕಡಲು ನಿಟ್ಟುಸುರಿಟ್ಟಿತು, ಮುಗಿಲು ದಿಟ್ಟಿಸಿ ನೋಡಿತು, ಹುಲ್ಲುಗಾವಲು ಅರಚಿತು, ಪ್ರಕೃತಿಯ ಪಿಸುಮಾತು, ಅಳು, ಕಣ್ಣೀರು – ಇವೆಲ್ಲ

ಸೊಗಸಾದ ಶಬ್ದಗಳೇ ನಿಜ. ಕೆಲವು ಸಲ ತುಂಬಾ ಹಿತವಾಗಿರುತ್ತವೆ. ಆದರೆ ಅತಿಯಾದರೆ ಬೇಸರ ಬರಿಸುತ್ತವೆ. ಸರಳತೆ ಸೌಂದರ್ಯದ ಬಾವುಟ. 'ಸೂರ್ಯ ಮುಳುಗಿದ' 'ಕತ್ತಲಾಯಿತು' 'ಮಳೆಬಂತು'—ಈ ಸರಳವಾದ ಶಬ್ದಗಳು ಎಷ್ಟುಪರಿಣಾಮಕಾರಿಯಾಗಬಲ್ಲವೋ ಯೋಚಿಸಿ ನೋಡು. ಈ ಸರಳತೆ ನಿನ್ನ ವಿಶಿಷ್ಟತೆ. ಎಲ್ಲರಿಗಿಂತ ಹೆಚ್ಚಾಗಿ ನಿನ್ನಲ್ಲಿ ಇದು ಕಂಡು ಬರುತ್ತದೆ....

೩

ಮಾಸ್ಕೊ : ಏಪ್ರಿಲ್ ೨೫, ೧೮೯೯.

....ಮೊನ್ನೆ ಲಿಯೋ ಟಾಲ್ಸ್‌ಟಾಯರ ಮನೆಗೆ ಹೋಗಿದ್ದೆ. ಎಷ್ಟು ಹೊಗಳಿದರು ಗೊತ್ತೆ ; 'ಅದ್ಭುತ ಕತೆಗಾರ' ಎಂದರು. ನಿನ್ನ 'ಜಾತ್ರೆ' 'ಹುಲ್ಲುಗಾವಲಿನಲ್ಲಿ' ಕಥೆ ಅವರಿಗೆ ತುಂಬಾ ಪ್ರಿಯವಾಗಿವೆ. ಆದರೆ 'ಮಾಲ್ವಾ' ಅಷ್ಟು ಹಿಡಿಸಿಲ್ಲ. ಹೇಳಿದರು "ನೀನು (ಅಂದರೆ ನಾನು) ಬೇಕಾದ್ದನ್ನು ಬರೆಯಬಲ್ಲೆ, ಆದರೆ ಮನೋ ನಿರೂಪಣೆ ಮಾಡಲಾರೆ. ಆದರೆ ಗಾರ್ಕಿಗೆ ಆ ಶಕ್ತಿಯಿದೆ. ತಾನು ಅನುಭವಿಸಿದ ಭಾವನೆಯನ್ನು ಕೂಡಾ ಸೊಗಸಾಗಿ ನಿರೂಪಿಸಬಲ್ಲ" ಉದ್ದಕ್ಕೂ ನಿನ್ನ ಮಾತೇ. ನೀನು ಮಾಸ್ಕೋಕ್ಕೆ ಬಂದರೆ ಜೊತೆಯಲ್ಲಿ ಕರೆದುಕೊಂಡು ಬರುತ್ತೇನೆ ಎಂತ ಹೇಳಿ ಬಂದಿದೇನೆ ; ಹೋಗೋಣ.

ಮಾಸ್ಕೋಕ್ಕೆ ನೀನು ಯಾವಾಗ ಬರುತ್ತಿ? ನನ್ನ ನಾಟಕ 'ದಿ ಸೀಗಲ್'ದ ಖಾಸಗಿ ಪ್ರದರ್ಶನವಿದೆ—ಗುರುವಾರ. ಆ ವೇಳೆಗೆ ಬಂದರೆ ನೀನೂ ಅದನ್ನು ನೋಡಬಹುದು........

ಪೀಟರ್ಸ್ ಬರ್ಗ್‌ನಿಂದ ತುಂಬಾ ಎದೆನೋಯಿಸುವ ಕಾಗದಗಳು ಬರುತ್ತಿವೆ. ನೋಡಿದರೆ ನರಕದಿಂದ ಬಂದಿವೆಯೇನೋ ಎನ್ನಬೇಕು ! ಇವಕ್ಕೆ ಏನು ಉತ್ತರ ಕೊಡಬೇಕೋ, ಏನು ಮಾಡಬೇಕೋ ನನಗಂತೂ ತೋಚುತ್ತಿಲ್ಲ. ಮನಸ್ಸನ್ನು ಅರಿತುಕೊಳ್ಳುವ ಶಕ್ತಿಯಿಲ್ಲದಿದ್ದಾಗ ಬದುಕು ತುಂಬಾ ಬೇಸರವಾಗುತ್ತದೆ .. ....

೪

ಯಾಲ್ಟಾ : ಜನವರಿ ೨, ೧೯೦೦

ಕಣ್ಣಾಮಣಿ ಅಲೆಕ್ಸಿ ಮಾಕ್ಸಿಮೋವಿಚ್,

ಶುಭವಾಗಲಿ ಹೊಸವರುಷ !

ನಿನ್ನ ಕೆಲಸ ಹೇಗೆ ನಡೆಯುತ್ತಿದೆ ? ಯೋಚನೆ ಹೇಗಿದೆ ? ಯಾಲ್ಟಾಕ್ಕೆ ಯಾವಾಗ ಬರುತ್ತೀಯ ? ಎಲ್ಲಕ್ಕೂ ವಿವರವಾಗಿ ಉತ್ತರ ಬರಿ. ನೀನು ಕಳಿಸಿದ ಫೋಟೋಗ್ರಾಫ್ ಬಂತು. ತುಂಬಾ ಚೆನ್ನಾಗಿದೆ. ವಂದನೆ !

ಇಲ್ಲಿಗೆ ಬರುವ ದುರ್ಬಲರ ಪರಿಹಾರಕ್ಕಾಗಿ ನಾವು ಮಾಡಿರುವ ಸಂಘಕ್ಕೆ ನೀನು ಮಾಡಿರುವ ಸಹಾಯಕ್ಕಾಗಿ ನಾನು ಚಿರಋಣಿ. ಏನಾದರೂ ಧನ ಸಂಗ್ರಹವಾಗಿದ್ದರೆ, ನನಗಾದರೂ ಕಳಿಸು, ಸಂಘಕ್ಕೇ ನೇರವಾಗಿ ಕಳಿಸಿದರೂ ಸರಿಯೆ. ಹೇಗೆ ಸರಿ ಕಾಣುತ್ತದೋ ಹಾಗೆ ಮಾಡು.

ನನ್ನ 'ಕಂದರದಲ್ಲಿ' ಕಥೆಯನ್ನು 'ಜಿಜನೂ' ಪತ್ರಿಕೆಗೆ ಕಳಿಸಿಕೊಟ್ಟೆ. ನಿನ್ನ 'ಅನಾಥ' ಎಂಬ ಕಥೆ ನನಗೆ ತುಂಬಾ ಒಪ್ಪಿಗೆಯಾಯಿತೆಂತ ಆಗಲೇ ಹೇಳಿದೆನೇನು ? ಅದನ್ನು ಮಾಸ್ಕೋದ ವಿಮರ್ಶಕರಿಗೆ ಕಳಿಸಿಕೊಟ್ಟಿದೇನೆ. ಮಾಸ್ಕೋದಲ್ಲೊಬ್ಬ ಡಾಕ್ಟರಿದಾರೆ. ಪ್ರೊಫೆಸರ್ ಫಾಟ್ ಎಂತ. ಅವರಿಗೆ ಸ್ಲೈಯೆಪ್ಟೆಸೋವ್ ಎಂದರೆ ಹುಚ್ಚು ಪ್ರೀತಿ. ಆದರೆ ತುಂಬಾ ವಿಮರ್ಶಕ. ಎಂತಲೇ ನಿನ್ನ ಕಥೆಯನ್ನು ಅವರಿಗೂ ಕಳಿಸಿದೇನೆ. 'ನನ್ನ ಸಹ ಯಾತ್ರಿಕ' ಎಂಬ ನಿನ್ನ ಕಥಾಸಂಗ್ರಹದಲ್ಲಿನ ಒಂದು ಕಥೆ ತುಂಬಾ ಸೊಗಸಾಗಿದೆ. 'ಹುಲ್ಲುಗಾವಲಿನಲ್ಲಿ' ಕಥೆಯಷ್ಟೇ ಪರಿಣಾಮಕಾರಿಯಾಗಿದೆ. ನಾನಾಗಿದ್ದಿದ್ದರೆ, ನಿನ್ನ ಮೂರು ಕಥಾ ಸಂಗ್ರಹದಲ್ಲಿ ಬಂದಿರುವ ಉತ್ತಮ ಕಥೆಗಳನ್ನೆಲ್ಲಾ ಆಯ್ದು ಒಂದು ರೂಬೆಲ್ ಬೆಲೆಯಿಟ್ಟು ಒಂವೇ ಸಂಗ್ರಹದಲ್ಲಿ ಅಚ್ಚುಮಾಡಿಸುತ್ತಿದ್ದೆ. ಆಗ ಒಂದು ಮಧುರವಾದ ಏಕಮುಖ ಕತೆ ಬರುತ್ತಿತ್ತು ; ಈಗೇನು ? ಎಲ್ಲಾ ಕಲಬೆರಕೆ. ನಿನ್ನ ಕಥೆಗಳೆಲ್ಲಾ ಚೆನ್ನಾಗಿವೆ. ಆದರೆ ಆ ಮೂರೂ ಸಂಗ್ರಹವನ್ನು ಓದಿದರೆ ಏನನಿಸುತ್ತದೆ ಗೊತ್ತೆ ? ಇವನ್ನೆಲ್ಲಾ ಬರೆದವನು ಒಬ್ಬನಲ್ಲ, ಏಳು ಜನ ಎನಿಸುತ್ತದೆ.

ಉತ್ತರ ಒಂದೆರಡು ಸಾಲು ಗೀಚುತ್ತಿ ತಾನೆ ?

೫

ಯಾಲ್ಟಾ : ಫೆಬ್ರವರಿ, ೩, ೧೯೦೦

ಪ್ರಿಯ ಅಲೆಕ್ಸಿ,

ನಿನ್ನ ಕಾಗದ. ನೀನು ಟಾಲ್ಸ್ಟಾಯ್, ಮತ್ತು ನನ್ನ 'ಅಂಕಲ್ ವಾನ್ಯಾ' ನಾಟಕದ ಬಗ್ಗೆ ಬರೆದದ್ದನ್ನು ಓದಿದೆ ತುಂಬಾ ಸಂತೋಷವಾಯಿತು. ಆ ನಾಟಕ ರಂಗಭೂಮಿಯ ಮೇಲೆ ಹೇಗೆ ರಂಜಿಸುತ್ತದೋ ನಾ ನೋಡಿಲ್ಲ. ಅಂತೂ ನನ್ನ ನೆನಪಿಟ್ಟುಕೊಂಡುದಕ್ಕಾಗಿ ತುಂಬಾ ವಂದನೆಗಳು. ಈ ಹಾಳು ಯಾಲ್ಟಾನಲ್ಲಿ ಗೆಳೆಯರ ಕಾಗದಗಳಿರದಿದ್ದರೆ ಬದುಕುವುದೇ ಕಷ್ಟ. ಕೆಲಸ ವಿಲ್ಲದ ಸೋಮಾರಿತನ, ಹೆಪ್ಪುಗಟ್ಟಿಸುವ ಚಳಿ, ಕಡಲ ತಡಿಯ ಮೇಲಿನ ಹಂದಿಗಳು, ಹೆಂಗಸರಂತೂ ಇಲ್ಲವೇ ಇಲ್ಲ; ಇಲ್ಲಿ ಇದ್ದರೆ ನಾಲ್ಕು ದಿನಕ್ಕೆ ಮನುಷ್ಯ ಪಸ್ಪಾಗಿ ಹೋಗುತ್ತಾನೆ. ನನಗಂತೂ ಹೇಳಲಾರದಷ್ಟು ಬೇಸರ ವಾಗಿದೆ. ಚಳಿಗಾಲ ಆರಂಭವಾಗಿ ಸ್ವಲ್ಪ ದಿನವಾದರೂ, ಯುಗ ಯುಗಾಂತರದಿಂದ ಹೀಗೇ ಇದೆಯೇನೋ ಎನಿಸಿ ಹೋಗಿದೆ.

ನಿನಗೆ ಪ್ಲೂರೆಸಿ (ಒಂದು ಬಗೆಯ ಹೃದ್ರೋಗ). ಹೀಗಿದ್ದರೂ ನಿಜನಿಯಲ್ಲೇ ಏಕಿದ್ದೀಯ? ಅಲ್ಲಿದ್ದು ಏನು ಮಾಡಬೇಕು ಎಂತ ಯೋಚನೆ? ಬಿಡಿಸಿಕೊಂಡು ಬರಲಾರದಷ್ಟು ಬಲವಾಗಿ ಅಂಟಿಕೊಂಡಿದೆಯೋ ಅದು ನಿನಗೆ? ಅದೆಂಥ ಗೊಂದಲ! ನೀನು ಹೇಳುವ ಹಾಗೆ ಮಾಸ್ಕೋದ ಮೇಲೆ ಪ್ರೀತಿ ಯಿದ್ದರೆ ಅಲ್ಲೇ ಹೋಗಿ ಇರಬಾರದೇಕೆ? ಮಾಸ್ಕೋದಲ್ಲಿ ನಾಟಕ ಮಂದಿರ ಗಳಿವೆ. ಹೊರದೇಶಕ್ಕೆ ಹೋಗಲು ಅನುಕೂಲವಿದೆ. ನಿಜನಿಯಲ್ಲಿದ್ದರೇನಿದೆ? ನೀನಾಯಿತು, ನಿನ್ನ ನಿಜನಿಯಾಯಿತು. ಹೆಚ್ಚು ಕವಲಿಸುವ ಹಾಗಿಲ್ಲ. ಹೆಚ್ಚು ದೇಶ ನೋಡಬೇಕು, ಹೆಚ್ಚು ವಿಷಯ ತಿಳಿದುಕೊಳ್ಳಬೇಕು ಎಂಬ ಆಸೆ ನಿನಗಿದೆ. ನಿನ್ನ ಮನಸೋ ಬಲು ಚುರುಕು. ಎಲ್ಲಾ ವಿಷಯ ಒಂದೇ ಗಳಿಗೆಯಲ್ಲಿ ತಿಳಿದುಕೊಳ್ಳುತ್ತೀಯ. ಆದ್ದರಿಂದ ಈಗ ಹೇಗಾಗಿದೆ ಗೊತ್ತೇ? ರಾವಣನ ಹೊಟ್ಟೆಗೆ ಅರೆಕಾಸಿನ ಮಜ್ಜಿಗೆ! ನಿನ್ನ ಕಥೆಗಳಲ್ಲಿದು ಚೆನ್ನಾಗಿ ಗೊತ್ತಾಗುತ್ತದೆ. ನಿನ್ನ ಕಥೆಗಳಲ್ಲಿ ಮೂರು ನಾಲ್ಕು ವ್ಯಕ್ತಿಗಳು ಬರುತ್ತಾರೆ. ಅವರು ನಿನ್ನ ಕಲ್ಪನೆ ಯಲ್ಲಿ ಮಾತ್ರ ಜೀವಿಸುತ್ತಾರೆ; ಸುತ್ತಲ ಜನರೊಂದಿಗೆ ಬೆರೆಯುವುದಿಲ್ಲ;

ಜನರೂ ಅವರೊಂದಿಗೆ ಬೆರೆಯುವುದಿಲ್ಲ. ಆದರೆ ನೀನು ಕ್ರಿಮಿಯಾ ವಿಚಾರ ವಾಗಿ ಬರೆದ ಕಥೆಗಳಲ್ಲಿ ಹಾಗಲ್ಲ. ಜನ, ನಿನ್ನ ಪಾತ್ರ ಒಂದಾಗಿದಾರೆ. ಇದು ಹೊಸ ಸ್ಥಳಕ್ಕೆ ಹೋಗಿ ಬಂದದ್ದರ ಪರಿಣಾಮ.—ಹೋಗಲಿ ಬಿಡು. ಏನೋ ದೊಡ್ಡ ಭಾಷಣವಾಗುತಾ ಇದೆ ನನ್ನ ಕಾಗದ. ಇಷ್ಟೆಲ್ಲಾ ಏಕೆ ಬರೆದೆ ಗೊತ್ತೇ ? ನಿಜನಿಬಿಟ್ಟು ಬಾ ಎಂದು ಹೇಳಲು. ನೀನಿನ್ನು ಯುವಕ. ಮೈಯಲ್ಲಿ ಕಸುವಿದೆ. ನಾನು ನಿನ್ನ ಹಾಗಿದ್ದಿದ್ದರೆ ಹಿಂದೂಸ್ತಾನ, ಪರ್ಷಿಯಾ— ನೂರು ದೇಶ ತಿರುಗಿ ಬರುತ್ತಿದ್ದೆ ; ಎರಡು ಮೂರು ವಿಷಯಗಳಲ್ಲಿ ಪದವೀ ಧರನಾಗುತ್ತಿದ್ದೆ. ಹಾಗೇ ಮಾಡುತ್ತಿದ್ದೆ! ಈ ಕಾಗದ ಓದಿ ನೀನು ನಗುತ್ತೀಯ ; ನಾಬಲ್ಲೆ. ಆದರೆ ನನಗೀಗ ನಲವತ್ತು ವರ್ಷ ವಯಸ್ಸು, ಜೊತೆಗೆ ಅಸ್ತಮಾ ಬೇರೆ. ಕಾಲಿಗೆ ಬೇಡಿ ಹಾಕಿದ ಹಾಗಾಗಿ ಬದುಕು ತುಂಬಾ ಬೇಸರವಾಗಿದೆ. ಮನಸ್ಸು ಹಕ್ಕಿಯ ಹಾಗೆ ಹಾರೇನು ಎನ್ನುತ್ತದೆ ; ಮೈ ಮಾತ್ರ ಕದಲದು. ಛಿ ! ಎಂಥಾ ದುರವಸ್ಥೆ ! ಏನಾದರಾಗಲಿ ; ನಿನ್ನ ಗೆಳೆತನವೊಂದು ಚಿರವಾ ಗಿರಲಿ. ಏನೋ ವೇದಾಂತಿಯ ಹಾಗೆ ತತ್ವ ಬೋಧೆ ಮಾಡುತ್ತಾನೆ ಎಂತ ಬೇಸರಪಟ್ಟುಕೊಳ್ಳಬೇಡ.

ಕಾಗದ ಬರಿ. ನಿನ್ನ 'ಫೋಮಾ ಗಾಡ್ರೀವ್' ಕಾದಂಬರಿ ಇದಿರು ನೋಡುತ್ತಿದೇನೆ. ಇನ್ನೇನೂ ವಿಶೇಷವಿಲ್ಲ. ಆರೋಗ್ಯ ನೋಡಿಕೊ. ಪ್ರೀತಿ ಯಿರಲಿ.

೬

ಯಾಲ್ಟಾ, ಫೆಬ್ರವರಿ, ೧೫, ೧೯೦೦

ಒಲವಿನ ಅಲೆಕ್ಸಿ,

'ನಿಜನಿ-ನೊವೊಗ್ರಾಡ್ ಲಿಸ್ಟಾಕ್' ನಲ್ಲಿ ನೀನು ಬರೆದ ಲೇಖನ ಓದಿದೆ. ನನ್ನ ಆತ್ಮಕ್ಕೆ ಅದು ಸಂಜೀವಿನಿಯಾಯಿತು. ಓ! ನೀನೆಂಥ ದಿವ್ಯ ಪ್ರತಿಭಾಶಾಲಿ !! ನಾನು ಬರೇ ಸಾಹಿತ್ಯ ಬರೆಯಬಲ್ಲೆ. ನೀನು ಪತ್ರಿಕೋ ದ್ಯೋಗಿ ಕೂಡಾ. ಮೊದಮೊದಲು, ಅದರಲ್ಲಿ ನೀನು ನನ್ನನ್ನು ಹೊಗಳಿರು ವುದರಿಂದ ನನಗದು ಅಷ್ಟು ಮೆಚ್ಚಿಗೆಯಾಯಿತು ಎಂದುಕೊಂಡಿದ್ದೆ : ಸ್ರೆಡಿನ್, ಅವನ ಮನೆಯವರು, ಯಾರ್ಮ್ಮೋವ್ ಎಲ್ಲರಿಗೂ ಅಷ್ಟೇ ಒಪ್ಪಿಗೆಯಾಗಿದೆ ಎಂತ ಆಮೇಲೆ ಗೊತ್ತಾಯಿತು. ಅಂತೂ ಈ ದಾರಿ ಬಿಡಬೇಡ. ಶುಭವಾಗಲಿ,

ನಿನ್ನ "ಫೋಮಾ ಗಾಡ್ರೀವ್" ಏಕೆ ಕಳಿಸಲಿಲ್ಲ ? ನಾನದನ್ನು ಅಲ್ಲೊಂದು ಚೂರು, ಇಲ್ಲೊಂದು ಚೂರು ಓದಿದೇನೆ. ಮೊದಲಿನಿಂದ ಕಡೆವರೆಗೆ ಒಂದು ಸಾರಿ ಓದಿ ಮುಗಿಸಬೇಕು. ಈಗ ತಾನೆ ಟಾಲ್‌ಸ್ಟಾಯರ "ರಿಸರೆಕ್ಷನ್' (ಪುನರ್ಜನ್ಮ) ಓದಿ ಮುಗಿಸಿದೆ. ನ್ಹೆಖ್ಲುಡೋವ್ ಮತ್ತು ಕಟೂಷಾ ಇವರಿಬ್ಬರ ವ್ಯವಹಾರಬಿಟ್ಟರೆ—ಇದು ತುಂಬಾ ಮಸುಮಸುಕು, ಅಸ್ಪಷ್ಟ—ಕೃತಕ. ಕಾದಂಬರಿಯುದ್ದಕ್ಕೂ ಒಂದು ಶಕ್ತಿಯ ಪ್ರಭಾವ ಕಂಡು ಬರುತ್ತದೆ ; ಮೃತ್ಯು ಭೀತ ಮಾನವ, ಸಾವು ಇದೆ ಎನ್ನುವುದನ್ನು ಒಪ್ಪಿಕೊಳ್ಳುವುದಕ್ಕೂ ಹೆದರಿ ಬೈಬಲಿಗೆ ಜೋತು ಬೀಳುವ ವಿಚಿತ್ರ ಸೊಗಸಾಗಿ ಕಾಣುತ್ತದೆ—ಇರಲಿ.

ನಿನ್ನ ಗ್ರಂಥದ ಪ್ರಕಾಶಕರಿಗೆ, ನನಗೆ 'ಫೋಮಾ' ಕಳಿಸಿಕೊಡುವ ಹಾಗೆ ಕಾಗದ ಬರಿ.

"ಇಪ್ಪತ್ತಾರು ಜನ ಗಂಡಸರು— ಒಬ್ಬ ಹುಡುಗಿ" ಒಳ್ಳೆ ಕಥೆ. ಸಜೀವ ವಾತಾವರಣ. ಓದುತ್ತಿದ್ದರೆ ಬಿಸಿ ಬ್ರೆಡ್ಡಿನ ವಾಸನೆ ಬರುತ್ತದೆ!

ನಿನ್ನ ಕಾಗದ ಈಗ ತಾನೆ ತಂದು ಕೊಟ್ಟರು. ನೋಡಿದೆ. ಅಂತೂ ನೀನು ಹಿಂದೂಸ್ಥಾನಕ್ಕೆ ಹೋಗುವುದಿಲ್ಲ ತಾನೇ ? ಶುದ್ಧ ಅನ್ಯಾಯ. ಭಾರತ ಯಾತ್ರೆ, ಕಡಲು ಪ್ರಯಾಣ—ಒಮ್ಮೆ ಮಾಡಿ ಬಂದರೆ ಸಿದ್ಧೆ ಬರೆದಿದ್ದಾಗ ಅದನ್ನು ಕುರಿತು ಯೋಚನೆಯಾದರೂ ಮಾಡಬಹುದು. ಅಲ್ಲದೆ ಈ ಪ್ರಯಾಣ ಬಹಳ ದಿನ ಕೂಡಾ ಹಿಡಿಯುವುದಿಲ್ಲ. ಹಿಂದೂಸ್ಥಾನಕ್ಕೆ ಹೋಗಿ ಬರುವುದರಿಂದ ಕಾಲುನಡಿಗೆಯಲ್ಲಿ ರಷ್ಯಾದೇಶವನ್ನೆಲ್ಲಾ ಸುತ್ತಿ ಬರಬೇಕೆಂಬ ನಿನ್ನ ಯೋಜನೆಗೂ ಅಡ್ಡಿಯಾಗುವುದಿಲ್ಲ. ಅಂತೂ ಯೋಚಿಸಿ ನೋಡು.

ನನಗಂತೂ ತುಂಬಾ ಬೇಸರವಾಗಿದೆ. ಅಂದರೆ ಬದುಕುವುದೇ ಬೇಸರ ವಾಗಿದೆ ಎಂದಲ್ಲ. ನನಗೆ ಬೇಕಾದುದೊಂದೂ ಈ ಹಾಳು ಯಾಲ್ಟಾದಲ್ಲಿಲ್ಲ. ಸ್ನೇಹಿತರು, ಸಂಗೀತ, ಹೆಂಗಸರು - ಒಂದೂ ಇಲ್ಲ ಈ ದರಿದ್ರಕೊಂಪೆಯಲ್ಲಿ. ಹೋಗಲಿ ಎಂದರೆ, ಕ್ಯಾರಿಯೆಟ್, ಕೋಸುಗಡ್ಡೆ, ಉಪ್ಪಿನಕಾಯಿ ಕೂಡಾ ಸಿಗುವುದಿಲ್ಲ !

ನೀನು ಯಾಲ್ಟಾಕ್ಕೆ ಬರುವುದಿಲ್ಲ ಎಂಬುದನ್ನು ಕೇಳಿ ನನಗೆ ತುಂಬಾ ನಿರಾಶೆಯಾಯಿತು. ಇಲ್ಲಿಗೆ ಮೇ ತಿಂಗಳಲ್ಲಿ ಮಾಸ್ಕೋದ ಆರ್ಟ್ ಥಿಯೇ

ಟರ್‌ನವರು ಬರುತ್ತಾರೆ. ಐದು ನಾಟಕ ಆಡುತ್ತಾರೆ. ನೀನೂ ಆ ವೇಳೆಗೆ ಇಲ್ಲಿಗೆ ಬಂದರೆ, ರಂಗಭೂಮಿಯ ರಚನೆ, ದೃಶ್ಯಯೋಜನೆಯನ್ನು ತಿಳಿದು ಕೊಂಡು ಒಂದು ನಾಟಕ ಬರೆಯಬಹುದು. ನೀನು ನಾಟಕ ಬರೆದರೆ ನನ ಗೆಷ್ಟು ಸಂತೋಷವೋ!

ನಿಜ. ನನಗೀಗ ನಲವತ್ತುವರ್ಷ ವಯಸ್ಸು. ನಾನಿನ್ನೂ ಯುವಕನು. ಆವರೂ ನನ್ನನ್ನ ತೀರಾ ಚಿಕ್ಕವಯಸ್ಸಿನ ಸಾಹಿತಿ ಎನ್ನುತ್ತಿದ್ದರು. ಈಗ ನೀನು ಬಂದಿದೀಯ ಆ ಪಟ್ಟಕ್ಕೆ. ನಾನೀಗ ಹಿರಿಯ. ನನ್ನನ್ನು ಯಾರೂ ಹುಡುಗ ಎನ್ನುವ ಹಾಗಿಲ್ಲ.

೭

ಯಾಲ್ಟಾ, ಅಕ್ಟೋಬರ್ ೧೬, ೧೯೦೧

ಪ್ರಿಯ ಅಲೆಕ್ಸಿ,

. . ಈ ತಿಂಗಳು ೨೧ಕ್ಕೆ ನಾನು ಮಾಸ್ಕೋಕ್ಕೆ ಹೋಗುತ್ತೇನೆ. ಅಲ್ಲಿಂದ ಮುಂದಕ್ಕೆ ವಿದೇಶ ಯಾತ್ರೆ. ಗೊತ್ತೆ ನಾನೇನು ಮಾಡಿದೇನೆ? – ಹೇಳು ನೋಡೋಣ! ಒಂದು ನಾಟಕ ಬರೆದಿದೇನೆ! ಆದರೆ ಅದು ಸದ್ಯಕ್ಕೆ ರಂಗ ಭೂಮಿಯ ಮೇಲೆ ಬರುವ ಹಾಗಿಲ್ಲ. ಎಂತಲೇ ಸರಿಯಾದ ಪ್ರತಿ ಮಾಡಿಲ್ಲ. ಅಲ್ಲಿಯವರೆಗೂ ಹಾಗೇ ಇರಲಿ. 'ಮೂವರು ಸಹೋದರಿಯರು' (ನಾಟಕದ ಹೆಸರು) ಬರೆಯುವುದು ತುಂಬಾ ಕಷ್ಟವಾಯಿತು. ಈ ಮೂರೂ ಜನ, ಒಬ್ಬೊಬ್ಬರು ಒಂದು ಜಾತಿ; ಒಬ್ಬನೇ ತಂದೆಯ ಮಕ್ಕಳು. ಒಂದು ಹಳ್ಳಿ ಈ ನಾಟಕದ ಕಥೆ ನಡೆಯುವ ಸ್ಥಳ.

ಯಾಲ್ಟಾದಲ್ಲಿ ಈಗ ಹವಾ ತುಂಬಾ ಚೆನ್ನಾಗಿದೆ. ನನ್ನ ಆರೋಗ್ಯ ಉತ್ತಮಗೊಳ್ಳುತ್ತಿದೆ. ಮಾಸ್ಕೋಕ್ಕೆ ಹೋಗಲು ಕೂಡ ಮನಸ್ಸಿಲ್ಲ. ಕೆಲಸವೂ ಚೆನ್ನಾಗಿ ಸಾಗುತ್ತಿದೆ. ಬೇಸಿಗೆಯಲ್ಲಿದ್ದ ಸಿಡುಕುತನ ಈಗಿಲ್ಲ. ಕೆಮ್ಮು ಮೊದಲಿನಷ್ಟು ಇಲ್ಲ; ಮಾಂಸ ತಿನ್ನುತ್ತಿದೇನೆ. ಈಗ ನಾನಿರುವುದು ಒಂಟಿ ಯಾಗಿ. ಅಮ್ಮಾ ಮಾಸ್ಕೋಕ್ಕೆ ಹೋಗಿದಾಳೆ.

ನಿನ್ನ ಕಾಗದಗಳಿಗಾಗಿ ನಾ ಋಣಿ, ನೂರು ನಮಸ್ಕಾರ. ಒಂದೊಂ ದನ್ನೂ ಎರಡೆರಡು ಸಲ ಓದಿದೆ. ನಿನ್ನ ಹೆಂಡತಿಗೆ, ನನ್ನ ಶುಭಾ

ಶಯ ತಿಳಿಸು. ಸರಿ - ಮತ್ತೆ ಮಾಸ್ಕೋದಲ್ಲಿ ಭೇಟಿಯಾಗುವವರೆಗೂ—
ಈ ಸಲವೂ ಬರುತ್ತೇನೆ ಎಂದು ಮೋಸಮಾಡುವುದಿಲ್ಲ ತಾನೆ?
ದೇವರು ನಿನಗೆ ಒಳ್ಳೆಯದನ್ನು ಮಾಡಲಿ.

೮

ಮಾಸ್ಕೋ, ಜುಲೈ ೨೯, ೧೯೦೧

... ನಿನ್ನ ‘ಸಪಾತ’ ನಾಟಕ ಓದಿದೆ. ವಸ್ತು ಹೊಸದು; ತುಂಬಾ ಸೊಗಸಾಗಿದೆ. ಎರಡನೆ ಅಂಕ ಎಲ್ಲಕ್ಕಿಂತ ಚೆನ್ನಾಗಿದೆ. ನನಗಂತೂ ಅದನ್ನು ಓದಿದಾಗ ಸಂತೋಷದಿಂದ ಕೇಕೆಹಾಕಿ ಕುಣಿಯುವ ಹಾಗಾಯಿತು. ಆದರೆ ಕಥಾವಸ್ತು ತುಂಬಾ ಗಂಭೀರ, ಪ್ರೇಕ್ಷಕರಿಗೆ ರುಚಿಸದೆ ಇರಬಹುದು. ರಂಗಮಂದಿರದಲ್ಲಿ ಇದು ಯಶಸ್ವಿಯಾದೀತು ಎಂಬ ಆಶೆಯನ್ನೇನಾದರೂ ಇಟ್ಟುಕೊಂಡಿದ್ದರೆ ಅದಕ್ಕೆ ತಿಲತರ್ಪಣ ಈಗಲೇ ಕೊಟ್ಟುಬಿಡು. ನಿನ್ನ ನಾಟಕದಲ್ಲಿ ಬರುವ ನೀತಿಗೆಟ್ಟ ವಾಸಿಲ್ಲೀಸಾ ಪಾತ್ರವನ್ನು ನನ್ನ ಹೆಂಡತಿ ಮಾಡುತ್ತಾಳೆ. ವಿಷ್ನೇವ್‌ಸ್ಕಿ ಅದರಲ್ಲಿ ಬರುವ ಟಾರ್ಟರನ ಪಾತ್ರ ತನಗೇ ಬರೆದದ್ದು ಎಂತ ನಂಬಿಬಿಟ್ಟಿದ್ದಾನೆ. ಆದರೆ ಲೂಕಾನ ಪಾತ್ರ ಆರ್ಟ್‌ಯೋಂಗೆ ಸರಿಹೋಗುವುದಿಲ್ಲ; ಅವನು ಪೋಲೀಸಿನವನ ಪಾತ್ರಕ್ಕೆ ಲಾಯಖ್ಖು. ಅದರಲ್ಲಿ ಬರುವ ನಟನ ಪಾತ್ರವನ್ನು ಅತ್ಯುತ್ತಮ ನಟ ಮಾತ್ರ ಅಭಿನಯಿಸಬಲ್ಲ; ಬಹುಶಃ ಸ್ಟಾನಿಸ್ಲಾವ್‌ಸ್ಕಿ ಸರಿಹೋದಾನು. ಬ್ಯಾರನ್ ಪಾತ್ರ ಕಾಚಲೋವ್ ಅಭಿನಯಿಸಬಹುದು.

ನಾಲ್ಕನೆ ಅಂಕದಲ್ಲಿ ‘ನಟ’ನೊಬ್ಬನು ಉಳಿದು, ಇನ್ನಾವ ಆಕರ್ಷಕ ಪಾತ್ರಗಳೂ ಇಲ್ಲ. ಇದರಿಂದ ಏನೂ ದುಷ್ಪರಿಣಾಮವಾಗದ ಹಾಗೆ ನೋಡಿಕೊ. ಈ ಅಂಕ ನೀರಸವಾಗಿ, ಅಸಂಗತ್ಯವಾಗಿ ಕಾಣಬಹುದು. ನಟನ ಅಂತ್ಯ ತುಂಬಾ ಭೀಷಣವಾಗಿದೆ. ಇದರ ಪರಿಣಾಮ ಪ್ರೇಕ್ಷಕರ ಮೇಲೆ ಹೇಗಾಗಬಹುದು ಗೊತ್ತೆ? ಎಲ್ಲೋ ನೋಡುತ್ತಿದ್ದವನಿಗೆ ಸುಳಿವು ಕೊಡದೆ ಬೆನ್ನಿನ ಮೇಲೆ ಬಲವಾಗಿ ಗುದ್ದಿದ ಹಾಗಾಗುತ್ತದೆ. ಶ್ರೀಮಂತ, ಅವನು ಶ್ರೀಮಂತ ಹೇಗಾದನೆಂಬುವುದು ಸ್ಪಷ್ಟವಾಗಿಲ್ಲ........

# ಸಾಹಿತ್ಯದ ವಿಶ್ವರೂಪ *

**ಅನುವಾದಕ : ಶಿ. ಮ ದೇಸಾಯಿ**

ಸಾಹಿತ್ಯದ ಗಾಢವ್ಯಾಸಂಗದ ಆವಶ್ಯಕತೆಯನ್ನು ಕುರಿತು, ಕೆಲವು ಮಾತು ಹೇಳಬೇಕು. ಸಾಹಿತ್ಯ ವಿಶ್ವದ ಹೃದಯವಿದ್ದಂತೆ: ಇದರೊಡನೆ ಮಾನವನ ಎಲ್ಲ ಬಗೆಯ ಸುಖದುಃಖ, ಆಶೆ ನಿರಾಶೆ, ಸುಪ್ತವಿರೋಧಗಳು ಬರುವವು; ಪ್ರಕೃತಿದೇವಿಯ ಸೌಂದರ್ಯ ನೋಡಿ. ಅದರ ಭಾವವೂ, ಅದರ ವಿವಿಧ ವೈಚಿತ್ರ್ಯ ಹಿಂದಿನ ಭಾವವೂ ಉಂಟಾಗುವುದು ಸಾಹಿತ್ಯದಿಂದಲೇ: ಆತ್ಮಜ್ಞಾನದ ತೃಷ್ಣೆಯೊಡನೆ ಈ ಹೃದಯ ಶಾಶ್ವತವಾಗಿ, ಹಿಂಸಾಮಯವಾಗಿ ಮಿಡಿಯುತ್ತಲಿದೆ ಹೇಗೆಂದರೆ? ಪ್ರಕೃತಿಯ ಸರ್ವ ಸತ್ವಮಯ ಶಕ್ತಿಗಳೇ ಮಾನವನ ವ್ಯಕ್ತಿಯಲ್ಲಿ ಜಾಗೃತಿಯನ್ನೂ, ಬುದ್ಧಿವೈವಿಧ್ಯವನ್ನು ತುಂಬಿ, ಜೀವನದ ಗುರಿ ಕಿರುವುಗಳನ್ನು ವಿಶದಗೊಳಿಸುವ ಕನ್ನಡಿಗಳಾಗಲಿಲ್ಲವೇ ?

ಮನುಜನ ಹೃದಯ ಗವಾಕ್ಷಗಳಲ್ಲಿ ಸಾಹಿತ್ಯವೊಂದೇ ಆಳವಾಗಿ ಒಳ ಹೋಗುವದರಿಂದ, ಸಾಹಿತ್ಯವನ್ನು ಸರ್ವವ್ಯಾಪಕವಾದ ಜಗಚ್ಚಕ್ಷುವೆಂದು ಕರೆಯಬಹುದು. ಕಣ್ಣಿಗೆ ಸುಲಭವೆಂದು ಪರಿಚಿತವೆಂದು ಕಾಣುವ ಸಾಹಿತ್ಯ ಜಗತ್ತಿನ ಅದ್ಭುತ ಆಶ್ಚರ್ಯಗಳಲ್ಲೊಂದಾಗಿ ನಿಲ್ಲುವದು. ನಮಗೆ ಗೊತ್ತಿರದ ಯಾವನೋ ಒಬ್ಬನು, ನೂರಾರು ಮೈಲಿ ದೂರಿನವನು—ಅರಿಯದ ಭಾಷೆ ಯಾವುದರಲ್ಲೊ ಒಮ್ಮೊಮ್ಮೆ ಆಡಿರುವನು : ಕಾಗದದ ಮೇಲೆ ಕೆಲ ಅಕ್ಷರ ಸಂಯೋಜನೆಯನ್ನೂ, ಗುರುತುಗಳನ್ನೂ ಮಾಡುವನು. ಪರಕೀಯರಾದ ನಾವು ಇವು ಶಬ್ದಗಳೆಂದು ಗುರುತಿಸಿ, ಎಲ್ಲ ಶಬ್ದಗಳ, ಭಾವಗಳ, ಚಿತ್ರಗಳ ಅರ್ಥವನ್ನು ಮಾಡಿಕೊಳ್ಳುತ್ತೇವೆ. ಸೃಷ್ಟಿಯ ದೃಶ್ಯಗಳ ವರ್ಣನೆ ಓದಿ, ಸ್ತುತಿ ಕೇಳಿ, ಶಬ್ದಸಂಗೀತದಲ್ಲೂ, ನಾದಮಾಧುರ್ಯದಲ್ಲೂ ಆನಂದ ಪಡೆಯುತ್ತೇವೆ. ಅಚ್ಚಾದ ಹಾಳೆಗಳನ್ನು ನೋಡಿ ಕೆಲವೇಳೆ ನಗುತ್ತೇವೆ-ಅಳುತ್ತೇವೆ : ಇನ್ನೊಮ್ಮೆ ಸ್ವಪ್ನರಂಜನವಾಗುವುದು ; ಮಗದೊಮ್ಮೆ ರೋಷ

---

* On Literature.

ಕನಲುವದು. ನಮ್ಮಂತಿರುವ ಅಥವ ಬೇರೆಯಾಗಿರುವ ಜೀವನಸ್ಫೂರ್ತಿ ಯನ್ನು ಅನುಭವಿಸುತ್ತೇವೆ. ಆದುದರಿಂದ ಉದ್ಗ್ರಂಥ ಮಾನವನಿರ್ಮಿತ ವಸ್ತುಗಳಲ್ಲಿ ಅತ್ಯಂತ ಅದ್ಭುತವಾದುದು, ಜಟಿಲವಾದುದು; ಸುಖಕ್ಕೆ ಮಾರ್ಗ ವನ್ನೂ ಭವಿಷ್ಯತ್ತಿನ ಭವ್ಯಶಕ್ತಿಯನ್ನೂ ತಂದೆಳೆದುಕೊಳ್ಳುವದಕ್ಕೆ ಗ್ರಂಥ ರಚನೆ ಸಾಲದೇನು?

ಸಮಸ್ತ ಜನಾಂಗಗಳಿಗೂ ಒಂದೇ ಭಾಷೆಯಿರದಿರುವುದರಿಂದ ವಿಶ್ವ ಸಾಹಿತ್ಯವೊಂದು ಇದೆಯೆಂದು ಹೇಳಲಾರೆ. ಗದ್ಯಪದ್ಯ ಸೃಷ್ಟಿಯೆಲ್ಲ ಒಂದೇ ಸಮನಾದ ಭಾವೈಕ್ಯದಿಂದ, ಗುರಿವಿಚಾರಗಳಿಂದ ಬೆರೆತುಹೋಗಿದೆ. ಬೇರೆ ಬೇರೆ ದೇಶಗಳ ಸಾಹಿತ್ಯದಲ್ಲೂ, ಮಾನವನ ಪವಿತ್ರಾಭಿಲಾಷೆಗಳೂ, ಆತ್ಮದ ಬಿಡುಗಡೆಗಾಗಿ ಹೆಣಗಾಡುವ ಶಕ್ತಿಯೂ, ಆನಂದವೂ, ಜೀವನೋನ್ನತಿಗಾಗಿ ಬಯಸುವ ಆಶಾಕಿರಣಗಳೂ, ಬಾಳಿನ ಕೋಟಲೆಗಳಿಗಾಗಿ ಉಂಟಾಗುವ ಜಿಗು ಪ್ಸೆಯೂ, ಒಂದೇ ತೆರನಾಗಿ ಅಡಕವಾಗಿರುವವು. ಶಬ್ದದಲ್ಲಿ, ವಿಚಾರದಲ್ಲಿ ಅವರ್ಣನೀಯ ಭಾವನೆಯನ್ನು ತರುವದಕ್ಕಾಗಿ ವಿಶ್ವಾತ್ಮಕ್ಕೆ ನೀರಡಿಸಿ, ಕೈಯೊಡ್ಡಿ ನಿಲ್ಲುತ್ತೇವೆ; ಇದನ್ನೆ ಸೌಂದರ್ಯವಿಲಾಸವೆಂಬ ಮಸುಕಾದ ಹೆಸರಿನಿಂದ ಕರೆದುಕೊಳ್ಳುತ್ತೇವೆ; ಇದೆಯೆ ನಮ್ಮ ನಮ್ಮ ಹೃದಯಗಳಲ್ಲಿ ಕಂಗೊಳಿಸುವ, ಸಂತೋಷಕೊಡುವ ವಿಶ್ವದ ಕುಸುಮವಾಗುತ್ತದೆ.

ನಾಡು, ಕುಲಗಳು, ವ್ಯಕ್ತಿ – ವರ್ಗಕಲಹ, ಪ್ರಭುತ್ವಪದ್ಧತಿಗಳು, ಧಾರ್ಮಿಕ ಅಡಚಣೆ, ಮತಗಳು ಮುಂತಾದವುಗಳ ಹೊರರೂಪ ಭೇದ ಎಷ್ಟೇ ಇದ್ದರೂ, ಶತ ಶತಮಾನಗಳಿಂದ ರೂಢಿಯಲ್ಲಿ ಬಂದ ಬಗೆಹರಿಯದ ತೊಡಕು ಗಳು ಏನೇ ಇದ್ದರೂ, ವಿಶ್ವಚೈತನ್ಯದ ಕಪ್ಪಾದ, ಭೀಕರವಾದ ರಾಜದಂಡವು ನಮ್ಮೆದುರು ದೃಗ್ಗೋಚರವಾಗುತ್ತದೆ. ಬಾಳಿನ ದುರಂತಮಯ ಸ್ವರೂಪ ವನ್ನು ಲೋಕದಲ್ಲಿ ಮಾನವನ ಏಕಾಂತತೆಯನ್ನೂ, ದಟ್ಟವಾಗಿ ಈ ಚೇತನ ದರಿವಿನ ಕಣಗಳೇ ಮುಂದಿಡುತ್ತವೆ. ಜನ್ಮದ ವೈಚಿತ್ರ್ಯದಿಂದ ಏಳುತ್ತಲೇ, ಮೃತ್ಯುವಿನ ತೊಡಕಿನ ಜಾಲದಲ್ಲಿ ಬೀಳುತ್ತೇವೆ. ನಮ್ಮ ಪೃಥ್ವಿಯೊಡನೆ ನಿಗೂಢವಾದ ಕಾಲ - ಬಯಲಿನಲ್ಲಿ (Space) ಧುಮುಕುತ್ತೇವೆ. ಇದರ ಅರಿವು ನಮಗಿರದಿದ್ದರೂ, ವಿಶ್ವವೆಂದು ಕರೆದು ಅದರೊಡನೆ ಇನ್ನಾವುದನ್ನೂ ಹೋಲಿಸಿ ನೋಡಲಾರೆವೆಂದೂ, ನಮ್ಮ ಏಕಾಂತತೆಯೇ ಒಂದು ನಗೆ

ಗೇಡೆಂದೂ ದಿಙ್ಮೂಢರಾಗಿ ನಿಲ್ಲುತ್ತೇವೆ. ಪೃಥ್ವಿಯ ಮೇಲೆ ವಿಶ್ವದ ಬಯಲಿನಲ್ಲಿ ಮನುಷ್ಯ ಏಕಾಕಿ ಅನೇಕ ಕಡೆ. ಪೃಥ್ವಿ ನಿರ್ಜರವಾಗಿದೆ - ರಣಭೂಮಿಯಾಗಿ ನಿಂತಿದೆ .... ಚಿಕ್ಕ ದೊಡ್ಡವರಿಗೆ ಸಮವಾದ ಬಾಳಿನ ನೋವು, ಕೇಡು, ಗೋಜುಗಳ ತಕ್ಕಮಟ್ಟಿನ ಅರಿವು ಕಣ್ಣುತೆರೆದು ನೋಡುವವರಿಗೆ ಕಾಣುತ್ತಲೇ ಇವೆ. ಈ ಹಿರಿನೋವನ್ನು ಮಾನವನೊಮ್ಮೆ ಗೆದ್ದು ಪಾರಾಗಿ ನಿಲ್ಲುವದೆಂದರೆ ಆಧ್ಯಾತ್ಮಿಕ ಸಾಧನೆಗಳಿಂದಲೇ; ಸಾಹಿತ್ಯ ವಿಜ್ಞಾನಗಳ ಸಂಯುಕ್ತ ಫಲಗಳ, ಪ್ರಯತ್ನಗಳ ಫಲವಾಗಿ ಆತನಿಗೆ ವಿಜಯ ಸಿಕ್ಕಬೇಕು.

ಭೂಮಂಡಲದ ಮೇಲಿನ ಗಾಳಿಬೆಳಕುಗಳ ಹೊದಿಕೆ ದೈವೀಸೃಷ್ಟಿಯಲ್ಲದೆ ಬೇರೆ ಅಲ್ಲ. ವಿಶ್ವದಲ್ಲಿ ಅಮರವಾಗಿ ಸುಂದರಮಯವಾಗಿರುವದೆಲ್ಲಾ ನಮ್ಮ ಚೇತನಪಿಂಡಗಳಿಂದ ಹೊರಹೊಮ್ಮುವ ರಾಗರಂಜಿತ ಕಾಮನಬಿಲ್ಲಿನಂತಲ್ಲವೇ? ಇಂಥ ಚೇತನಶಕ್ತಿಯಿಂದಲೇ ಯಾಂತ್ರಿಕ ವಿಚಾರಗಳ ಅದ್ಭುತ ಮೋಹಕ ಸ್ವರೂಪ ಕಾಣಿಸಿಕೊಂಡಿತಲ್ಲವೇ? ಭವ್ಯವಾದ ಗುಡಿಗೋಪುರಗಳು, ದೊಡ್ಡದೊಡ್ಡ ಬೆಟ್ಟಗಳನ್ನು ಕೊರೆದು ನಿಲ್ಲಿಸಿರುವ ಸುರಂಗಗಳು (Tunnels) ಮಹಾನದಿಗಳಿಗೆ ಟನ್ನುಗಟ್ಟಲೆ ಕಬ್ಬಿಣ ಹೊತ್ತು ತೂಗುಬಿದ್ದಿರುವ ಸೇತುವೆಗಳು, ವಾತಾವರಣದಲ್ಲಿ ಎಷ್ಟು ಹಗುರವಾಗಿ, ಮನೋಹರವಾಗಿ ಉಗ್ರವಾಗಿ ಶೋಭಿಸುವವು? ಇಂಥ ವಿಶಾಲ ಕೃತಿಗಳನ್ನು ಪುಸ್ತಕ, ಚಿತ್ರಗಳಲ್ಲಿ ಬಿಡಿಸಿ ನಮ್ಮ ಜೀವನದ ಮಹಾಕಾವ್ಯವನ್ನು ರಮ್ಯವಾಗಿ, ಲಲಿತವಾಗಿ ನೀಡುವದು ಸಾಹಿತ್ಯದ ಪ್ರತಿಭಾಶಕ್ತಿಯಲ್ಲವೇ? ಇದರಿಂದ ಮನುಷ್ಯನ ಪಾಶವೀಶಕ್ತಿಗಳ ಮೇಲೂ, ಪ್ರಕೃತಿಯ ಮೂಲಭೂತ ಅಣುರೇಣುಗಳ ಮೇಲೂ, ಮಾನವನ ಆಧ್ಯಾತ್ಮಿಕ ಬಲದಿಂದ ಬುದ್ಧಿಮನಸ್ಸುಗಳ ಗೆಲುವು ಎದ್ದು ಕಾಣುತ್ತದೆ. ಆತನ ಸಾಹಿತ್ಯಿಕ, ವೈಜ್ಞಾನಿಕ ಮಹಾಫಲಗಳನ್ನು ಕಂಡು ನ್ಯಾಯವಾಗಿ ನಮಗಾಗುವ ಆನಂದ ಅಷ್ಟಿಷ್ಟಲ್ಲ: ಇದೆಲ್ಲ ಪ್ರತಿಭಾಶಕ್ತಿಯ ಪ್ರೇರಕಪ್ರಭಾವ - ತೇಜಸ್ಸುಳ್ಳದ್ದು, ಓಜಸ್ಸುಳ್ಳದ್ದು.

ಸಾಹಿತ್ಯದ ಮಹಾಗುಣವು ಚೇತನಕಾರಿಯಾಗಿದೆ; ಭಾವಕ್ಕೆ ರೂಪವಿತ್ತು ಬಾಳಿನಲ್ಲಿ ಶೀಲವನ್ನು ಬೆಳೆಸುತ್ತದೆ; ಎಲ್ಲ ಧ್ಯೇಯಗಳು, ಕೃತಿಗಳು ಮನುಷ್ಯನ ರಕ್ತಮಾಂಸದಿಂದ, ನರನಾಡಿಗಳಿಂದ ನಿರ್ಮಿತವಾಗಿದೆ. ಹೆನ್-ಚಾಯ್ ಎಂಬ ಚೀನೀಯನಿಗೂ, ಸ್ಪಾನಿಯರ್ಡನಾದ ಡಾನ್ ಜುವಾನನಿಗೂ,

ವಿಷಯಾಸಕ್ತಿಯಿಂದ ಏಕಕಾಲಕ್ಕೇ ಅಸಂತುಷ್ಟಿಯಾದದ್ದನ್ನು ಸಾಹಿತ್ಯ ನಿರೂಪಿಸುತ್ತದೆ. ಹಬಸಿಯೂ ಫ್ರೆಂಚರವನೂ, ಹಾಡುವ ಪ್ರೇಮಗೀತೆ - ದುಃಖಗೀತೆ ಒಂದೇ ತರದ್ದು. ಜಪಾನೀ ಗೀಷಾನಲ್ಲಿಯೂ ಮ್ಯಾನನ್ ಲ್ಯಾಸ್ಕಾದಲ್ಲಿಯೂ ಪ್ರೇಮದ ಹಂಬಲ ಒಂದೇ ಮಟ್ಟದಲ್ಲಿದೆ. ನಾರಿಯನ್ನು ತನ್ನ ಅರ್ಧಾಂಗಿಯೆಂದು ತಿಳಿದು ಹಂಬಲಿಸುವ ಪುರುಷಪ್ರೇಮದ ಕಿಡಿ ಸರ್ವದೇಶದ ಕಾಲದ ಜನರಲ್ಲಿ ಒಂದೇ ತೆರನಾಗಿ ಉರಿಯುತ್ತಿದೆ. ಒಬ್ಬ ಕೊಲೆಗಾರನು ಏಸಿಯಾ ಯುರೋಪು ಎರಡು ಖಂಡಕ್ಕೂ ಬೇಡಾದವನು ; ಪ್ಲುಶ್ ಕಿನ್‌ನೆಂಬ ರಶಿಯಾದ ಜಿಪುಣ ಫ್ರೆಂಚರ ಗ್ರ್ಯಾಂಡೆನಂತೆಯೇ ಕರುಣಾಜನಕ ಪ್ರಾಣಿ. ಟಾರ್ಟುಫನಂಥ 'ಅಷಾಢಭೂತಿ'ಗಳು ಎಲ್ಲ ದೇಶಗಳಲ್ಲಿಯೂ ಸಿಕ್ಕುವರು. ನಿಸ್ಸಂಗಿಗಳು ಎಲ್ಲ ಕಡೆಗೂ ಕಷ್ಟಜೀವಿಗಳೇ. ರಾತ್ರಿಯ ರಾಜನಾದ ಡಾನ್ ಕ್ವಿಕ್ಸೊಟ್‌ನಂಥ ಮೋಹಕಮೂರ್ತಿಯನ್ನು ಕಂಡು ಯಾರು ಹಿಗ್ಗರು ? ಎಲ್ಲ ಜನರೂ ತಮ್ಮ ತಮ್ಮ ಭಾಷೆಗಳಲ್ಲಿ ಅದನ್ನೇ ಹೇಳುವರು ; ತಮ್ಮ ಅದೃಷ್ಟ ಕುರಿತೇ ಆಡುವರು. ಪಶುತುಲ್ಯ ಮಾನವರು ಎಲ್ಲ ಕಡೆಗೂ ಒಂದೇ ಆಗಿದ್ದಾರೆ. ಆದರೆ ಬುದ್ಧಿವಂತರು ನೆಲಸುವ ಜಗತ್ತು ಬೇರೆಯಾಗಿದೆ. ಸಾಹಿತ್ಯ ಜೀವನದ ಥಳಥಳಿಸುವ ಕನ್ನಡಿಯಾಗಿದೆ. ಒಳ್ಳೆಯ ಸಾಹಿತ್ಯ ಅಸಂಖ್ಯ ಸಾದೃಶ್ಯಗಳನ್ನು, ವ್ಯತ್ಯಾಸಗಳನ್ನು ಮನಂಬುಗುವ ಸೌಷ್ಠವವನ್ನು ಕೊಡುತ್ತದೆ—ಡಿಕೆನ್ಸಿನ ಮೃದುಹಾಸ್ಯ, ಡೊಸ್ಟೊಯೆವ್‌ಸ್ಕಿಯ ಉಗ್ರರೂಪದ ಖಿನ್ನ ಮೋರೆ, ನಮ್ಮ ಸಾಧಕಜೀವನದಲ್ಲಿ ಬರುವ ತೊಡರುಗಳು, ಆಶಾಪಾಶಗಳ ಲೋಕ, ಹೆಡ್ಡತನ, ಅಶ್ಲೀಲತೆಯ ಬುಡವಿಲ್ಲದ ನಿಂತ ಕೊಳೆ ನೀರು, ಪ್ರೇಮದ ಧೈರ್ಯ, ದ್ವೇಷದ ಶಕ್ತಿ, ನಮ್ಮ ಕಾಪಟ್ಯದ ಹೊಲಸುತನ, ಸುಳ್ಳಿನ ನಿರ್ಲಜ್ಜ ವಿಪುಲತೆ, ನಮ್ಮ ಮನಸ್ಸಿನ ಅಸಹ್ಯಕರ ದಾಸ್ಯ, ತುದಿಮೊದಲಿಲ್ಲದ ನಮ್ಮ ಸಂಕಟಗಳು, ನಮ್ಮ ಮಾನವರ ಹೃದಯಗಳಲ್ಲಿ ಬದುಕಿರುವುವು, ಸುಳಿದಾಡುವವು. ನಮ್ಮ ರೋಮಾಂಚಕಾರಿ ಆಶೆಗಳು - ಪವಿತ್ರ ಕನಸುಗಳೂ ಕೂಡ ಲೌಕಿಕವಾದೀ ವಸ್ತುಪರಂಪರೆಯ ಜತೆಯಲ್ಲಿ ನಿಲ್ಲುವವು, ಬೆಳೆಯುವವು. ಕೋಮಲ ಹೃದಯದ ಗೆಳೆಯನಂತೆ ಮನುಷ್ಯನನ್ನು ಕಾಣುತ್ತವೆ ; ನ್ಯಾಯಾಧೀಶನ ಉಗ್ರದೃಷ್ಟಿಯಿಂದ ನೋಡಿದರೂ ಸಾನುಭೂತಿ ತೋರಿಸುತ್ತ ; ಅವನನ್ನು ನೋಡಿ ನಕ್ಕು, ಅವನ ಕೆಚ್ಚೆದೆ

ಯನ್ನು ಕೊಂಡಾಡಿ, ಅವನ ಹೇಡಿತನವನ್ನು ಶಪಿಸಿ, ಸಾಹಿತ್ಯವು ವಿಜ್ಞಾನ ದೊಡನೆ ಬಾಳಿನ ಅಂತಸ್ತಿನ ಮೇಲೆ ಉದಯಿಸುವುದು. ಮಾನವರಿಗೆ ಅವರ ಧ್ಯೇಯಗಳನ್ನು ಮುಟ್ಟಲು ಮಾರ್ಗ, ಸಿದ್ಧಿಗಳನ್ನು ಬೆಳಕಿತ್ತು ತೋರಿಸುವದು ; ಅವರಲ್ಲಿರುವ ಒಳ್ಳೆತನದ ಬೆಳವಣಿಗೆಗೆ ಸಹಕಾರಿಯಾಗುವದು. ಆಗಾಗ ವಾಙ್ಮಯವೂ ಶಾಸ್ತ್ರಗಳ ಮಟ್ಟಕ್ಕಿಳಿದು, ಒಂದು ಮತದ (dogma) ದಾಸ್ಯಕ್ಕೆ ಮೋಹಿತವಾಗಬಹುದು. ನಮಗಾಗ ಎಮಿಲ್ ಝೋಲಾನು ಮನುಷ್ಯನನ್ನು ಒರಟುಹೊಟ್ಟೆಯ ಪಶುವೆಂದು ಕರೆದ ದೃಷ್ಟಿ ನೆನಪಾಗುತ್ತದೆ. ದುಬ್ಬಾ ರೇಮಾನನ ನಿರಾಸೆಯ ತಣ್ಣೆಳಲು ಗುಸ್ತಾವ್ ಫ್ಲಾಬೋನಂಥ ಫ್ರೆಂಚ ಕಲಾವಿದನನ್ನು ಸೋಂಕಿದ್ದು ಕಂಡಿದ್ದೇವೆ.

ಕಾಲಧರ್ಮದ ಒತ್ತಡವು ಸಾಹಿತ್ಯದ ಮೇಲೆ ತನ್ನ ಪ್ರಭಾವ ಬೀರಲೇ ಬೇಕು. ಟರ್ಗೆನಿವ್ ಅಂದದ್ದು ಸ್ವಾಭಾವಿಕ ; ದಿನದಿನದ ವಿಷ ಗಾಳಿಯೂ, ಸೌಂದರ್ಯದ ಛಾಯೆಗಿಂತ, ಹೆಚ್ಚಾಗಿ ಬರವಣಿಗೆಯ ಮೇಲೆ ಹೊಯ್ದಾಡಲೇ ಬೇಕು .... ಸುಂದರ ವಸ್ತು ಅತಿ ವಿರಳ : ನಮಗೆ ಪ್ರಾಚೀನ ಗ್ರೀಕರ ಪರಿಶುದ್ಧ ಜೀವನ ಸುಂದರತಮ ಎನ್ನಿಸಲಿಲ್ಲವೇ ? ಐರೋಪ್ಯದ ಪುನರುಜ್ಜೀವನದ ಕಾಲ - ಅದರಲ್ಲಿ ಮೈಗೊಂಡ ಕ್ರೂರತೆ ಎಷ್ಟೇ ಇದ್ದರೂ, ನಮಗದು ಹೃದ್ಯವಾಗಿಲ್ಲವೇ ?

ಬಾಲ್ಝಾಕನ—'ಬಡ ನೆಂಟರು', ಗೋಗೋಲನ 'ಸತ್ತಜೀವಿಗಳು' (Dead souls) 'ಪಿಕ್‌ವಿಕ್ ಕಾಗದಗಳು'— ಈ ಪುಸ್ತಕಗಳೆಲ್ಲ ಸಾಮಾನ್ಯ ಜೀವನ ವರ್ಣನೆಯಿಂದ ತುಂಬಿಕೊಂಡಿದ್ದರೂ ಅವುಗಳಲ್ಲಿ ಅವಿನಾಶಿ ಬದು ಕೊಂದು ಅಡಕವಾಗಿದೆ. ಈ ಪಾಠವನ್ನು ಅತ್ಯುತ್ತಮ ವಿಶ್ವವಿದ್ಯಾಲಯ ಒದ ಗಿಸಿ ಕೊಡಲಾರದು ; ಇದನ್ನು ಸಾಧಾರಣ ಮನುಷ್ಯ ಐವತ್ತು ವರುಷಗಳ ಕಷ್ಟಸಾಧನೆಯಿಂದ ಇಷ್ಟು ಸರಿಯಾಗಿ, ಖಚಿತವಾಗಿ ಕಲಿಯಲಾರನು. ರೂಢಿ ಅಭ್ಯಾಸಗಳಿಗೆ ಒಳಗಾದದ್ದು ಯಾವಾಗ್ಲೂ ಅನಿಷ್ಟವಲ್ಲ, ಕೆಟ್ಟದ್ದಲ್ಲ ; ತನ್ನ ಉದ್ಯೋಗ ಕಸುಬಿನಲ್ಲಿ ಮುಳುಗಿ ನರಕಕುಂಡದಲ್ಲಿ ಬೆಂದುಹೋಗುವದು ಮನುಷ್ಯನಿಗೆ ಅಭ್ಯಾಸವಾಗಿದೆ. ಈ ಆತ್ಮಪರೀಕ್ಷೆ ಮತ್ತು ತಿಕ್ಕಾಟ ಯಾವಾ ಗಲೂ ಅವಶ್ಯ ಮತ್ತು ಸುಂದರ.... ... ಮಾನವೀ ತಪ್ಪುತಡೆಗಳಿಂದ ಶಬ್ದದ ಮತ್ತು ಚಿತ್ರದ ಕಲಾಕುಸುರಿಗೆ ಅಷ್ಟು ಅಡ್ಡಿ ಬರಲಾರದು. ಮನುಷ್ಯನನ್ನು

ಸಾಮಾನ್ಯ ಸ್ಥಿತಿಗತಿಯಿಂದ ಮೇಲಕ್ಕೆತ್ತಿ, ಪರಿಸ್ಥಿತಿಯ ಅಪಮಾನಕರ ಗುಲಾಮಗಿರಿಯಿಂದ ಮೇಲೆದ್ದು ಸ್ವತಂತ್ರ ಜೀವನಕರ್ತನಾಗಬಲ್ಲನೆಂಬು ದನ್ನು ಸಾಹಿತ್ಯವೇ ಪ್ರಕಟಿಸಬಲ್ಲುದು; ಪ್ರತಿಭಾಶಕ್ತಿಯ ಅದ್ಭುತ ರಮ್ಯ ಸಾಧನೆಗಳಿಂದ, ಸದ್ಯಸ್ಥಿತಿಯ ಮೇಲೆ ನಿಂತು ಮಾನವ ಹೃದಯವನ್ನು ತೋರಿಸಬಲ್ಲದು. ಒಳ್ಳೆಯ ಗದ್ಯವಾಗಲಿ ಪದ್ಯವಾಗಲಿ ಕಾಮುಕವೃತ್ತಿಯ ಕಿಡಿಗೆ ಪುಟಗೊಳ್ಳದೆ ನಮಗೊಂದು ಸತ್ಯದ ಮೆಟ್ಟಲಾಗಿ ಬಿಡುವುದು. ಪ್ರತಿಯೊಂದೂ ಮನುಷ್ಯನಲ್ಲಿಯೇ ಅಡಕವಾಗಿದೆ. ದೋಷಗಳು ಹೊರಗಿನಿಂದ ಬಂದಿರುವವಲ್ಲ ಎಂಬುದು ಸಾಹಿತ್ಯದೇವಿಗೆ ಚೆನ್ನಾಗಿ ಗೊತ್ತಿದೆ. ವ್ಯಕ್ತಿ, ವರ್ಗಗಳ, ರಾಷ್ಟ್ರಗಳ ನಡುವೆ ಬರುವ ದ್ವೇಷಗಳು ಜೀವನಕ್ಷೇತ್ರಕ್ಕೆ ಕ್ರೂರ ವಿರೋಧಾಭಾಸಗಳು. ಅಂತೆಯೆ ಆ ಪರಿಹಾರ್ಯ ನ್ಯೂನತೆಗಳು ಉದಾತ್ತ ಜೀವಿಗಳ ಸದಿಚ್ಛೆಯ ಬಲ ವನ್ನೂ ನಾಶಪಡಿಸಬಲ್ಲವೆಂಬುದು ಸಾಹಿತ್ಯದೇವಿ ಮನಗಂಡ ಮಾತಾಗಿದೆ ... ಶಬ್ದದಲ್ಲಿ ಮತ್ತು ಚಿತ್ರದಲ್ಲಿ ನಿರ್ಮಾಪಕ ಚೈತನ್ಯಪ್ರವಾಹ ಎಷ್ಟು ತುಂಬಿ ಕೊಂಡಿವೆಯೆಂಬದನ್ನು ನೀವು ಸೂಕ್ಷ್ಮವಾಗಿ ಪರಿಶೀಲಿಸಿದರೆ, ಜಾತಿಮತಗಳ ರಾಷ್ಟ್ರ ಜನಾಂಗಗಳ ಒಳಭೇದಗಳನ್ನು ಕೊಚ್ಚಿಕೊಂಡು ಹೋಗುವದೇ ಇವರ ಪರಮ ಗುರಿಯೆಂಬುದರ ಅರಿವಾಗುವದು ಮನುಷ್ಯಕೋಟಿ ತಮ್ಮತಮ್ಮೊಳ ಗಿನ ಕಚ್ಚಾಟ ತೊರೆದು ಸೃಷ್ಟಿಯ ಗೂಢಶಕ್ತಿಯೊಂದಿಗೆ ಮಾನವೀ ಬುದ್ಧಿ ಯನ್ನು ಪಯೋಗಿಸಬೇಕೆಂಬುದೇ ಸಾಹಿತ್ಯ ವಿಜ್ಞಾನಗಳದೃಷ್ಟಿ. ಆ ಮೇಲೆ ಶಬ್ದಚಿತ್ರಗಳ ಕಲೆಯು ಮಾನವ ಜಾತಿಯ ಮಧುರ ಧರ್ಮವಾಗುವದು. ಪ್ರಾಚೀನ ಭಾರತದ ಪವಿತ್ರ ಗ್ರಂಥಗಳಲ್ಲಿ, ಝೆಂಡವೆಸ್ತಾ, ಕುರಾನ-ಕ್ರೈಸ್ತರ ಗ್ರಂಥಗಳಲ್ಲಿ ಇಂಥದೇ ಧರ್ಮವಲ್ಲದೆ ಬೇರೆಯಿಲ್ಲ. ನಮ್ಮ ಪುರಾತನರ ಗುಣ ದೋಷಗಳ, ಶೌರ್ಯಧೈರ್ಯಾದಿ ಶತಕೃತ್ಯಗಳ ಜೀವಂತ ಚರಿತೆಯಾದೀ ಸಾಹಿತ್ಯ ವಿಚಾರಸಂಘಟನೆಯನ್ನು ಹದಗೊಳಿಸಿ ಬುದ್ಧಿಪ್ರವೃತ್ತಿಗಳನ್ನು ಸಂಸ್ಕೃತ ಗೊಳಿಸಿ, ನಾನಾ ಜನರನ್ನು ಒಂದುಗೂಡಿಸಿಯೇ ತೀರುತ್ತದೆ. ಅವರವರ ಆಶೆ ಮನೋರಥಗಳನ್ನು ಚೇತನಗೊಳಿಸಿ, ಸರ್ವಸ್ವತಂತ್ರ, ಸುಂದರತಮ ಬಾಳಿನ ಸುಖೋನ್ನತಿಗೆ ಅಣಿಗೊಳಿಸುತ್ತದೆ. ಸಾಹಿತ್ಯಲೋಕದ ದೃಷ್ಟಿ ಸ್ಫೂರ್ತಿಯಲ್ಲ. ಅಂತರ್ದೇಶೀಯ; ಸರ್ವದೇಶಗಳ ಬಾಂಧವ್ಯದ ಒಳ್ಳೆಯ ಕಲ್ಪನೆ ಇಂದು

ಸತ್ಯ ಸ್ವರೂಪವನ್ನು ಹೊಂದುತ್ತಿರುವಾಗ, ನಾವು ವಿಶ್ವಬಾಂಧವ್ಯದ ಸಿದ್ಧಿಗಾಗಿ ಮುನ್ನುಗ್ಗಿ ಪ್ರಯತ್ನಿಸಲೇಬೇಕು. ತೀವ್ರಗತಿಯಿಂದ ಜನಪದಗಳ ಮನದಾಳದಲ್ಲಿ ಹೊಕ್ಕು ವಿಶ್ವಬಂಧುತ್ವ ಜೀರ್ಣಿಸಿಕೊಂಡು ಕಾರ್ಯರೂಪಕ್ಕೆ ತರುವಂತಾಗಬೇಕು. ಮಾನವನು ಜ್ಞಾನಮಾರ್ಗಿಯಾದಷ್ಟು ಪರಿಪೂರ್ಣನಾಗುತ್ತ ಹೋಗುವನು. ಆತನ ಪ್ರೇಮಾಸಕ್ತಿ ಸೋದರರಲ್ಲಿ ಬೆಳೆದಷ್ಟೂ, ಒಳ್ಳೆಯ ನಿರ್ಮಾಪಕ ಶಕ್ತಿಗಳೊಂದುಗೂಡಿ, ಸಂಘಟಿತ ಸ್ವರೂಪ ತಾಳಲಿಕ್ಕೆ ಅನುಕೂಲವಾಗುವದು. ಪರಸ್ಪರ ಸೌಹಾರ್ದಭಾವ, ಆದರಗಳ ವಿಶ್ವಾತ್ಮಕ ಮಹೋತ್ಸವಕ್ಕೆ, ಮಹೋನ್ನತಿಗೆ ವೇಗಗತಿಯಿಂದ ಮುಟ್ಟಲು ತುಂಬಾ ಸಹಾಯವಾಗುವುದು.

ಹಳದಿ ಬಣ್ಣದ ಕೊಬ್ಬಿದ ಹೊನ್ನ-ಮಾರಿಯ ಪೂಜೆಗೆ, ಮದೋನ್ಮತ್ತರಾಗಿ ಮನಸೋತೋ ಪರಸ್ಪರ ದ್ವೇಷಾಸೂಯೆಗಳಿಗೆ ತುತ್ತಾಗಿಯೋ ಕೊಲೆ ಸುಲಿಗೆ ಮೊದಲಾದ ಹತ್ಯಾಕಾಂಡಕ್ಕೆ ಎಳಸಿಯೋ, ಆಧ್ಯಾತ್ಮಿಕ ಸೃಷ್ಟಿಯ ಭವ್ಯ ಚಿತ್ರವನ್ನು ಮುಂದಿಟ್ಟುಕೊಳ್ಳಲು ಮರೆಯುತ್ತಿದ್ದೇವೆ. ಮಾನವನು ಪಾಶವೀ ಕೃತ್ಯಗಳನ್ನು ಎಸಗಿದಾಗೆಲ್ಲಾ ಶತಮಾನಗಳಿಂದ ಬಂದ ಅಮೂಲ್ಯ ಮಾನವ್ಯದ ಗುಣಗಳನ್ನು ನೆನೆಯಬೇಕು ; ಮಾನವನ ಪ್ರಜ್ಞಾಶಕ್ತಿ ಮತ್ತು ಪ್ರತಿಭೆ ಜಗತ್ತಿಗೆ ಕಲಿಸಿದ್ದನ್ನು ಕೊಟ್ಟದ್ದನ್ನು ಗಮನಿಸಬೇಕು ನಾವು.

---:---

# ತಾಯಿ *

ಕುಳುಕುಂದ ಶಿವರಾಯ

ಕ್ರಾಂತಿಗೆ ಪೂರ್ವದ ರಷ್ಯ !

ಜ಼ಾರ್ ಚಕ್ರವರ್ತಿಯ ನಿರಂಕುಶಪ್ರಭುತ್ವದ ಪೆಡಂಭೂತ ಬೃಹದಾಕಾರ ತಾಳುತ್ತಿದೆ. ಅಪ್ರ್ಯಾಹತವಾಗಿ, ಸಾಗಿದೆ ಜನರ ಸುಲಿಗೆ – ಶೋಷಣೆ. ರಷ್ಯದ ಮಿಲಿಯಾಂತರ ಮಂದಿ ದುಡಿಮೆಯ ಜನರು ಜೀವ ಹಿಂಡುವ ಚಮ್ಮಟಿಕೆಯ ಅಮಾನುಷ ಪ್ರಹಾರವನ್ನು ಸಹಿಸುತ್ತಿದ್ದಾರೆ, ಸಹಿಸಿ ನರಳುತ್ತಿದ್ದಾರೆ ; ಮತ್ತೆ ಕೆರಳಿ ಏಳುತ್ತಿದ್ದಾರೆ. ಮಿಲಿಯ ಹೃದಯಗಳ ಬೇಗುದಿ – ಕ್ರಾಂತಿಯ ಕಿಡಿ, ಉರಿ ! ಯಾವುದೋ ಮಹಾ ಸಂಗ್ರಾಮಕ್ಕೆ ಅಭೂತಪೂರ್ವ ಸಿದ್ಧತೆ ನಡೆದಿದೆ ! ಇಂದೋ ನಾಳೆಯೋ ಸ್ಫೋಟನವಾಗಬಹುದು.

ಆ ರಷ್ಯವನ್ನು, ರಷ್ಯದ ಜನರನ್ನು, ಅವರು ನಡೆಸುತ್ತಿದ್ದ ಸಿದ್ಧತೆಯನ್ನು ಮಹಾಸಾಹಿತಿ ಗಾರ್ಕಿ ತಮ್ಮ "ತಾಯಿ" (Mother) ಗ್ರಂಥದಲ್ಲಿ ಚಿತ್ರಿಸಿದ್ದಾರೆ.

*  *  *  *

ಆ ಊರಿನ ದುಡಿಮೆಯ ಜೀವಿಗಳು ಮುಂಜಾನೆಯಿಂದ ಮುತ್ಸಂಜೆಯವರೆಗೆ ಕಾರ್ಖಾನೆಯಲ್ಲಿ ದುಡಿಯುವರು ; ಮತ್ತೆ ಆಯಾಸವಾಗಿ ಮನೆಗೆ ಮರಳಿ ಕುಡಿಯುವರು ; ಅಮಲೇರಿ ಹೊಡೆದಾಡುವರು. "ಎಲ್ಲವೂ ವಿಧಿಲಿಖಿತ" ಎಂಬ ನಿಸ್ಸಹಾಯತೆಯ ದುಷ್ಪ್ರಭಾವ ಅವರ ಜೀವನವನ್ನು ಆವರಿಸಿತ್ತು.

ಮೈಖೆಲ್ ವ್ಲಾಸೋವ್ ಅಂತಹ ಕೂಲಿಗಳಲ್ಲೊಬ್ಬ. ಗಟ್ಟಿಮುಟ್ಟಾದ ಆಳು, ಮಹಾ ಕ್ರೂರಿ. ಆ ಜೀವನ ಅವನನ್ನು ಮೃಗವಾಗಿ ಮಾರ್ಪಡಿಸಿತ್ತು. "ನಿರ್ಭೀತ, ನಿರ್ದಯ, ಅಮಾನುಷ ಶಕ್ತಿ" ಎಂದು ಇತರ ಕೂಲಿಗಳು ಅವನನ್ನು ದೂರವಿಟ್ಟಿದ್ದರು. "ತುಚ್ಛ ಹುಳು !" ಎನ್ನುವವನು, ಆಗ

---

* Mother.

ದವರು ಯಾರು ಬಂದರೂ. ಕಾರ್ಖಾನೆಯ ಅಧಿಕಾರಿಗಳಿಗೆ, ಪೋಲೀಸ ರಿಗೆ, ಹೆಂಡತಿಗೂ ಹಾಗೆಯೇ ಅದೇ ಸಂಬೋಧನಾ ಶಬ್ದ.

ಅವನ ಮಗ ಪಾವೆಲ್ ಹದಿನಾಲ್ಕರ ಹುಡುಗನಾಗಿದ್ದಾಗಲೊಮ್ಮೆ, ಅವನ ಕೂದಲು ಹಿಡಿದು ಎಳೆಯಬೇಕೆಂಬ ದುರ್ಬುದ್ಧಿ ತಂದೆಗೆ ತಟ್ಟಿತು. ಆದರೆ ಪಾವೆಲ್ ದಪ್ಪನೆಯ ಸುತ್ತಿಗೆಯನ್ನೆತ್ತಿ "ನನ್ನನ್ನು ಇನ್ನು ಮುಟ್ಟಬೇಡ !" ಎಂದು ಗದರಿಸಿದ.

ಹುಂ ! ತಂದೆ ಮಗನನ್ನೇ ನೋಡಿದ. ತನ್ನ ಕೊಳಕು ಕೈಗಳನ್ನು ಬೆನ್ನ ಹಿಂದೆ ಕಟ್ಟಿ "ಆಗಲಾಗಲಿ", ಎಂದ. ಮತ್ತೆ ದೀರ್ಘಶ್ವಾಸ ಬಿಟ್ಟು "ಥೂ ತುಚ್ಛ ಹುಳ" ಎಂದುಕೊಂಡ.

ಮತ್ತೆ ಹೆಂಡತಿಯ ಬಳಿಗೆಹೋಗಿ ವ್ಲಾಸೋವ್ ಹೇಳಿದ : "ನೋಡಿನ್ನು, ನನ್ನೊಡನೆ ಹಣ ಕೇಳಬೇಡ. ಪಾಶಾ ನಿನಗೆ ಅನ್ನ ಹಾಕುತಾನೆ."

ಹಾಗೆಯೇ ಆಯಿತು. ಆಮೇಲೆ ಮೂರು ವರ್ಷ ಜೀವಂತನಿದ್ದಷ್ಟು ಕಾಲ ವ್ಲಾಸೋವ್ ಮಗನನ್ನು ಕಣ್ಣೆತ್ತಿಯೂ ನೋಡಲಿಲ್ಲ. ಮನೆಗೆ ಚಿಕ್ಕಾಸನ್ನೂ ಕೊಡಲಿಲ್ಲ.

ವ್ಲಾಸೋವ್ ನಾಲ್ಕೈದು ದಿನ ನರಳಿ ಸತ್ತುಹೋದ. ಕೊನೆಯ ದಿನ ಬೆಳಿಗ್ಗೆ "ಕೆಲಸಕ್ಕೆ ಬನ್ನಿ" ಎಂದು ಕಾರ್ಖಾನೆಯ ಶಿಳ್ಳು ಕೇಳಿದಾಗ ಅವನ ಕೊನೆಯ ಉಸಿರು ಹೊರಟು ಹೋಯಿತು.

ವ್ಲಾಸೋವನ ಪತ್ನಿ ನಿಲೋನಾ ಸುಖವೆಂದರೇನೆಂಬುದನ್ನು ಅನುಭವಿಸಿದವಳಲ್ಲ. ಮದುವೆಯಾದ ಮೊದಲ್ಗೊಂಡು ಪ್ರತಿನಿತ್ಯವೂ ಗಂಡನ ಚಿತ್ರಹಿಂಸೆ, ಕಷ್ಟಪರಂಪರೆಗಳನ್ನು ಅವಳು ಸಹಿಸಿಕೊಂಡು ಬಂದಿದ್ದಳು.

ಮಗ ಪಾವೆಲ್ ಮನೆಯ ಯಜಮಾನನಾದ. ಒಂದು ದಿನ ರಾತ್ರಿ ಕುಡಿದು ಬಂದು, ವಾಂತಿಮಾಡಿ, ರಂಪ ಮಾಡಿದ. "ಕುಡಿಯಬಾರದು ಪಾಶಾ" ಎಂದಳು ನಿಲೋನಾ.

"ಏನು ? ನನ್ನ ಪ್ರಾಯದವರೆಲ್ಲ ಕುಡಿಯುವುದಿಲ್ಲವೆ ?"

ಅದು ಸರಿ ; ಹೆಂಡದಂಗಡಿಯ ಹೊರತು ಮಜೂರರು ಮನರಂಜನೆ

ಮಾಡುವ ಸ್ಥಳ ಬೇರೆ ಯಾವುದಿತ್ತು ? ಕ್ರೈಸ್ತದೇವರೆದುರಿಗೆ ಮೊಣಕಾಲೂರಿ ನಿಲೋನಾ ಪ್ರಾರ್ಥಿಸಿದಳು.

ದಿನಗಳು ಕಳೆದುವು. ಪಾವೆಲ್ ಕುಡಿಯುತ್ತಿದ್ದಂತೆ ತೋರಲಿಲ್ಲ. ರಾತ್ರಿ ತಡವಾಗಿ ಮನೆಗೆ ಬರುವುದಕ್ಕೆ ಮೊದಲಾಯಿತು. ಪಾವೆಲ್ ಗಂಭೀರನಾಗಿ ಇರುತ್ತಿದ್ದ. ಹರೆಯದ ಇತರರಂತೆ ಅವನು ಇಲ್ಲವೇಕೆ ? ಈ ವಿಚಿತ್ರ ವರ್ತನೆಯೇಕೆ ? ನಿಲೋನಾ ಅಂಜಿಕೊಂಡಳು. ಬರಬರುತ್ತ ಮಾತು ಕಡಿಮೆಯಾಯಿತು. ಆದರೆ ಆಡುತ್ತಿದ್ದ ಸ್ವಲ್ಪ ಮಾತುಗಳಲ್ಲಿ ವಿನಯವಿತ್ತು- ಸೌಜನ್ಯವಿತ್ತು. ಪಾವೆಲ್ ಚೆನ್ನಾಗಿ ಮೈತೊಳೆದು ಕೊಳೆಯಿಲ್ಲದ ಬಟ್ಟೆ ತೊಡುತ್ತಿದ್ದ. "ನೀವು" ಎಂದು ಬಹುವಚನದಿಂದ ಪಾವೆಲ್ ನಿಲೋನಾಳನ್ನು ಸಂಬೋಧಿಸುವ; ಗೌರವದಿಂದ "ತಾಯಿ" ಎಂದು ಕರೆಯುವ. ಒಮ್ಮೊಮ್ಮೆ ಮಾತ್ರ ಬಲು ಸಲಿಗೆಯಿಂದ, 'ಅಮ್ಮಾ...ರಾತ್ರಿ ಬರುವಾಗ ಸ್ವಲ್ಪ ತಡವಾದರೆ ಗಾಬರಿಯಾಗಬೇಡ' ಎನ್ನುವ. ಆಗ ತಾಯಿಗೆ ಬಲು ಸಂತೋಷವಾಗುತ್ತಿತ್ತು.

ಮಗನ ಬದಲಾವಣೆಯನ್ನು ಕಂಡು ತಾಯಿಗೆ ಏನೋ ಒಂದು ತರದ ಅಸಮಾಧಾನ ; ಅತೃಪ್ತಿ. ಆಕೆಗೆ ಅದರ ಅರ್ಥವಾಗಲೊಲ್ಲದು ಅಷ್ಟೆ. ''ಇವನು ಸನ್ಯಾಸಿಯಂತಿದ್ದಾನಲ್ಲ'' ಎನ್ನುವಳು ಒಮ್ಮೊಮ್ಮೆ. ಮತ್ತೆ ಕೆಲವೊಮ್ಮೆ "ಯಾವುದಾದರೂ ಹುಡುಗಿಯಲ್ಲಿ ಪ್ರೇಮಬೆಳೆಸಿದ್ದಾನೆಯೋ ಏನೋ" ಎಂದು ಶಂಕಿಸುವಳು.

ಆದರೆ ಹುಡುಗಿಯರ ಹಿಂದೆ ಹೋಗಲು ಹಣಬೇಕು. ಪಾವೆಲ್ ತನ್ನ ದುಡಿತದ ಹಣವನ್ನೆಲ್ಲ ಮನೆಗೆ ಒಪ್ಪಿಸುತ್ತಿದ್ದ !

ಹೀಗೆ ಸಮಯ ಕಳೆಯಿತು. ಪಾವೆಲ್ ಏನೋ ಪುಸ್ತಕಗಳನ್ನು ತಂದು ಕದ್ದು ಓದತೊಡಗಿದ.

ಒಂದು ದಿನ ನಿಲೋನಾ ಅಡುಗೆ ಮನೆಯಿಂದ ಮೆಲುನಡಿಯಲ್ಲಿ ಮಗನ ಕೋಣೆಗೆ ಬಂದಳು. ಪುಸ್ತಕ ಓದುತ್ತಿದ್ದ ಪಾವೆಲ್ ತಲೆಯೆತ್ತಿ ''ಏನಮ್ಮ?'' ಎಂದ. ''ಏನೂ ಇಲ್ಲ - ಏನೂ ಇಲ್ಲ" ಎಂದು ಗಾಬರಿಗೊಂಡವಳಂತೆ ತಾಯಿ ಹಿಂದಿರುಗಿ ಹೋದಳು. ಮತ್ತೆ ಪುನಃ, ಮುಸುರೆ ತಿಕ್ಕಿ, ಮಗನ

ಕೋಣೆಗೆ ಹೋಗಿ, ಮೃದುಸ್ವರದಿಂದ, "ನೀನು ಯಾವಾಗಲೂ ಓದುತ್ತಿರುವುದು ಏನನ್ನು ಪಾಶಾ ?" ಎಂದು ಕೇಳಿದಳು.

"ಗೋಪ್ಯದಲ್ಲಿ ಮುದ್ರಿತವಾಗುವ ಪುಸ್ತಕಗಳನ್ನು. ಗೊತ್ತಾದರೆ ಪೋಲೀಸರು ಬಂಧಿಸುವರು, ಸೆರೆಮನೆಗೆ ಒಯ್ಯುವರು ಆದರೆ ಆ ಪುಸ್ತಕಗಳನ್ನು ಓದಲೇ ಬೇಕು. ಅವರಲ್ಲಿ ಸತ್ಯವಿದೆ; ಮಜೂರ ಜೀವನದ ಕುರಿತಾದ ಸತ್ಯ."

ತಾಯಿಗೆ ಅಂಜಿಕೆಯಾಯಿತು.

ಆದರೆ ಪಾವೆಲ್ ವಿವರಿಸುತ್ತಾ ಹೋದ.

"ಅಳಬೇಡವಮ್ಮ .... ಈಗ ನೋಡು ... ನೀನು ಜೀವಿಸುತ್ತಿರುವ ಬಾಳ್ವೆಯಾದರೂ ಯಾವ ರೀತಿಯದು ? ನಿನಗೆ ನಾಲ್ವತ್ತು ವರ್ಷವಾಯಿತು; ಆದರೆ ಏನು ಸುಖ ಅನುಭವಿಸಿದೆ. ತಂದೆ ನಿನ್ನ ಹೊಡೆಯುತ್ತಿದ್ದ. ತನ್ನ ಜೀವನದ ಕ್ಷುದ್ರತೆಯನ್ನು ನಿನ್ನ ಹೊಡೆದು - ನಿನ್ನ ದೇಹದ ಮೇಲೆ ತೀಟೆ ತೀರಿಸಿ, ಮರೆಯಲು ಯತ್ನಿಸುತ್ತಿದ್ದ. ನನಗೆ ಈಗ ಅದೆಲ್ಲ ಅರ್ಥವಾಗುತ್ತಿದೆ. ಅಂಥ ಕೆಟ್ಟ ಬುದ್ಧಿ ಹೇಗೆ - ಏಕೆ ಬರುತ್ತಿತ್ತೋ ಅಪ್ಪನಿಗೇ ತಿಳಿದಿರಲಿಲ್ಲ. ಮೂವತ್ತು ವರ್ಷ ಅವನು ದುಡಿದ. ಕಾರ್ಖಾನೆಯಲ್ಲಿ ಒಟ್ಟು ಎರಡು ಕಟ್ಟಡಗಳಿದ್ದಾಗ ಅವನು ಕೆಲಸಕ್ಕೆ ಮೊದಲು ಮಾಡಿದ; ಈಗ ಅಲ್ಲಿ ಏಳು ಕಟ್ಟಡಗಳಿವೆ. ಕಾರ್ಖಾನೆ ಬೆಳೆಯುತ್ತದೆ, ಜನರು ಅವುಗಳಿಗಾಗಿ ದುಡಿದು ಸಾಯುತ್ತಾರೆ.''

ಕುತೂಹಲದಿಂದ, ಭೀತಳಾಗಿ, ನಿಲೋನಾ ಈ ಮಾತುಗಳನ್ನು ಕೇಳಿದಳು ಇದೇ ಏನು ಪಾವೆಲ್ ತಿಳಿಯಲು ಯತ್ನಿಸುತ್ತಿದ್ದ ಸತ್ಯ ?

ಹೇಗೆ ಈ ಸತ್ಯ ಪ್ರಚಾರದ ಪವಿತ್ರ ಆಂದೋಲನಕ್ಕೆ ಗಾರ್ಕಿ ಮೊದಲು ಮಾಡಿದ್ದಾರೆ. ತನ್ನ ಇಳಿವಯಸ್ಸಿನಲ್ಲ ತಾಯಿ ನಿಲೋನಾ ಸತ್ಯ-ಕ್ರಾಂತಿಯ ಮೂಲಮಂತ್ರವನ್ನು ಕೇಳಿ ತಿಳಿದಳು. ಹೊಸ ಹಾದಿಯನ್ನು ತುಳಿಯುತ್ತಿದ್ದ ಮಗ ಪಾವೆಲ್ ತಾಯಿಗೆ ಮಂತ್ರೋಪದೇಶ ಮಾಡಿದ.

ಪಾವೆಲ್ ಗೆಳೆಯರನ್ನು ಮನೆಗೆ ಕರೆತರಲು ಆರಂಭಿಸಿದ. ಮೊದಲ ದಿನ ತಾಯಿಗೆ ಹೆದರಿಕೆಯಾಯಿತು. ಆದರೆ ಆ ದಿನ ಬಂದಿದ್ದವರನ್ನು ನೋಡಿದ ಮೇಲೆ ಅವಳ ಅಂಜಿಕೆ ದೂರವಾಯಿತು. ಪಟ್ಟಣದಿಂದ ಬಂದಿದ್ದ

ಆಂಡ್ರಿ ಒಳ್ಳೆಯ ನಗೆಗಾರ; ರಸಿಕ. ಬಂದವನೇ, "ನಿನ್ನ ಹಣೆಯಲ್ಲಿರುವ ಆ ತೂತನ್ನು ಯಾರು ಮಾಡಿದರು ತಾಯಿ?" ಎಂದು ಕೇಳಿದ.

ತಾಯಿಗೆ ಸಿಟ್ಟು ಬಂತು; ಪಾವೆಲ್ ಆಗಿನ್ನೂ ಮನೆಗೆ ಬಂದಿರಲಿಲ್ಲ. "ನಿನಗೆ ಬಂದುದೇನು ಅದರಿಂದ?" ಎಂದು ತಾಯಿ ಮುಡುಕಿ ನುಡಿದಳು.

ಅವನು ಹೇಳಿದ: "ಸಿಟ್ಟೇಕೆ ಅದಕ್ಕೆ? ನನ್ನ ಸಾಕುತಾಯಿಯ ತಲೆಯಲ್ಲೂ ಇಂತಹುದೇ ಗಾಯವಿದೆ. ಅವಳ ಗಂಡ ಹಾಗೆ ಮಾಡಿದವನು."

ತಾಯಿ ನಾಚಿದಳು; ನಕ್ಕಳು. ಅವನು ಹೇಗೆ ಹೃದಯ ತೆರೆದು ಮಾತನಾಡಿದ!

ಮತ್ತೊಬ್ಬಳು ಹುಡುಗಿ ನಟಾಶಾ. ಮೂರನೆಯವನು ನಿಕೋಲೆಯ್, ಹೆಸರುವಾಸಿ ಕಳ್ಳನೊಬ್ಬನ ಮಗ. ತಾಯಿಗೆ ಬೇಸರವಾಯಿತು. ಆಮೇಲೆ ಬಂದವರು ಹರೆಯದ ಹೊಸ್ತಿಲನ್ನು ಮೆಟ್ಟದೇ ಇದ್ದ ಇಬ್ಬರು ಎಳೆಯರು. ತಾಯಿ ಕರುಣೆಯ ದೃಷ್ಟಿಯಿಂದ ಅವರೆಲ್ಲರನ್ನು ನೋಡಿದಳು. "ಸತ್ಯದ ಪ್ರಚಾರಕ್ಕೆ ಹೊರಟಿರುವ ಮಕ್ಕಳು!

ಈ ಬಾಂಧವ್ಯ ಬೆಳೆಯುತ್ತಲಿತ್ತು. ಬಂದವರು ಓದುತ್ತಲಿದ್ದಾಗ ತಾಯಿ ದೂರದಲ್ಲಿ ನಿಂತು ಕಿವಿ ನಿಮಿರಿಸಿ ಕೇಳುವಳು. ಅರ್ಥವಾದಾಗ ಆಯಿತು; ಇಲ್ಲವಾದರೆ ಆಕೆ ತನ್ನ ಬಾಲ್ಯವನ್ನು ಸ್ಮರಿಸಿ ದುಃಖಿಸುವಳು. ಮತ್ತೆ "ದೇವರೇ! ಈ ಮಕ್ಕಳನ್ನು ಕಾಪಾಡು!" ಎನ್ನುವಳು.

ಎಂತಹ ಜನರಿವರು! ಇವರಿಗೆಲ್ಲ ಲೋಕದಲ್ಲಿರುವುದು ಎರಡೇ ಜನ ವಿಭಾಗ. ಮರ್ದಿಸುವವರು - ಮರ್ದಿತರು. ನೋಡದ - ಕೇಳದ, ಇತರ ದೇಶಗಳ ಮಜೂರರೆಲ್ಲ ಇವರ ಬಂಧುಗಳು. ಸಂಗಾತಿಗಳು.

ತಾಯಿ ಹೇಳಿದಳೊಂದು ದಿನ: "ವಿಚಿತ್ರ ಜನರು ನೀವು. ಎಲ್ಲರೂ ನಿಮ್ಮ ಬಂಧುಗಳೇ - ಅಮೇರಿಕನರು, ಯೆಹೂದ್ಯರು, ಆಸ್ಟ್ರಿಯನರು, ಎಲ್ಲರೂ! ಎಲ್ಲರನ್ನು ನಿಮ್ಮ ಗೆಳೆಯರೆನ್ನುವಿರಿ; ಎಲ್ಲರಿಗಾಗಿಯೂ ದುಃಖಿಸುವಿರಿ; ಮತ್ತೆ ಎಲ್ಲರಿಗಾಗಿಯೂ ಸಂತೋಷಪಡುವಿರಿ."

ಮನೆಯವನೇ ಆಗಿಹೋಗಿದ್ದ ಆಂಡ್ರಿ "ಹೌದು ತಾಯಿ!" ಜಗತ್ತು ನಮ್ಮದು! ಜಗತ್ತು ಮಜೂರರಿಗಾಗಿ! ನಮಗೆ ರಾಷ್ಟ್ರವಿಲ್ಲ - ಜಾತಿಯಿಲ್ಲ, ದುಡಿಯುವವರು ನಾವೆಲ್ಲ ಒಂದೇ!" ಎಂದ.

ಪವಿತ್ರ ಕಾರ್ಯವನ್ನು ಸಾಧಿಸಲು ಪಣ ತೊಟ್ಟಿದ್ದ ವ್ರತಾಚಾರಿಗಳು! ಅವರು ಹೇಳುತ್ತಿದ್ದುದೆಲ್ಲವೂ ತಾಯಿಗೆ ಅರ್ಥವಾಗುತ್ತಿರಲಿಲ್ಲ. ಆದರೂ, "ಅನ್ಯಾಯವಾದುದನ್ನು ಈ ಸನ್ನ ಮಕ್ಕಳು ಎಂದಿಗೂ ಮಾಡಲಾರರು" ಎಂದು ತಾಯಿ ನಿರ್ಧಾರವಾಗಿ ನಂಬಿದ್ದಳು.

ಪೋಲೀಸರೊಮ್ಮೆ ಮನೆಯನ್ನು ಶೋಧಿಸಿದರು. ಕಾರ್ಖಾನೆಯಲ್ಲಿ ಗಲಭೆಯಾಯಿತೆಂದು ಪಾವೆಲ್‌ನನ್ನು ಅಧಿಕಾರಿಗಳು ಬಂಧಿಸಿದರು.

ತಾಯಿಗೆ ಅಪಾರ ದುಃಖವಾಯಿತು. ಆಂದೋಲನದಲ್ಲಿ ಸೇರಿದ್ದ ಇತರ ಬಂಧುಗಳು ಕ್ರಾಂತಿ ಸಾಹಿತ್ಯವನ್ನು ತರುತ್ತಲೇ ಇದ್ದರು. ಆದರೆ ಅದನ್ನು ಕಾರ್ಖಾನೆಯೊಳಗೆ ಒಯ್ಯುವವರು ಯಾರು? "ನಾನು!" ಎಂದಳು ತಾಯಿ. ಪಾವೆಲ್ ಮತ್ತು ಅವನ ಸಂಗಡಿಗರು ಸೆರೆಮನೆಯಲ್ಲಿರುವಾಗಲೂ ಈ ಕೆಲಸ ಸಾಗುವುದೆಂದಾದರೆ, ಅವರು ಅದಕ್ಕೆ ಕಾರಣರು ಎಂಬ ಆಪಾದನೆ ತಪ್ಪುವುದಲ್ಲವೆ? ಮಗನಿಗೆ - ಅವನ ಜೀವಿತ ಧ್ಯೇಯಸಾಧನೆಗೆ - ಅದರಿಂದ ಉಪಕಾರವಾಗುವುದಲ್ಲವೆ?

ತಿಂಡಿಯನ್ನು ಒಳಗೊಯ್ದು ಮಾರತೊಡಗಿದಳು ನಿಲೋನಾ. ಆದರೆ ಕಾರ್ಖಾನೆಯೊಳಗೆ ನೋಟೀಸು - ಕರಪತ್ರಗಳೂ ಬಂದುವು! ಇಂತಹ ಸಾಹಸದ ಕೆಲಸ ಮಾಡಿದಾಗಲೆಲ್ಲ ತಾಯಿಯ ಹೃದಯ ತುಂಬಿ ಬರುತ್ತಿತ್ತು. ಪಾವಲನನ್ನೊಮ್ಮೆ ಸೆರೆಮನೆಯಲ್ಲಿ ಭೇಟಿಯಾದಾಗ ತಾಯಿ ಮಗನಿಗೆ ತನ್ನ ಕೆಲಸ ಅರ್ಥವಾಗುವಂತೆ ಮಾಡಿದಳು. ಕೃತಜ್ಞತೆಯಿಂದ - ಆನಂದದಿಂದ ಅವನ ಕಣ್ಣುಗಳು ಪ್ರಕಾಶಿಸಿದುವು. ತಾಯಿಗೆ ಸಂತೋಷವಾಯಿತು. ಆದರೆ ದುಃಖವೂ ಆಗುತ್ತಿತ್ತು.

ಪಾವೆಲ್, ಸಂಗಾತಿ ಶಶಾಂಕಳನ್ನು ಪ್ರೀತಿಸುತ್ತಿದ್ದ. ಪಟ್ಟಣದಿಂದ ಬರುತ್ತಿದ್ದ ಕಾಮ್ರೇಡ್ ಇಗರ್ ಅದನ್ನು ಹೇಳಿದ್ದ. ತನಗೂ ತಿಳಿಸಬಾರದೆ? ತಾಯಿ ಮನಸ್ಸಿನಲ್ಲೆ ಕೊರಗುತ್ತಿದ್ದಳು. ತಮ್ಮಿಬ್ಬರ ಧ್ಯೇಯಸಾಧನೆಗೆ ತೊಡಕಾಗುವುದೆಂದು ಶಶಾಂಕ - ಪಾವೆಲ್ ಯಾರೂ ಮದುವೆಯ ಪ್ರಸ್ತಾಪವೆತ್ತುತ್ತಿರಲಿಲ್ಲ. ತಾಯಿಗೆ, ಇವರ ಜೀವನ ಹೀಗಾಗಬೇಕಲ್ಲಾ ಎಂಬ ದುಃಖ; ಜತೆಯಲ್ಲೇ, ಮಗನ ಪ್ರೀತಿಗೆ ತಾನೊಬ್ಬಳೇ ಅಧಿಕಾರಿಣಿಯಲ್ಲ ಎಂಬ ಹೆಣ್ಣಿನ ಮರುಕ.

ಆಂಡ್ರಿ ಒಂದು ದಿನ ಹೇಳಿದ: "ಅಮ್ಮಾ, ನೀನು ಓದಲು ಏಕೆ ಕಲಿಯಬಾರದು"

ಒಂದು ಪುಸ್ತಕವನ್ನೆತ್ತಿ ಯತ್ನಿಸಿದ್ದಾಯಿತು. ಮರೆತುಹೋಗಿದ್ದುದನ್ನು ಪುನಃ ಸ್ಮರಿಸಿ, ತಾಯಿ ಕೆಲವು ಅಕ್ಷರಗಳನ್ನು ಗುರುತು ಹಿಡಿದಳು. ಆದರೆ ಆಂಡ್ರಿ ನಗುವುದೇಕೆ? ಲಜ್ಜೆ, ಮುನಿಸಿನಿಂದ "ಸಾಕಪ್ಪ" ಎಂದಳು ತಾಯಿ.

ಆದರೆ ಮನೆಯಲ್ಲಿ ಯಾರೂ ಇಲ್ಲದಿದ್ದಾಗ ಭದ್ರವಾಗಿ ಬಾಗಿಲು ಕಿಟಕಿಗಳನ್ನು ಮುಚ್ಚಿ, ಯಾವುದಾದರೊಂದು ಪುಸ್ತಕವನ್ನು ತೆರೆದು, ಮತ್ತೊಮ್ಮೆ ಸುತ್ತಲೂ ನೋಡಿ, ಅಮ್ಮ ಓದಲು ತೊಡಗುವಳು.

ಒಂದು ದಿನ ತಾಯಿಯೇ, "ಆಂಡ್ರ್ಯೂಷಾ, ನನ್ನ ಕಣ್ಣುಗಳು ಬಲು ಕ್ಷೀಣವಾಗಿವೆ. ಕನ್ನಡಕ ತಂದರೆ ಒಳ್ಳೆಯದಾದೀತೋ ಏನೋ!" ಎಂದಳು.

ಪಾವೆಲ್ ಬಿಡುಗಡೆಯಾಗಿ ಬಂದ. ಅವನ ಹೃದಯ ತುಂಬಿತ್ತು. ಆದರೂ ಅಕ್ಕರೆಯ ಮಾತುಗಳು ತುಳುಕಿ ಬಂದುವು. "ಅಮ್ಮಾ-ನೋಡೀಗ. ಇಷ್ಟರ ತನಕವೂ ನೀನು ಸಂಕಷ್ಟವನ್ನೇ ಅನುಭವಿಸಿದುದು; ಕಣ್ಣೀರಿನ ಅನ್ನವನ್ನೇ ಉಂಡುದು. ನನ್ನ ಕಾಲದಲ್ಲಿಯೂ ಹಾಗೆಯೇ ಇರಬೇಕಾದೀತು. ನೀನು ನನ್ನನ್ನು ತಿಳಿದುಕೊಳ್ಳಲಾರೆ.... ತಿಳಿದುಕೊಳ್ಳುವುದು ಸಾಧ್ಯವಿಲ್ಲ .. —ಎಂದೆಲ್ಲ ಭಾವಿಸಿದ್ದೆ ಆದರೆ ಈಗ!"

ಹಳ್ಳಿಗಾಡಿನಿಂದ ಬರುತ್ತಿದ್ದ ರೈಬಿನ್ ಎಲ್ಲವನ್ನು ಸಂಶಯದೃಷ್ಟಿಯಿಂದ ನೋಡುತ್ತಿದ್ದ. "ಇಲ್ಲಿ, ಎಲ್ಲವನ್ನೂ ಯೋಚಿಸಬೇಕು . . . ಯಾರೋ ಶ್ರೀಮಂತರೇ ಈ ಕೆಲಸ, ದಲಿತರನ್ನು ಎತ್ತಿಕಟ್ಟುವ ಕೆಲಸ, ಮಾಡಿಸುತ್ತಿರಬೇಕು." ತಾಯಿ ಯೋಚನೆಗೆ ಒಳಗಾಗುವಳು.

ಆದರೆ ಆಂಡ್ರಿ ಮನೆಗೆ ಬಂದಾಗ, ನಾಲ್ಕು ಮಾತಾಡಿ, ಸಂಶಯವನ್ನು ಬಗೆಹರಿಸಿದಾಗ, ತಾಯಿ ತನ್ನ ಮೌಢ್ಯಕ್ಕಾಗಿ ತಾನೇ ನಗುವಳು.

"ನಿಲೋನಾ, ನೀನೂ ಈ ಚಳವಳದಲ್ಲಿ ಸೇರಿರುವೆಯಾ?" ಎಂದು ಯಾರಾದರೂ ಕೇಳಿದರೆ ತಾಯಿ ಹೆಮ್ಮೆಪಡುವಳು.

ಮತ್ತೆ ಒಮ್ಮೊಮ್ಮೆ ಮನೆಗೆ ಬರುತ್ತಿದ್ದವರು ದೇವರನ್ನು ಟೀಕಿಸಿದರೆ

ಅವಳಿಗೆ ದುಃಖವಾಗುವುದು. "ಬೇಕಾದ್ದು ಹೇಳಿರಿ ಮಕ್ಕಳೆ! ದೇವರ ಅಸ್ತಿತ್ವದ ವಿಚಾರದಲ್ಲಿ ನಾನೆಂದಿಗೂ ತಪ್ಪಿಬೀಳಲಾರೆ" ಎನ್ನುವಳು.

ಮೇ ದಿನಾಚರಣೆಗೆ ಸಿದ್ಧತೆ ನಡೆಯಿತು. ಪಾವೆಲ್ ಆ ದಿನ ರಕ್ತ ಧ್ವಜವನ್ನು ಎತ್ತಿ ನಡೆಯುವವನು . . ಅಂದರೆ ಸೆರೆಮನೆ ಸಿದ್ಧ. . ..

ಮೇ ದಿನ ಮುಸ್ಕರವಾಯಿತು. ಸೂರ್ಯನು ಶುಭ್ರನಾಗಿ ಕಾಣಿಸಿಕೊಂಡ ಮೇಲೆ, ಮೆರವಣಿಗೆ ಹೊರಟಿತು. ಎಲ್ಲರೂ ಪಾವೆಲ್ - ಆಂಡ್ರಿಯರನ್ನು ನೋಡುವವರೇ. ವೃದ್ಧೆ ತಾಯಿ, ತಾನೂ ತಲೆಯೆತ್ತಿ ಎದೆಯೆತ್ತಿ ಹೆಮ್ಮೆಯಿಂದ ಮಗನ ಕಣ್ಣಲ್ಲಿ ನೋಡಿದಳು.

ಪೋಲಿಸ್ ಸವಾರರು ಕುದುರೆಗಳನ್ನೇರಿ ಬಂದಾಗ ಯಾರೋ ಅಣಕವಾಡಿದರು. "ಸರಕಾರ ಕುದುರೆಗಳ ಮೇಲೆ ಹಂದಿಗಳನ್ನಿರಿಸುತ್ತದೆ. 'ನಾವು ಬಂದಿದ್ದೇವೆ ಮುಖಂಡರ!' ಎಂದು ಹಂದಿಗಳು ಡುರುಂಕೆನ್ನುತ್ತವೆ."

ಪಾವೆಲ್ ಸ್ವರವೆತ್ತಿ ನುಡಿದ: "ಸೋದರರೇ! ಅತ್ಯಾಶೆ, ದ್ವೇಷ, ವೈಮನಸ್ಸು, ಅಂಧಕಾರ, ಹಿಂಸೆ - ಉಸಿರ್ದ ಈ ಅರ್ಥಹೀನ ಜೀವನವನ್ನು, ಎಲ್ಲಿ ನಮಗೆ ಸ್ಥಾನವಿಲ್ಲವೋ, ಎಲ್ಲಿ ನಾವು ಮನುಷ್ಯಜೀವಿಗಳಲ್ಲವೋ, ಅಂತಹ ಈ ಜೀವನವನ್ನು ಮುಕ್ತಾಯಗೊಳಿಸುವ ಸಮಯ ಬಂದೊದಗಿದೆ.

"ಬಂಧುಗಳೆ - ಸಂಗಾತಿಗಳೆ! ನಾವು ಯಾರು ಎಂಬುದನ್ನು ಪ್ರಕಾಶವಾಗಿ ತಿಳಿಯಗೊಡಲು ಇಂದು ನಿರ್ಧರಿಸಿದ್ದೇವೆ. ನ್ಯಾಯ, ಸತ್ಯ, ಸ್ವಾತಂತ್ರ್ಯದ ನಮ್ಮ ಧ್ವಜವನ್ನು ಇಂದು ನಾವು ಹಾರಿಸುತ್ತೇವೆ!"

ತೆಳುವಾದ, ಬೆಳ್ಳಗಿನ ಧ್ವಜಸ್ತಂಭವೊಂದು ಎತ್ತರಕ್ಕೆ ನೆಗೆಯಿತು. ಜತೆಯಲ್ಲೆ ದುಡಿಯುವ ಜನತೆಯ ಕೆಂಬಾವುಟ ಮೆಲ್ಲಮೆಲ್ಲನೆ ಬಿಡಿಸಿಕೊಂಡು ಹರಿದಾಡಿತು. ಸಾವಿರಾರು ಕಂಠಗಳು, "ಮಜೂರ ಜನತೆ ಶಾಶ್ವತವಾಗಲಿ!" ಎಂದು ಘೋಷಿಸಿದುವು.

ಯಾರೋ ಕ್ರಾಂತಿ ಗೀತವನ್ನು ಹಾಡಿದರು.

ನೂರಾರು ಉತ್ಸಾಹಿ ತರುಣರು ಮುಂದಕ್ಕೆ ಸಾಗಿದರು. ವೃದ್ಧೆ ತಾಯಿ ಹಿಂದೆ ಉಳಿದು ಹೋದಳು. ಗುಂಡುಗಳು ಹಾರಿದುವು; ಜನ ಚದುರಿದರು; ಬಂಧನವಾಯಿತು.

ಮತ್ತೆ ಉಳಿದಿದ್ದ ಜನರನ್ನೆದುರಿಸಿ ತಾಯಿ ನಿಲೋವ್ನಾ ಕೂಗಿ ಹೇಳಿ

ವಳು: "ನನ್ನ ಪ್ರೀತಿಯ ಮಕ್ಕಳೇ! ನನ್ನ ಜನರೇ! ಕ್ರೈಸ್ತರ್ನಾಗೆಯಿಂದೆ ನನ್ನ ಮಾತುಗಳಿಗೆ ಕಿವಿಗೊಡಿರಿ."

.... ...ಆ ರಾತ್ರಿ ತಾಯಿ ಪ್ರಾರ್ಥನೆ ಮಾಡಲಿಲ್ಲ.

ನಿಕೊಲೆಯ್ ಇವಾನೊವಿಶ್ ಪಟ್ಟಣದಿಂದ ಬಂದ, ತಾಯಿಯನ್ನು ಕರೆದುಕೊಂಡು ಹೋಗಲೆಂದು.

"ನಾನೂ ನಿಮಗಾಗಿ ದುಡಿಯುವೆನು" ಎಂದಳು ನಿಲೋನಾ.

ಹೊಸಬನ ಮನೆಯಲ್ಲಿ ನಿಲೋನಾ ಅಪರಿಚಿತಳಂತೆ ವರ್ತಿಸಲಿಲ್ಲ. ಆ ಮನೆ ಅವಳ ಮನೆಯಂತೆಯೇ ತೋರಿತು. ಎಲ್ಲರೂ ಆಕೆಯ ಬಂಧು ಗಳೇ. ಹಳ್ಳಿಯ ರೈತರಿಗಾಗಿ ಇಗರ್ ಪತ್ರಿಕೆ ತಯಾರಿಸಿದ. ಲುಡ್ಮಿಲಾ ಅವರ ಗುಪ್ತ ಮುದ್ರಣಾಲಯದ ಮೇಲ್ವಿಚಾರಿಕೆ. ಅವಳೇ ಮೊಳೆ ಜೋಡಿಸಿ, ಮುದ್ರಿಸಿ ಕೊಡುವವಳು.

ಸಣ್ಣ ಪ್ರಾಯದ ನಿಕೊಲೆಯ್ ಇವಾನೊವಿಶ್ ಸರಕಾರದ ಒಂದು ಉದ್ಯೋಗದಲ್ಲಿದ್ದ. ಪುಸ್ತಕಗಳು, ಸಂಗೀತ, ಶಾಂತ ವಾತಾವರಣ ಎಲ್ಲವೂ ಅವನ ಮೆಚ್ಚುಗೆಯ ವಸ್ತುಗಳು. ಆದರೆ ಏಕಧ್ಯೇಯದ ಸಾಧನೆಗಾಗಿ ಅವು ಗಳ ತ್ಯಾಗವನ್ನು ಅವನು ಮಾಡಬಲ್ಲ. ಸೋಫಿಯಾ ಅವನ ವಿಧವೆ ಅಕ್ಕ. ಗಂಡ, ಸೈಬೀರಿಯಕ್ಕೆ ಅಟ್ಟಲ್ಪಟ್ಟಿದ್ದವನು ತಪ್ಪಿಸಿಕೊಂಡು, ಕಾಹಿಲೆ ಬಿದ್ದು, ಎರಡು ವರ್ಷಗಳ ಹಿಂದೆ ತೀರಿಕೊಂಡಿದ್ದ.

"ಇವಳೂ ಆಂದೋಲನದಲ್ಲಿರುವಳೆ?" ಎಂದು ಕೇಳಿದಳು ನಿಲೋನಾ.

"ಸಂಪೂರ್ಣವಾಗಿ ಮುಳುಗಿದ್ದಾಳೆ— " ಎಂದು ನಿಕೊಲೆಯ್ ಇವಾನೊವಿಶ್ ಉತ್ತರವಿತ್ತ.

ದೂರವಲ್ಲಿದ್ದ ಆಕೆ ಮನೆಗೆ ಬಂದಳು. ಆಮೇಲೆ ಐವತ್ತು ಮೈಲು ದೂರದ ಗ್ರಾಮಕ್ಕೆ ತಾಯಿಯೊಡನೆ ಕ್ರಾಂತಿಸಾಹಿತ್ಯವನ್ನು ಹೊತ್ತುಕೊಂಡು ಅವಳು ಹೊರಟಳು.

ನಡೆಯುತ್ತಲಿದ್ದಾಗ "ನಿನಗೆ ದಣಿವಾಗುವುದಿಲ್ಲವೆ?" ಎಂದು ತಾಯಿ ಕೇಳಿದಳು.

"ಈತನಕ ನಾನು ಹೆಚ್ಚಾಗಿ ನಡೆದೇ ಇಲ್ಲವೆಂದು ಭಾವಿಸಿದೆಯಾ? ನನಗೆ ಇದೆಲ್ಲ ಹಳೆಯ ಕಥೆ."

ಮುಗುಳ್ನಗುತ್ತ ತನ್ನ ಬಾಲ್ಯದ ಮಕ್ಕಳಾಟಗಳನ್ನು ವಿವರಿಸುವಂತೆ ಸೋಫಿಯಾ ತನ್ನ ಕ್ರಾಂತಿಯ ಕೆಲಸವನ್ನು ತಾಯಿಗೆ ಹೇಳತೊಡಗಿದಳು. ಅವಳು ಎಷ್ಟೋ ವೇಳೆ ಸುಳ್ಳುಹೆಸರನ್ನಿರಿಸಿಕೊಂಡು ಜೀವಿಸುತ್ತಿದ್ದಳು. ಕಳ್ಳ ದಾಖಲೆಯನ್ನು ಉಪಯೋಗಿಸುತ್ತಿದ್ದಳು. ಗುಪ್ತಚಾರರ ಕಣ್ಣು ತಪ್ಪಿಸಲು ಹಲವಿಧ ವೇಷ ಪಲ್ಲಟಮಾಡುತ್ತಿದ್ದಳು. ನೂರಾರು ಮಣ ಭಾರದ ಅಕ್ರಮ ಪುಸ್ತಕಗಳನ್ನು ಹಲವಾರು ನಗರಗಳಿಗೆ ಒಯ್ಯುತ್ತಿದ್ದಳು. ಗಡೀಪಾರಾಗಿದ್ದ ಸಂಗಾತಿಗಳಿಗೆ ತಪ್ಪಿಸಿಕೊಳ್ಳಲು ಎಡೆಮಾಡಿ, ಅವರನ್ನು ವಿದೇಶಗಳಿಗೆ ಸುರಕ್ಷಿತವಾಗಿ ಒಯ್ಯುತ್ತಿದ್ದಳು. ಅವಳ ವಸತಿಯಲ್ಲೊಂದು ಮುದ್ರಣ ಯಂತ್ರವಿತ್ತು. ಪೋಲೀಸ್-ಸಿಪಾಯಿಗಳು ಶೋಧನೆಗೆ ಬಂದರೆಂದು ತಿಳಿದಾಗ ಒಂದು ನಿಮಿಷದಲ್ಲಿ, ತೊತ್ತಿನ ಮಗಳಂತೆ ಬಟ್ಟೆ ಹಾಕಿ, ಅತಿಥಿಗಳು ಒಳಬರುತ್ತಿದ್ದಂತೆಯೇ ಆಕೆ ಹೊರಹೋದಳು ಹೆಬ್ಬಾಗಿಲಿನ ಬಳಿ ಅವರನ್ನು ಆಕೆ ಸಂಧಿಸಿದಳು. ಮೈಗೆ ಮೇಲುಹೊದಿಕೆಯಿಲ್ಲದೆ, ತಲೆಯ ಮೇಲೊಂದು ಬಟ್ಟೆ ಹಾಕಿ, ಕೈಯಲ್ಲೊಂದು ಚಿಮಣಿ ಎಣ್ಣೆಯ ಡಬ್ಬಿಯನ್ನು ಹಿಡಿದುಕೊಂಡು ಆ ಚಳಿಯಲ್ಲಿ ಇಡೀ ನಗರ ಸುತ್ತಾಡಿದಳು.

ಇನ್ನೊಮ್ಮೆ ಕೆಲವು ಸಂಗಾತಿಗಳನ್ನು ಕಾಣುವದಕ್ಕಾಗಿ ಒಂದು ಅಪರಿಚಿತ ನಗರಕ್ಕೆ ಅವಳು ಬಂದಿದ್ದಳು. ಅವರ ಕೋಣೆಗಳಿಗೆ ಹೋಗುವ ಮೆಟ್ಟಿಲುಗಳನ್ನೇರುತ್ತಿದ್ದಾಗ, ಮೇಲೆ ಶೋಧನೆ ನಡೆಯುತ್ತಿದ್ದುದನ್ನು ಅವಳು ಕಂಡಳು. ಒಂದರೆಕ್ಷಣವೂ ಅಳುಕದೆ ಆಕೆ ಕೆಳಗಿನ ಒಂದು ಕೋಣೆಯ ಗಂಟೆಯನ್ನು ಬಾರಿಸಿ ತನ್ನ ಬ್ಯಾಗಿನೊಡನೆ ನೆಟ್ಟಗೆ ಅಪರಿಚಿತ ಜನರೆಡೆಗೆ ಹೋದಳು.

“ಬೇಕಿದ್ದರೆ ನೀವು ನನ್ನನ್ನು ಸಿಪಾಯಿಗಳಿಗೆ ಒಪ್ಪಿಸಬಹುದು ; ಆದರೆ ಹಾಗೆ ಮಾಡುವಿರೆಂದು ನಾನು ನಂಬುವುದಿಲ್ಲ’’ ಎಂದಾಕೆ ಧೈರ್ಯದಿಂದ ಹೇಳಿದಳು. ಜನರು ಭೀತರಾದರು. ಆ ರಾತ್ರಿ – ಅವರು ನಿದ್ರಿಸಲಿಲ್ಲ. ಆದರೆ ಸೋಫಿಯಳನ್ನು ಪೋಲೀಸರಿಗೆ ಒಪ್ಪಿಸಲಿಲ್ಲ.

ತಾಯಿ ಮಾತನಾಡುತ್ತಾ ಮಾತನಾಡುತ್ತಾ, “ಸೋಫಿಯಾ, ನಿಮ್ಮ ಕಷ್ಟಗಳಿಗೆಲ್ಲ ಪ್ರತಿಫಲ ಯಾರು ಕೊಡುವರು ?” ಎಂದಳು.

ಸೋಫಿಯಾ ಹೆಮ್ಮೆಯಿಂದ ತಾಯಿಯ ಮಾತಿಗೆ ಉತ್ತರಿಸಿದಳು: "ನಮಗೆ ಪ್ರತಿಯೊಂದಕ್ಕೂ ಇದಿಷ್ಟರಲ್ಲೇ ಪ್ರತಿಫಲ ಸಿಕ್ಕಿದೆ. ನಮಗೆ ತೃಪ್ತಿ ಕೊಡುವ ಒಂದು ಜೀವನವನ್ನು ನಾವು ಅನುಭವಿಸುತ್ತಿದ್ದೇವೆ. ವಿಶಾಲವಾಗಿ, ಪೂರ್ಣವಾಗಿ, ಆತ್ಮಪ್ರೇರಿತವಾಗಿ ನಾವು ಜೀವಿಸುತ್ತಿದ್ದೇವೆ. ಇದಕ್ಕಿಂತ ಹೆಚ್ಚಿನದೇನು ಬೇಕು?"

ಹಾದಿ ನಡೆಯುತ್ತ ಸೋಫಿಯಾ ಆಕಾಶದ-ಪ್ರೇಮದ ಕುರಿತಾದ ಹೊಸ, ತಾಯಿಗರಿಯದ ಹಾಡುಗಳನ್ನು ಹಾಡುವಳು; ಇಲ್ಲವೆ ಒಮ್ಮೊಮ್ಮೆ ಗದ್ದೆ-ಕಾಡುಗಳ, ಓಲ್ಗಾ ನದಿಯ ಕುರಿತಾದ ಗೀತಗಳನ್ನು ಹಾಡುವಳು.

ಹೀಗೆ ಅವರು ರೈತಬಂಧುಗಳಲ್ಲಿಗೆ ನಡೆದು ಹೋದರು.

....ತಾಯಿಯ ಜೀವನ ಬಲು ಸರಳವಾಗಿ ಸಾಗಿತು. ಆ ಶಾಂತತೆಯನ್ನು ಕಂಡು ಒಮ್ಮೊಮ್ಮೆ ಅವಳಿಗೇ ಆಶ್ಚರ್ಯವಾಗುತ್ತಿತ್ತು.

ಪಾವೆಲ್ ಜೈಲಿನಲ್ಲಿದ್ದ. ವಿಚಾರಣೆಗೆ ಆರಂಭವಾಗಲೇ ಇಲ್ಲ. ತಾಯಿ ಮಗನನ್ನು ಕಾಣಹೋಗುವ ದಿನವೆಲ್ಲ ಶಶಾಂಕ ತಾಯಿಯ ಬಳಿ ಬರುವಳು. ಆ ಹುಡುಗಿ ಪಾಶನಿಗಾಗಿ ಕೊರಗುತ್ತಿದ್ದುದು ತಾಯಿಗೆ ತಿಳಿದಿತ್ತು, "ಏಕೆ ಮುದ್ದು ....! ನನಗೆ ಗೊತ್ತಿದೆ.... ಪಾಶಾನನ್ನು ನೀನು ಪ್ರೀತಿಸುತ್ತಿರುವೆಯೆಂದು ನನಗೆ ಗೊತ್ತಿದೆ..." ಎಂದು ಹೇಳಬೇಕೆನ್ನಿಸುವುದು ಅವಳಿಗೆ. ಆದರೆ ಹುಡುಗಿಯ ಗಂಭೀರ ಮುಖ-ವ್ಯಾವಹಾರಿಕ ವರ್ತನೆ ಅನುಭಾವಗಳ ಪ್ರದರ್ಶನಕ್ಕೆ ಎಡೆಕೊಡುತ್ತಿರಲಿಲ್ಲ.

ಜನರ ಬಡತನ-ಸಂಕಷ್ಟಗಳನ್ನು ನೆನೆಯುತ್ತ ತಾಯಿ ಒಮ್ಮೊಮ್ಮೆ ಕ್ರೈಸ್ತನ ಕಡೆಗೆ ಮನಸ್ಸನ್ನು ಹರಿಯಬಿಡುವಳು. ಯೇಸುವಿನ ಭಾವಚಿತ್ರ, ಕಥೆಗಳಿಂದ ಅವನು ಬಡವರ ಮಿತ್ರನೆಂದು ನಿಲೋವ್ನಾ ತಿಳಿದಿದ್ದಳು. ಆದರೆ "ಹಾದಿ ತೋರಿಸು" ಎಂದು ಬೇಡಿಕೊಂಡು ದರಿದ್ರರು ಬರುತ್ತಿದ್ದ ಇಗರ್ಜಿಗಳಲ್ಲಿ ಚಿನ್ನದ ಮೊಳೆಗಳಿಂದ ಕ್ರೈಸ್ತನನ್ನು ಕ್ರೂಜೆಗೆ ಹೊಡೆದಿದ್ದರು. ಸಿಲ್ಕ್-ರೇಶ್ಮೆಗಳನ್ನು ಬಡತನದ ಮುಖಕ್ಕೆ ಎಸೆಯುತ್ತಿದ್ದುದನ್ನು ತಾಯಿ ಕಂಡಳು.

ತನಗರಿಯದಂತೆಯೇ ತಾಯಿ ಪ್ರಾರ್ಥಿಸುವುದನ್ನು ಕಡಿಮೆಮಾಡಿದಳು ಆದರೆ ಕ್ರೈಸ್ತನ ತತ್ವಗಳನ್ನು ಅಕ್ಷರಶಃ ಪ್ರತಿಪಾದಿಸ ಹೊರಟಿದ್ದ ತನ್ನ ಜನ

ರನ್ನು ಕುರಿತು - ಮತ್ತು ಆ ದೇವರನ್ನು ಕುರಿತು ಆಕೆ ಹೆಚ್ಚುಹೆಚ್ಚಾಗಿ ಚಿಂತನೆ ಮಾಡತೊಡಗಿದಳು.

ಈ ಮಧ್ಯೆ ಇಗರ್ ಹಾಸಿಗೆ ಹಿಡಿದ. ದೀರ್ಘಶ್ರಮ, ನಿರಂತರ ದುಡಿತ- ಆ ಕಡುಗಲಿಯನ್ನು ಬಲಿ ತೆಗೆದುಕೊಂಡಿತು. ನಗುನಗುತ್ತ, ಕೊನೆಯ ತನಕವೂ ನಗೆಯ ಮಾತುಗಳನ್ನಾಡುತ್ತ ಅವನು ತೀರಿಕೊಂಡ. "ಸಾವು ಬಲು ಸಾವಕಾಶವಾಗಿ, ಬೇಕೋ ಬೇಡವೋ ಎಂಬಂತೆ ಅರೆಮನಸ್ಸಿನಿಂದ ಬರುತ್ತಿದೆ. ನನಗಾಗಿ ಯಹು ಸ್ವಲ್ಪ ದುಃಖಿಸುತ್ತಿರುವಂತೆ ಕಾಣುತ್ತದೆ. ನಾನೆಷ್ಟು ಒಳ್ಳೆಯ - ಮೆಚ್ಚುಗೆಯ ಆಸಾಮಿಯಾಗಿದ್ದೆ !" ಎಂದು ಇಗರ್ ಕೊನೆಯ ಗಳಿಗೆಯಲ್ಲಿ ತಾಯಿಯೊಡನೆ ಹೇಳುತ್ತಿದ್ದ.

ಸ್ಮಶಾನ ಭೂಮಿಯಲ್ಲಿ ಗೊಂದಲವಾಯಿತು.

ಪೋಲೀಸ್ ಅಧಿಕಾರಿಗಳು ಭಾಷಣಕ್ಕೆ ಸಮ್ಮತಿಸವೆಂದರು.

"ನಾನು ಸ್ವಲ್ಪವೇ ಮಾತುಗಳನ್ನಾಡುವೆ" ಎಂದನೊಬ್ಬ ಯುವಕ, "ಸಂಗಾತಿಗಳೆ ! ನಮ್ಮ ಗುರುವಿನ - ಗೆಳೆಯನ ಗೋರಿಯ ಬಳಿ ನಿಂತು, ಅವನ ಆಶಯವನ್ನು ಎಂದೆಂದಿಗೂ ಮರೆಯದಿರಲು ನಾವು ಪ್ರತಿಜ್ಞೆ ಮಾಡೋಣ ! ನಮ್ಮ ದೇಶದ ದೌರ್ಭಾಗ್ಯಕ್ಕೆ ಮೂಲಕಾರಣವಾದ, ದೇಶ ವನ್ನು ಮರ್ದಿಸುತ್ತಿರುವ ದುಷ್ಟಶಕ್ತಿಯಾದ, ಏಕಸತ್ತೆಯ ಗೋರಿಯನ್ನು ತಡೆ ಯಿಲ್ಲದೆ ನಾವು ಅಗೆಯುತ್ತಿರೋಣ !''

ಅವನ ಬಂಧನವಾಯಿತು. ಸ್ವಲ್ಪ ಕಾಲ ಸ್ಮಶಾನಭೂಮಿ ಸಮರಭೂಮಿ ಯಾಯಿತು.

ಗಾಯಗೊಂಡಿದ್ದ ಒಬ್ಬ ಹುಡುಗನನ್ನೆತ್ತಿಕೊಂಡು ತಾಯಿ ಮನೆಗೆ ಧಾವಿಸಿದಳು. ಟಾಂಗಾದಲ್ಲಿಯೂ ಹುಡುಗ ಗೊಣಗುಟ್ಟುತ್ತಾ ಪೋಲೀಸ್ ರವರನ್ನು ಬಯ್ಯುತ್ತಿದ್ದ.

ಟಾಂಗಾ ಹೊಡೆಯುತ್ತಿದ್ದವನು ಮುಖ ತಿರುಗಿಸಿ, "ಹುಡುಗ ಕುಡಿಯು ತ್ತಿದ್ದನೆ ?" ಎಂದು ಕೇಳಿದ.

''ಹೌದು, ಚೆನ್ನಾಗಿ — ''

''ನಿನ್ನ ಮಗನೊ ?''

"ಹೌದು ಒಬ್ಬ ಸಮಗಾರ (Shoe maker) — ನಾನು ಅಡುಗೆಯವಳು."

ಟಾಂಗಾದವನು "ಸ್ಮಶಾನದಲ್ಲಿ ಗಲಭೆಯಾಯಿತಂತೆ" ಎಂದು ಹೇಳಿ, ತಾನು ಕೇಳಿದ್ದುದನ್ನೆಲ್ಲ ಇಳಿ ಧ್ವನಿಯಲ್ಲಿ ವಿವರಿಸಿದ. ಕೊನೆಗೆ ಬದಲಿಸಿದ್ದ ಧ್ವನಿಯಲ್ಲಿ "ಸತ್ತವರನ್ನು ಇವರು ಸುಮ್ಮನಿರಬಿಡುವುದಿಲ್ಲ. ಗೋರಿಯಲ್ಲೂ ಜನರನ್ನು ಇವರು ಕೆಣಕುತ್ತಾರೆ" ಎಂದ.

'ಜನರೆಲ್ಲ ಉದ್ವಿಗ್ನರಾಗುತ್ತಿದ್ದಾರೆ' ಎಂದು ತಾಯಿ ಭಾವಿಸಿದಳು!

ಪಾವೆಲ್ ಜೈಲಿನಿಂದ ತಪ್ಪಿಸಿಕೊಳ್ಳುವುದಕ್ಕೆ ಸಮ್ಮತಿಸಲಿಲ್ಲ. ವಿಚಾರಣೆಯಾಗಬೇಕು; ನ್ಯಾಯಾಧೀಶರನ್ನೆದುರಿಸಬೇಕು - ಎಂಬುದು ಅವನ ನಿರ್ಧಾರವಾಗಿತ್ತು. ತಾಯಿ ಪಾಶಾನ ಕುರಿತು ಯೋಚಿಸುವಳು ಮಗನು ಎಷ್ಟು ಕಾಲ ಹೀಗೆಯೇ ಸೆರೆಮನೆಯಲ್ಲಿರುವುದು?

ತಾಯಿಯನ್ನು ಸಂಗಾತಿಗಳೆಲ್ಲರೂ ಗೌರವದಿಂದ ಕಾಣುತ್ತಿದ್ದರು. ಯಾವುದಾದರೂ ಕೆಲಸವಾಗಬೇಕಾಗಿದ್ದರೆ "ಇದನ್ನು ಮಾಡುವಿರಾ? ಕಷ್ಟವಿದೆ. ಮಾಡುವುದು ಸಾಧ್ಯವೆ?" ಎಂದು ಕೇಳುತ್ತಿದ್ದರು. ತಾಯಿಗೆ ಇದರಿಂದ ದುಃಖವಾಗುತ್ತಿತ್ತು. ಇತರರಿಗೆಲ್ಲ ಹೇಳುವಂತೆ ಯಾರೂ ನಿರ್ದಾಕ್ಷಿಣ್ಯವಾಗಿ, 'ಹಾಗೆ ಮಾಡು - ಹೀಗೆ ಮಾಡು' ಎಂದು ಅಧಿಕಾರವಾಣಿಯಲ್ಲಿ ಹೇಳುತ್ತಿರಲಿಲ್ಲ. ಇದರಿಂದ ತಾಯಿ ನೊಂದುಕೊಳ್ಳುವಳು.

ಕೊನೆಗೊಂದು ದಿನ ಪಾವೆಲ್ ಮತ್ತು ಸಂಗಡಿಗರ ವಿಚಾರಣೆಗೆ ಆರಂಭವಾಯಿತು. ಶಿಕ್ಷೆ ಏನೆಂಬುದು ಮೊದಲೇ ತೀರ್ಮಾನವಾಗಿತ್ತಂತೆ. ಆದರೂ ವಿಚಾರಣೆ!

ನ್ಯಾಯಾಧೀಶರ ಮುಂದೆ ಪ್ರಸ್ತಾವನೆಕೊಡುತ್ತ ಸ್ಪಷ್ಟ ವಾಕ್ಯಗಳಲ್ಲಿ ಪಾವೆಲ್ ಹೇಳಿದ: "ಇಲ್ಲಿ ಯಾರೂ ಕೊಲೆಪಾತಕಿಗಳಿಲ್ಲ; ನ್ಯಾಯಾಧೀಶರೂ ಇಲ್ಲ. ಇಲ್ಲಿರುವುದು ಸೆರೆಯಾಳುಗಳು ಮತ್ತು ಸೆರೆಹಿಡಿದವರು ಮಾತ್ರ!"

ಪಾವೆಲ್ ಅಲ್ಲಿ ಮಾಡಿದ ಭಾಷಣ ಉಜ್ವಲವಾಗಿತ್ತು – ಉಗ್ರವಾಗಿತ್ತು.

ಎಲ್ಲರಿಗೂ ಗಡೀಪಾರು ಶಿಕ್ಷೆ ವಿಧಿಸಲ್ಪಟ್ಟಿತು.

ನಿಕೊಲೈಯ್ ಇವಾನೊವಿಚನ್ನು ಬಂಧಿಸಲು ಪೋಲೀಸರ ಸಿದ್ಧತೆ ನಡೆ

ದಿತ್ತು. ಇವಾನೊವಿಶ್ ಪಾವೆಲಿನ ಭಾಷಣ ಅಚ್ಚಾಗಲೇ ಬೇಕು ಎಂದು, ತಾಯಿಯನ್ನು ಉಡ್ಮಿಲಾಳಲ್ಲಿಗೆ ಕಳುಹಿದ. ಉಡ್ಮಿಲಾ ಮೊದಮೊದಲು ಹೆಚ್ಚಿನ ಆಸಕ್ತಿ ಇಲ್ಲದೆ ಆ ಭಾಷಣವನ್ನು ಓದಿದಳು; ಮತ್ತೆ ಬೇಗ ಬೇಗನೆ ಪುಟಗಳನ್ನು ತಿರುವುತ್ತ ಅದರಲ್ಲೆ ತಲ್ಲೀನಳಾದಳು. ಓದಿದ ಬಳಿಕ ಅವಳು ಹೇಳಿದಳು: "ಇದು ಚೆನ್ನಾಗಿದೆ. ನಾನು ಇಚ್ಛಿಸುವುದು ಇಂತಹದನ್ನೇ. ಇಲ್ಲಿಯೂ ಶಾಂತತೆ ಇದೆ ನಿಜ. ಆದರೂ ಈ ಭಾಷಣ, ಭೇರಿಯ ಸ್ಪಷ್ಟ ನಾದ; ಭೇರಿಯನ್ನು ಹೊಡೆಯುತ್ತಿರುವವನು ನುರಿತ-ಶಕ್ತಿವಂತ ಭೇರಿಗಾರ."

"ನಿದ್ದೆಯಿಂದ ಎಬ್ಬಿಸಬೇಕು; ಮುದ್ರಣಕಾರ್ಯದಲ್ಲಿ ನೆರವಾಗುವೆ" ಎಂದು ಹೇಳಿ ನಿಲೋನಾ ನಿದ್ದೆ ಹೋದಳು.

ಆದರೆ ತಾಯಿ ಎಚ್ಚೆತ್ತುದು ಮರುದಿನವೇ.

"ಏಕೆ ಎಬ್ಬಿಸಲಿಲ್ಲ?" ಎಂದಾಗ, ಎಬ್ಬಿಸಬೇಕೆಂದಿದ್ದೆ ... ನಿನ್ನ ಬಳಿಗೆ ಬಂದೆ .. ಆದರೆ ನೀನು ಗಾಢನಿದ್ರೆಯಲ್ಲಿದ್ದೆ; ಮುಗುಳ್ನಗುತ್ತಿದ್ದೆ" ಎಂದು ಉಡ್ಮಿಲಾ ಉತ್ತರವಿತ್ತಳು.

ನಿಲೋನಾ ಸ್ವಪ್ನ ಕಾಣುತ್ತಿದ್ದವರಂತೆ ಕುಳಿತು, "ನಿನ್ನದು ಬಲು ಕಷ್ಟದ ಜೀವನ, ಅಲ್ಲವೆ?" ಎಂದು ಕೇಳಿದಳು.

"ನಿಜಕ್ಕೂ! ಕಷ್ಟವಲ್ಲದೆ ಮತ್ತೇನು?—" ಎಂದಳು ಉಡ್ಮಿಲಾ.

ದೀರ್ಘಕಾಲ ಅವರು ಪರಸ್ಪರ ಮಾತನಾಡಿದರು. ಮುದ್ರಿತವಾಗಿದ ಪಾವೆಲಿನ ಭಾಷಣದ ಪ್ರತಿಗಳನ್ನು ಸ್ವಲ್ಪ ದೂರದಲ್ಲಿದ್ದ ನಟಾಶಳಿಗೆ ಒಯ್ದು ಕೊಡುವ ಕೆಲಸವಿತ್ತು. "ನಾನು ಮಾಡುವೆನದನ್ನು" ಎಂದು ತಾಯಿ ಹಟ ಹಿಡಿದಳು. "ಅಪಾಯ ಸಂಭವನೀಯ - ಬೇಡ" ಎಂದರು ಸಂಗಾತಿಗಳು. ತಾಯಿ ಒಪ್ಪಲಿಲ್ಲ.

.... ಉಡ್ಮಿಲಾ ತಾಯಿಯ ಬಳಿಗೆ ಬಂದಳು. "ನೀನು ಪುಣ್ಯವಂತೆ ...." ಎಂದಳು.

ಮತ್ತೆ ಮುಂದುವರಿಸಿದಳು: "ನನಗೂ ಒಬ್ಬ ಮಗನಿದ್ದಾನೆ. ಅವನಿಗೆ ಹದಿಮೂರು ವರ್ಷ ಪ್ರಾಯ. ಆದರೆ ಅವನು ತಂದೆಯೊಡನೆ ಜೀವಿಸು

ತ್ತಾನೆ. ನನ್ನ ಗಂಡ ಸಹಾಯಕ ಪ್ರಾಸಿಕ್ಯೂಟಿಂಗ್ ಇನ್ಸ್‌ಪೆಕ್ಟರರು. ಇಷ್ಟ ರಲ್ಲೇ ಪ್ರಾಸಿಕ್ಯೂಟಿಂಗ್ ಇನ್ಸ್‌ಪೆಕ್ಟರರಾಗಿರಲೂ ಬಹುದು. ಹುಡುಗ ಅವನ ಬಳಿಯಿದ್ದಾನೆ. ಅವನೇನಾಗುವ? ಎಂದು ಹಲವೊಮ್ಮೆ ಯೋಚಿಸುವೆ ನನ್ನ ಸಮೀಪವಿರುವ, ನಾನು ಪ್ರೀತಿಸುವ, ಜಗತ್ತಿನ ಮೇಲಣ ಉತ್ತಮ ಮಂದಿಯೆಂದು ನಾನು ಗಣಿಸುವ ನನ್ನ ಜನರನ್ನು ಮನಸಾರೆ ದ್ವೇಷಿಸುವ ವೈರಿಯೊಬ್ಬ ಆ ಮಗನನ್ನು ಬೆಳೆಸುತ್ತಿದ್ದಾನೆ; ಒಂದು ವೇಳೆ ಹುಡುಗನೂ ನನ್ನ ವೈರಿಯಾಗಲೂ ಬಹುದು. ಅವನು ನನ್ನ ಜತೆಯಲ್ಲಿ ಜೀವಿಸಲಾರ. ನಾನು ಇರುವುದೂ ಬೇರೆ ಹೆಸರನ್ನಿಟ್ಟುಕೊಂಡು. ಕಳೆದ ಎಂಟು ವರ್ಷ ಗಳಿಂದ ನಾನು ಅವನನ್ನು ಕಂಡಿಲ್ಲ. ಎಂಟು ವರ್ಷವೆಂದರೆ ದೀರ್ಘ ಸಮಯ ವಾಯಿತು.''

ಕಿಟಕಿಯ ಬಳಿ ನಿಂತು, ಮ್ಲಾನವಾಗಿದ್ದ ಆಕಾಶವನ್ನು ದಿಟ್ಟಿಸಿ ಆವಳು ಹೇಳಿದಳು: ''ಅವನು ನನ್ನ ಬಳಿ ಇರುತಿದ್ದರೆ ನಾನು ಇನ್ನೂ ಬಲಶಾಲಿ ಯಾಗುತ್ತಿದ್ದೆ. ಯಾವಾಗಲೂ ನೋಯುವ ಈ ಗಾಯ ನನ್ನೆದೆಯಲ್ಲಿ ಇರು ತ್ತಿರಲಿಲ್ಲ. ಅವನು ಒಂದು ವೇಳೆ ಸತ್ತಿದ್ದರೂ ನನಗೆ ಇಷ್ಟು ಕಷ್ಟವಾಗು ವಾಗುತ್ತಿದ್ದಿಲ್ಲ .ಆಗ ಅವನು ಸತ್ತಿದ್ದಾನೆ ಎಂಬುದಷ್ಟೆ ಗೊತ್ತಾಗುತ್ತಿತ್ತು. ತಾಯಿಯ ಅನುಭಾವಕ್ಕಿಂತ ಹಿರಿದಾದ, ಜೀವನಕ್ಕಿಂತ ಹೆಚ್ಚು ಅನರ್ಘ್ಯವೂ ಅಗತ್ಯವೂ ಆದ ನನ್ನ ಧ್ಯೇಯಕ್ಕೆ ಅವನು ವಿರೋಧಿಯಲ್ಲವೆಂಬುದು ನನಗೆ ತೃಪ್ತಿಕೊಡುತ್ತಿತ್ತು.''

''ನನ್ನ ಮುದ್ದೂ'' ಎಂದಳು ತಾಯಿ ಶಾಂತವಾಗಿ; ಏನೋ ಅವಳೆದೆ ಯನ್ನು ಸುಡುತ್ತಿತ್ತು.

''ನೀನು ಸುಖಿಯಾಗಿರುವೆ'', ಎಂದು ಉದ್ಗರಿಸಿ ಮುಗುಳ್ನಕ್ಕು ಹೇಳಿ ದಳು ''ಮಗನೂ ತಾಯಿಯೂ ಜತೆಯಾಗಿ ಸಾಗುವುದು ಅತ್ಯಾನಂದಕರ ವಾದುದು; ಅಪೂರ್ವವಾದುದು.''

ತಾಯಿ ನಿಲೋನಾ ಹಳದಿ ಬಣ್ಣದೊಂದು ಪಾತ್ರೆಯೊಡನೆ ರೈಲು ನಿಲ್ದಾಣಕ್ಕೆ ಹೊರಟಳು. ಮಗನ ಬಂಡಾಯದ ದುಂದುಭಿ ಮುದ್ರಿತವಾಗಿ, ಸಾವಿರಾರು ಪ್ರತಿಗಳು ಆ ಪಾತ್ರೆಯಲ್ಲಿದ್ದುವು. ಗುಪ್ತಚಾರರು ಹಿಂಬಾಲಿಸಿ ದರು; ಪೋಲೀಸರು ಬೆಂಬತ್ತಿದರು. ''ಕಳ್ಳ ಹೆಂಗಸು! ಕದ್ದೊಯ್ಯು

ತ್ತಿದ್ದಾಳೆ" ಎಂದು ಸ್ಟೇಷನ್ ಪೋಲೀಸನೊಬ್ಬ ಆರೋಪ ಹೊರಿಸಿ ಗಲಭೆ ಮಾಡಿದ. ಆ ತನಕ ಸ್ವಲ್ಪ ನಡುಗುತ್ತ, "ಅವರು ನನ್ನನ್ನು ಹೊಡೆಯದಿರುತ್ತಿದ್ದರೆ, ಹೊಡೆಯದಿರುತ್ತಿದ್ದರೆ— " ಎನ್ನುತ್ತಿದ್ದ ತಾಯಿ ಉರಿದುಬಿದ್ದಳು. ಆಕೆಯ ನಡುಕ ನಿಂತಿತು. ಭೀತಿ ತೊಲಗಿತು.

"ನಾನು ಕಳ್ಳ ಹೆಂಗಸಲ್ಲ! ನೀನಾಡುತ್ತಿರುವದು ಸುಳ್ಳು!" ಎಂದು ಸಾಧ್ಯವಿದ್ದಷ್ಟು ಗಟ್ಟಿಯಾಗಿ ಆಕೆ ಕೂಗಿ ಹೇಳಿದಳು. ಅವಳ ಎದುರಲ್ಲಿದ್ದುದೆಲ್ಲವೂ ಬಂಡಾಯದ ಸುಳಿಗಾಳಿಯಲ್ಲಿ ಸಿಲುಕಿ ಮೇಲಕ್ಕೇಳುತ್ತಿದ್ದಂತೆ ಭಾಸವಾಯಿತು. ಆ ಕಟು ಅವಮಾನ ಆಕೆಯ ಹೃದಯವನ್ನು ಕಟುಗೊಳಿಸಿತು. ಆಕೆ ಪಾತ್ರೆಯ ಮುಚ್ಚಳವನ್ನು ತೆರೆದಳು. ಭಾಷಣದ ಪ್ರತಿಗಳ ಕಟ್ಟುಗಳನ್ನು ಮೇಲಕ್ಕೆತ್ತಿ "ನೋಡಿ! ನೋಡಿ! ಜನರೆಲ್ಲ ಇವನ್ನು ನೋಡಿ!" ಎಂದಳು. ಮೂಲೆ ಮೂಲೆಗಳಿಂದ ಜನರು ಧಾವಿಸಿ ಬಂದರು.

ಅವಳು ಮತ್ತೂ ಕಟ್ಟುಗಳನ್ನೆತ್ತಿ ಗಾಳಿಯಲ್ಲಿ ಹಾರಿಸಿದಳು :

"ದಾರಿದ್ರ್ಯ, ಉಪವಾಸ, ರೋಗರುಜೆ; ದುಡಿತವು ಜನರಿಗೆ ಕೊಡುತ್ತಿರುವುದು ಇದನ್ನೇ. ಈ ಸ್ಥಿತಿಗತಿ ಕದಿಯುವುದಕ್ಕೆ, ಮೋಸಮಾಡುವುದಕ್ಕೆ, ನಮ್ಮನ್ನು ಮುನ್ನೂಕುತ್ತದೆ; ನಮ್ಮ ಮೇಲೆ, ತೃಪ್ತರಾಗಿ-ಶಾಂತರಾಗಿ ಧನಿಕರು ಜೀವಿಸುತ್ತಾರೆ. ನಾವು ವಿಧೇಯರಾಗಿರುವಂತೆ ನೋಡುವುದಕ್ಕಾಗಿ ಪೋಲೀಸರನ್ನು ಅಧಿಕಾರಿಗಳನ್ನು ಸೈನಿಕರನ್ನು ಅವರು ತಮ್ಮ ವಶ ಇರಿಸಿಕೊಂಡಿದ್ದಾರೆ. ಎಲ್ಲರೂ ನಮಗೆ ಎದುರಾಗಿದ್ದಾರೆ; ಪ್ರತಿಯೊಂದೂ ನಮ್ಮನ್ನು ಎದುರಿಸುತ್ತಿದೆ ದಿನ ಬಿಡದೆ ದಿನ ದುಡಿಯುತ್ತ ನಮ್ಮ ಜೀವಗಳನ್ನೆಲ್ಲ ಕಲ್ಮಷ-ವಂಚನೆಯಲ್ಲಿ ನಶಿಸುತ್ತಿದ್ದೇವೆ .. ನಮಗೇನೂ ತಿಳಿಯದು. ಬರೀ ಭೀತಿಯಿಂದಲೇ ನಾವು ಎಲ್ಲಕ್ಕೂ ಹೆದರುತ್ತೇವೆ. ನಮ್ಮ ಜೀವನವು ಅಂಧಕಾರವಾಗಿದೆ; ಗಾಢಾಂಧಕಾರವಾಗಿದೆ. ಅದೊಂದು ಭಯಂಕರ ಸ್ವಪ್ನ. ವಿಷ ಕೊಟ್ಟು ನಮ್ಮನ್ನವರು ಕೊಲ್ಲುತ್ತಿದ್ದಾರೆ .... ... ನಮ್ಮ ರಕ್ತವನ್ನು ಅವರು ಕುಡಿಯುತ್ತಿದ್ದಾರೆ. ಹೊಟ್ಟೆ ಬಿರಿಯುವಷ್ಟು, ವಾಂತಿಯಾಗುವಷ್ಟು ಅತ್ಯಾಶೆಯ ಸೈತಾನನ ಈ ಭಕ್ತರು ತಿಂದು ತೇಗುತ್ತಿದ್ದಾರೆ... ಅದು ನಿಜವಲ್ಲವೆ ?"

"ನಿಜ....ನಿಜ" ಎಂದಿತೊಂದು ಸ್ವರ ನಿಧಾನವಾಗಿ.

ಜನರ ಗುಂಪಿನ ಹಿಂದೆ ಗುಪ್ತಚಾರನೂ ಇಬ್ಬರು ಸಿಪಾಯರೂ ಬರುತ್ತಿದ್ದುದನ್ನು ತಾಯಿ ಕಂಡಳು. ಕೊನೆಯ ಕಟ್ಟುಗಳನ್ನು ಆಕೆ ಅವಸರವಸರವಾಗಿ ತೆಗೆದುಕೊಟ್ಟಳು.

"ಬೆಂಚಿನ ಮೇಲೇರಿಕೊ" ಎಂದರು ಜನರು.

"ಸದ್ಯವೇ ನನ್ನನ್ನು ಬಂಧಿಸುವರು. ಮೇಲೆ ಹತ್ತುವುದು ಅಗತ್ಯವಿಲ್ಲ."

"ಬೇಗನೆ ಮಾತನಾಡು....ಅವರು ಬರುತ್ತಿದ್ದಾರೆ."

ಪೋಲೀಸರು ಜನರನ್ನು ಹಿಂದೆ ತಳ್ಳಲು ಯತ್ನಿಸಿದರು. ಆದರೆ ಜನರ ಒತ್ತಡದಿಂದ ಅವರೇ ಹಿಂದೆ ಸರಿಯಬೇಕಾಯಿತು. ತಾಯಿ ಗಟ್ಟಿಯಾಗಿ ಹೇಳತೊಡಗಿದಳು :

"ಜನರೆ! ನಿಮ್ಮೆಲ್ಲ ಶಕ್ತಿಯನ್ನು ಒಟ್ಟುಗೂಡಿಸಿ ಒಂದು ಮಹಾಶಕ್ತಿಯನ್ನು ಉಂಟುಮಾಡಿರಿ."

ದೊಡ್ಡ ಪೋಲೀಸನೊಬ್ಬ ಅವಳ ಉಡುಗೆಯನ್ನು ಕೊರಳಿನ ಬಳಿ ಹಿಡಿದು, ಆಕೆಯನ್ನು ಅಲುಗಾಡಿಸಿದ.

"ಸುಮ್ಮನಿರು !"

ಕೊರಳು ಗೋಡೆಗೆ ತಾಕಿತು. ಕ್ಷಣಕಾಲ ಭೀತಿಯ ಹೊಗೆ ಹೃದಯವನ್ನು ಮುಚ್ಚಿತು. ಮತ್ತೆ ಒಡನೆಯೇ ಎಲ್ಲವೂ ಶುಭ್ರವಾಗಿ ಜ್ವಾಲೆ ಉರಿಯಿತು.

ಗುಪ್ತಚಾರನು ಓಡಿ ಬಂದು, ಅವಳ ಮುಖದೆದುರು ತನ್ನ ಮುಷ್ಟಿಯೆತ್ತಿ ಕೂಗಿದನು :

"ಮುಚ್ಚುಬಾಯಿ, ಮುದಿಗೂಬೆ !"

ಅವಳ ಕಣ್ಣುಗಳು ಅರಳಿದುವು, ಕಿಡಿ ಕಾರಿದುವು ; ಗಲ್ಲಗಳು ಅಲುಗಾಡಿದುವು. ನೆಲದ ಜಾರುತ್ತಿದ್ದ ಕಲ್ಲುಗಳ ಮೇಲೆ ಕಾಲುಗಳನ್ನು ಬಲವಾಗಿ ಇರಿಸುತ್ತ, ತನ್ನಲ್ಲುಳಿದಿದ್ದ ಕೊನೆಯ ಅಲ್ಪಸ್ವಲ್ಪ ಶಕ್ತಿಯನ್ನು ಒಂದುಗೂಡಿಸುತ್ತ ಆಕೆ ಕೂಗಿದಳು.

"ಚೇತನಗೊಂಡ ಆತ್ಮವನ್ನು ಅವರು ಕೊಲ್ಲಲಾರರು— "

ಗುಪ್ತಚಾರನು ಅವಳ ಮುಖಕ್ಕೆ ಗುದ್ದಿದ.

ಏನೋ ಕಪ್ಪು–ಕೆಂಪು ಒಂದರೆನಿಮಿಷ ಅವಳ ಕಣ್ಣುಗಳನ್ನು ಆವರಿಸಿತು. ಉಪ್ಪುಪ್ಪಾಗಿ ರಕ್ತದ ರುಚಿ ಆಕೆಯ ಬಾಯಿಯನ್ನು ತುಂಬಿತು.

ಹೊಡೆಯುತ್ತ ಅವರು ಅವಳನ್ನು ಎಳೆದುಕೊಂಡು ಹೋದರು. ಆಗಲೂ ಕೊನೆಯ ಬಾರಿಯೂ ಆಕೆ ಜನರಿಗೆ ಕರೆದು ಹೇಳುತ್ತಿದ್ದಳು: "ರಕ್ತದ ಸಮುದ್ರಗಳಲ್ಲಿ ಸತ್ಯವನ್ನು ನೀವು ಮುಳುಗಿಸಲಾರಿರಿ —"

ಯಾರೋ ಆಕೆಯ ಕೊರಳನ್ನು ಹಿಡಿದು, ಅದುಮತೊಡಗಿದರು. ಗಂಟಲಿನಲ್ಲಿ ಶ್ವಾಸ ತೊನೆದಾಡಿತು; ಸದ್ದಾಯಿತು.

"ಏ ಪಾಪದ ಬಡಪಾಯಿಗಳೇ —"

* * * *

## ವಿಮರ್ಶೆ

ಅವಳೊಬ್ಬಳು ಮುಗ್ಧ ವೃದ್ಧೆ. ಈ ಕತೆ ಆಕೆಗೆ ಸಂಬಂಧಿಸಿದೆ. ಕ್ರಾಂತಿಯ ಕಿಡಿ ಅವಳನ್ನು ಸಮೀಪಿಸಿದಾಗ ವಯಸ್ಸಿನಲ್ಲಿ ಆಕೆ ಹಿರಿಯಳು. ಆ ರಾತ್ರಿಯವರೆಗೆ ಆಗಿನ ಸಮಾಜ ಪದ್ಧತಿಯಿಂದ ಮರ್ದಿಸಲ್ಪಡುತ್ತಿದ್ದ ನೂರಾರು ಮಿಲಿಯ ಮೂಕ ಜಂತುಗಳಲ್ಲಿ ಆಕೆಯೂ ಒಬ್ಬಳು. ಕುಡುಕ ಗಂಡನ ಕೈಯಲ್ಲಿ ಪೆಟ್ಟು ತಿನ್ನುವುದು ಅವಳ ವಿಧಿ. ಪ್ರತಿ ದಿನ ಮುಂಜಾನೆ ಎದ್ದು ಈ ದಿನ ಮುಷ್ಟಿಯ ಪ್ರಹಾರ ತಪ್ಪೀತೇ – ಎಂಬುದೇ ಆಕೆ ತೋರಿಸುವ ಆಸೆ; ಪ್ರಾಣಿ ಜೀವನವನ್ನು ಅಂತೂ ಇಂತೂ ಸಾಗಿಸುವುದು ಮಾತ್ರ ಅವಳ ಏಕ ಯತ್ನ. ಆಕೆ ಗಾರ್ಕಿಯ ಲೇಖನಿಯಲ್ಲಿ ಮೂರ್ತಿಮತ್ತಾಗಿ ನಿಂತಿದ್ದಾಳೆ. ಬಂಡಾಯದ ಮೊದಲ ಮಾತು ಕೇಳಿದಾಗಲೆ ಆಕೆಗೆ ಗಾಬರಿ. ಏನು? ಜಾರ್‌ಚಕ್ರವರ್ತಿಗೆದುರಾಗಿಯೆ? ದೇವರಿಗೆದುರಾಗಿಯೆ?. ಮತ್ತೆ ನಿಧಾನವಾಗಿ ವಿಚಿತ್ರ, ಸುಂದರ, ಶೋಭಿತ ಕಲ್ಪನೆಯ ಎಡೆಗೆ ಆಕೆ ಸೆಳೆಯಲ್ಪಡುತ್ತಾಳೆ.... ಆ ಯತ್ನಕ್ಕಾಗಿ ಮಡಿಯುವ ಆಸ .ಬೆಳೆಯುತ್ತ ಹೋಗುತ್ತದೆ ಆ ಆಸೆ.... ಜಗತ್ತಿನಲ್ಲಿ ತನಗೆ ಅತ್ಯಂತ ಪ್ರಿಯವಾದ ಮಗನನ್ನು ಆ ಧ್ಯೇಯಕ್ಕಾಗಿ ಆಕೆ ತ್ಯಾಗ ಮಾಡುತ್ತಾಳೆ. ಕೃಶಳಾಗಿ ಬಡಕಲಾಗುತ್ತಿದ್ದಾಳೆ ಮುದುಕಿ. ದುಷ್ಟರಥದ ಕ್ರೂರಗಾಲಿಗಳು ಆಕೆಯ ಮೇಲೆ ಓಡುತ್ತವೆ, ಉರುಳುತ್ತವೆ; ಮಹಾ

ಸ್ವಾತಂತ್ರ್ಯದ ಘೋಷಣೆ ಮಾಡುತ್ತಾಳೆ. ಕೊನೆಯ ಘೋಷಣೆ—!"

ರಷ್ಯನ್ ಭಾಷೆಯಲ್ಲಿದ್ದ ಮೂಲ ಗ್ರಂಥವಾದ 'ಮದರ'ನ್ನು ಭಾಷಾಂತರಿಸಿದ ಚಾರ್ಲ್ಸ್ ಎಡ್ವರ್ಡ್ ರಸ್ಸೆಲರು ತಮ್ಮ ಸುಂದರ ಮುನ್ನುಡಿಯಲ್ಲಿ ಹಾಗೆ ಬರೆದಿದ್ದಾರೆ.

ಘಂಟಾಘೋಷವಾಗಿ ಕೇಳಿಬರುತ್ತಿರುವ ಮಿಲಿಯ ಮಂದಿ ದಲಿತರ ಕೂಗು. ಗಾರ್ಕಿಯ ರುದ್ರವೀಣೆ ಅದನ್ನು ನುಡಿಸುತ್ತಿದೆ. ಪರಮಾವಧಿಯ ಶೋಷಣೆ-ದಬ್ಬಾಳಿಕೆಗಳ ಫಲವಾಗಿ ನೆಲಸಮವಾಗಿ ಮತ್ತೆ ಹೊರಳಿ, ರೊಚ್ಚಿಗೇಳುತ್ತಿರುವ ತಪ್ತ ಸಮಾಜದ ಭಯಂಕರ ಚಿತ್ರ. ಗಾರ್ಕಿಯ ಶಕ್ತಿಪೂರ್ಣ ಕುಂಚ ಸ್ಪಷ್ಟ ಗೆರೆಗಳಿಂದ ಬಣ್ಣಗಳಿಂದ ಅದನ್ನು ಬಿಡಿಸಿದೆ. ರಷ್ಯದ ಎಚ್ಚೆತ್ತ ಜನವಿಭಾಗಕ್ಕೆ ಗಾರ್ಕಿಯ ತಾಯಿ ಒಂದು ನಿಲುವುಗನ್ನಡಿ. ಅದರಲ್ಲ ಕಾಣುತ್ತಿರುವುದು ಕ್ರೂರ ವಾಸ್ತವಿಕತೆ, ಕಲ್ಪನೆಯಲ್ಲ; ಅದು ಕಟ್ಟುಕತೆಯಲ್ಲ. ಎದುರು ಬಂದು ಅಳುವ, ನಗುವ, ಅರಚುವ, ಪರಚುವ ಅಸಹ್ಯವೇದನೆಯಲ್ಲೂ ಅಳುಕದೆ ಸಿಂಹನಾದ ಮಾಡುವ ಸಾವಿರ-ಸಾವಿರ ಗಂಡುಹೆಣ್ಣುಗಳ ಸ್ವೈಜ ಚಿತ್ರ. ಪ್ರತಿಯೊಂದನ್ನು ಕೊಚ್ಚಿಕೊಂಡು ಅನಿವಾರ್ಯ ಗುರಿಯತ್ತ ಸಾಗುವ ಮಹಾಪ್ರವಾಹ. ಅದರ ಭೋರ್ಗರೆಯುವಿಕೆ, ಜತೆಯಲ್ಲೆ ಕಿಲಕಿಲ ನಿನಾದ; ಜೀವನವನ್ನು ಮಿಾಸಲಿಟ್ಟು, ಧ್ಯೇಯಸಾಧನೆಗಾಗಿ ಅನನ್ಯ ಮನಸ್ಸಿನಿಂದ ದುಡಿಯುವ ಮಂದಿ - ಅವರ ಅಳುನಗು, ಸುಖದುಃಖ ಎಲ್ಲವೂ ಪ್ರತಿಬಿಂಬಿತವಾಗಿವೆ ಗಾರ್ಕಿಯ "ತಾಯಿ"ಯಲ್ಲಿ.

ಬೊಲ್ಷೆವಿಕ್ ತತ್ವದ ಪ್ರಚಾರಕ್ಕಾಗಿ ಸಾಮ್ಯವಾದವನ್ನು ಪ್ರಚುರಗೊಳಿಸುವುದಕ್ಕಾಗಿ ಮ್ಯಾಕ್ಸಿಂ ಗಾರ್ಕಿ "ಮದರ"ನ್ನು ಬರೆಯಲಿಲ್ಲ. ಅವನ್ನು ಬರೆದಾಗಲಿನ್ನು ರಷ್ಯದ ರಾಜ್ಯಕ್ರಾಂತಿ ಆಗಿರಲಿಲ್ಲ. ಮಹಾಪಡೆಯೇನೋ ಸನ್ನದ್ಧವಾಗುತ್ತಲಿತ್ತು, ಅಷ್ಟೆ.

ಗಾರ್ಕಿಯೂ ಆ ಪಡೆಯ ಒಬ್ಬ ಧೀರ ಯೋಧ. ಜನರ ಜೀವನದಲ್ಲಿ-ದಲಿತರ ಸಂಕಟದಲ್ಲಿ - ಒಂದಾಗಿ ಬೆರೆತು, ಆಗ ಇದ್ದ ಕ್ರೂರ ಸಮಾಜ ಘಟನೆಯನ್ನು ಬುಡಮೇಲಾಗಿಸಲು ದುಡಿದ ಶಕ್ತಿವಂತ ಮಂದಿಯಲ್ಲಿ ಅವನೂ ಒಬ್ಬ. ರಷ್ಯದ ಬೊಲ್ಷೆವಿಕ್ ಕ್ರಾಂತಿಯ ಸನ್ನದ್ಧತೆಯೇ ಈ ಕಥಾವಸ್ತು. ಅದರ ಮೇಲೆ ಕೈಯಾಡಿಸಿದವನೂ ಒಬ್ಬ ಕ್ರಾಂತಿಯೋಧನೇ.

೧೯೦೭ರಲ್ಲಿ ಲೆನಿನ್ ಲಂಡನಿನಲ್ಲಿ ಗಾರ್ಕಿಯನ್ನು ಕಂಡ. "ನೋಡಪ್ಪ, ಆ ಕಾದಂಬರಿ ಬೇಗನೆ ಮುಗಿಸು. ಕ್ರಾಂತಿಯ ಈ ಆಂದೋಲನದಲ್ಲಿ ತಿಳಿವಳಿಕೆ ಇಲ್ಲದೆ ಧುಮುಕಿ, ಹುಚ್ಚಾಬಟ್ಟೆ ಮಾಡುವ ಎಷ್ಟೋ ಮಂದಿಗೆ ಅದರಿಂದ ಪ್ರಯೋಜನವಾದೀತು" ಎಂದ.

೧೯೦೫ರ ಕ್ರಾಂತಿ ವಿಫಲವಾದ ಕಾಲ. ರಷ್ಯದ ವಾಮಪಕ್ಷೀಯರ ಚಟುವಟಿಕೆಗಳು ಗುಪ್ತವಾಗಿ ನಡೆಯುತ್ತಿದ್ದುವು. ನೆರವು ಕೊಡಲು ಹಣ ಬೇಕಾಗಿತ್ತು. ಗಾರ್ಕಿ ಅದನ್ನು ಸಂಗ್ರಹಿಸುವ ಭಾರಹೊತ್ತು ಹೊರದೇಶಗಳಿಗೆ - ಅಮೆರಿಕಕ್ಕೆ ಹೋದ. ಆದರೆ ರಷ್ಯದ ಘಟನೆಗಳನ್ನು ಸರ್ವಸಾಮಾನ್ಯವೆಂದು ಕಡೆಗಣಿಸಿದವರೇ ಅಲ್ಲಿ ಅವನಿಗೆ ಸಿಕ್ಕಿದುದು. ಗಾರ್ಕಿಯ ಮಾತಿನಲ್ಲೇ ಹೇಳುವುದಾದರೆ, "ಹೇಗೋ ಮಾಡಿ ೧೦,೦೦೦ ಡಾಲರು ಸಂಗ್ರಹಿಸಿದೆ. ಪತ್ರಿಕೆಗಳಲ್ಲಿ ಬರೆದಾದರೂ, ಲೇಖನಗಳಿಂದ ಹಣ ಸಂಪಾದಿಸಿಯಾದರೂ, ಸ್ವಲ್ಪ ಹಣ ಮಾಡಬೇಕೆಂದಿದ್ದೆ. ಅವಕ್ಕೂ ಅಡ್ಡಗಾಲಿಕ್ಕುವ ಜನರಿದ್ದರು. ಅಮೆರಿಕದ ಪ್ರವಾಸ ಏನೇನೂ ಫಲಕಾರಿಯಾಗದೆ ಅವಸಾನಗೊಂಡಿತು. ಅದೇ ಸಮಯದಲ್ಲಿ ನಾನು 'ಮದರ್'ನ ಅಧ್ಯಾಯಗಳನ್ನು ಬರೆಯುತ್ತಿದ್ದೆ...."

ಅಷ್ಟೇ ಅಲ್ಲ; ವಿದೇಶದಲ್ಲಿದ್ದ ಗಾರ್ಕಿಗೆ ಅಶುಭವಾರ್ತೆ ರಷ್ಯದಿಂದ ಬರುತ್ತಲೇ ಇತ್ತು. ಕ್ರಾಂತಿಯ ರುಚಿ ನೋಡಿ ನಾಲಿಗೆ-ಕೈ ಸುಟ್ಟುಕೊಂಡಿದ್ದವರು ಧಾವಿಸಿ ಬಂದು ಗಾರ್ಕಿಯೊಡನೆ ದೂರು ಹೇಳಿದರು. "ನಮ್ಮನ್ನು ಹುರಿದುಂಬಿಸಿ ಅಲ್ಲಿ ಕಷ್ಟದಲ್ಲಿ ಅದ್ದಿ ಈಗ ತಪ್ಪಿಸಿಕೊಂಡಿರುವೆಯಲ್ಲ?" ಎಂದು ಹೀನ ನುಡಿಗಳನ್ನಾಡಿದರು.

ಅವರ ಕೂಗು ಒಂದೇ: "ಸರ್ವನಾಶವಾಯಿತು; ನಮ್ಮನ್ನವರು ನೆಲಸಮ ಮಾಡಿದ್ದಾರೆ, ಧ್ವಂಸಗೊಳಿಸಿದ್ದಾರ; ಆಂದೋಲನದಲ್ಲಿದ್ದ ಪ್ರತಿಯೊಬ್ಬನಿಗೂ ಬಂಧನವಾಗಿದೆ, ಗಡೀಪಾರಾಗಿದೆ!" ಮರುಕದಿಂದ ಗಾರ್ಕಿ ಆ ಮಾತುಗಳಿಗೆ ಕಿವಿಕೊಟ್ಟಿರಬೇಕು. ಆಗ ಅವನ ಮನೋಸ್ಥಿತಿ ಹೇಗಿದ್ದಿತೆಂಬುದನ್ನು ಊಹಿಸುವುದು ಸುಲಭ. ಅಂತಹ ಪರಿಸ್ಥಿತಿಯಲ್ಲೆ "ತಾಯಿ" ರೂಪುಗೊಂಡುದು. "ಮದರಿನಲ್ಲಿರುವ ತಪ್ಪು - ದೋಷಗಳಿಗೆಲ್ಲ ಒಂದು ವೇಳೆ ಆಗಿನ ನನ್ನ ಮಾನಸಿಕ ಪರಿಸ್ಥಿತಿಯೇ ಕಾರಣವಿರಬಹುದು" ಎಂದು

ಗಾರ್ಕಿಯೇ ಒಪ್ಪಿದ್ದಾನೆ. ಆದರೆ ಓದುವವರಿಗೆ ಪುಸ್ತಕದಲ್ಲಿ ಮೊದಲು ಕಾಣುವುದು ದೋಷಗಳಲ್ಲ. ಪುಸ್ತಕದ ಪರಿಪೂರ್ಣತೆ – ತನ್ನ ಪ್ರೀತಿಯ ಜನತೆಯನ್ನು ಆಳವಾಗಿ ಅಭ್ಯಸಿಸಿ ಆ ಪುತಾತ್ಮ ಲೋಕದ ಮುಂದಿರಿಸಿದ ಅಖಂಡ ಕಾವ್ಯ.

ಗಾರ್ಕಿಗೆ ಹೆಚ್ಚಿನ ವಿಶ್ವಾಸವಿದ್ದುದು ನಗರದ ಕಾರ್ಮಿಕರ ಮೇಲೆ; ಹಳ್ಳಿಯ ಕೃಷಿಕರ ಶಕ್ತಿಯಲ್ಲಿ ಅಲ್ಲ. ಗಾರ್ಕಿಯ ದೃಷ್ಟಿಯಲ್ಲಿ ಕಾರ್ಮಿಕನೇ ಮುಖ್ಯ. ಅಂತೆಯೇ "ತಾಯಿ"ಯಲ್ಲಿ ಅವನಿಗೇ ಹೆಚ್ಚು ಪ್ರಾಧಾನ್ಯ. ಹಳ್ಳಿಗಾಡಿನ ಜನರಿದ್ದಾರೆ. ಆದರೆ ಅವರ ಅಪನಂಬಿಕೆ, ಅಶ್ರದ್ಧೆ, ಅವಿಶ್ವಾಸಗಳನ್ನು ಕಂಡು ಗಾರ್ಕಿಗೆ ತಾಳ್ಮೆಯಿಲ್ಲ; ಸೈರಣೆ ಇಲ್ಲ. ಹಾಗಾಗಿ "ತಾಯಿ" ಯಲ್ಲಿ ಅವರಿಗೆ ಸಮಾನ ಸ್ಥಾನವಿಲ್ಲ ಪುಸ್ತಕ ಬರೆದ ಹತ್ತು ವರ್ಷಗಳ ಅನಂತರ ಕ್ರಾಂತಿಯಾದ ಬಳಿಕ ಕೂಡಾ ಗಾರ್ಕಿಯ ಆ ಭಾವನೆ ಬೆಳೆಯುತ್ತ ಬಂದಿತೆಂಬುದನ್ನು, ಲೆನಿನನ ಕೃಷಿಕ - ಕಾರ್ಮಿಕ ತಳಹದಿಯನ್ನು ಅವನು ಸ್ವಲ್ಪಕಾಲ ವಿರೋಧಿಸಿದನೆಂಬುದನ್ನು ಸ್ಮರಿಸುವಾಗ "ತಾಯಿ"ಯಲ್ಲಿ ಬರುವ ಚಿತ್ರಗಳನ್ನು ಕುರಿತು ಅವನು ತೋರಿಸಿದ ಪಕ್ಷಪಾತ ಬುದ್ಧಿ ಸ್ಪಷ್ಟವಾಗುವುದು.

ಇಂದಿನ ರಷ್ಯವನ್ನು ತಿಳಿದುಕೊಳ್ಳಬೇಕಾದರೆ ಹಿಂದಿನದನ್ನು ಅಭ್ಯಾಸಿಸುವ ಅವಶ್ಯಕತೆ ಇದೆ. ಆದರೆ "ತಾಯಿ" ಕಾದಂಬರಿಯನ್ನೋದಿದ ಮೇಲೆ, ಅನುವಾದಕರು ಹೇಳುವಂತೆ, "ನಮಗೆ ಬೋಲ್ಶೆವಿಸಂ ಆಶ್ಚರ್ಯದ ವಸ್ತುವಾಗುವುದಿಲ್ಲ. ಅಂತಹ ಕ್ರೂರ ಮರ್ದನದ ಫಲವಾಗಿ ಪ್ರತಿಕ್ರಿಯೆ ಇನ್ನಷ್ಟು ಕೆಡಲಿಲ್ಲವೆಂಬುದೇ ಆಶ್ಚರ್ಯದ ವಿಚಾರ."

ಒಮ್ಮೆ ಶೃಂಖಲೆಯನ್ನು ಕಡಿದೊಗೆದು, ಸ್ವತಂತ್ರರಾಗಿ ತಲೆಯೆತ್ತಿ, ಸರ್ವಸಮಾನತೆಯಿಂದಿರತೊಡಗಿ, ವಿಶ್ವಬಂಧುತ್ವದ ಮಾತನ್ನಾಡುತ್ತಿರುವ, ಈ ಜನತೆ ಇದೀಗ ಲೋಕದಲ್ಲಿ ದೃಷ್ಟಿಯನ್ನು ತನ್ನೆಡೆಗೆ ಸೆಳೆದಿರುವುದರಲ್ಲಿ, ಎಲ್ಲರ ಆದರ ಮನ್ನಣೆಗಳಿಗೆ ಪಾತ್ರವಾಗಿರುವುದರಲ್ಲಿ ಆಶ್ಚರ್ಯವೇನು ?

ಈ ಜಗತ್ತಿನ ಅಳಿವು, ಉಳಿವು - ನಾಗರಿಕತೆ ಅವಲಂಬಿಸಿರುವುದು ಸೋವಿಯೆಟ್ ರಷ್ಯವನ್ನು. ಇಂತಹ ನಾಡಿನ ನಿರ್ಮಾಣಕ್ಕೆ ಕಾರಣರಾದವರನ್ನೇ ಗಾರ್ಕಿ ಚಿತ್ರಿಸಿರುವುದು.

ಸೋವಿಯೆಟ್ ರಷ್ಯದಿಂದ ನಾವು ಕಲಿಯತಕ್ಕ ಪಾಠಗಳು ನೂರಾರು ಅಂತಹ ನಾಡನ್ನು ಸೃಷ್ಟಿಸಿದ ಕಲಾಕುಶಲರಿಂದ - ವೀರಯೋಧರಿಂದ ನಾವು ಕಲಿಯತಕ್ಕ ಪಾಠಗಳೂ ಅಷ್ಟೇ ಇವೆ ಎಂದು "ತಾಯಿ" ಸಾರಿ ಹೇಳುತ್ತಿದ್ದಾಳೆ.

''ತಾಯಿ'' ಅಪೂರ್ಣವಾಗಿದ್ದಾಗಲೆ ೧೯೦೭ರಲ್ಲಿ ಲೆನಿನ್ ''ನೋಡು, ಇದೀಗ ಈ ಸಮಯಕ್ಕೆ ಬೇಕಾದ ಗ್ರಂಥ'' ಎಂದ ಗಾರ್ಕಿಯೊಡನೆ. ಮಹಾ ಲೆನಿನನ್ನು ನಾವು ನಿಶ್ಶಂಕೆಯಿಂದ ತಿದ್ದಬಹುದು. "ಅಲ್ಲ; ಚಿರಕಾಲ ಬಾಳುವ ಅಮರಕೃತಿ ಇದು. ಎಷ್ಟರ ತನಕ ಈ ಜಗತ್ತಿನಲ್ಲಿ ಅಸಮಾನತೆ—ಶೋಷಣೆ ಕೊನೆಗೊಳ್ಳುವುದಿಲ್ಲವೋ, ಎಷ್ಟರ ತನಕ ದಲಿತರ ಹೋರಾಟ ನಡೆಯುವುದೋ, ಅಲ್ಲಿನವರೆಗೆ ಅಂತಿಮಸಮರಕ್ಕೆ ಅಣಿಯಾಗುತ್ತಿರುವ ವೀರಯೋಧರು ಓದಿ ಸ್ಫೂರ್ತಿಗೊಳ್ಳುವ, ಸ್ಮರಿಸಿ ಬಾಹುಸ್ಫುರಣ ಮಾಡುವ ಮಹಾ ಕೃತಿ ಇದು. ಸರ್ವಶಾಂತಿ ನೆಲೆಸಿದಾಗಲೂ, 'ಹಿಂದೆ ಇಂತಹ ಲೋಕವೂ ಇತ್ತು ಅಲ್ಲವೆ?' ಎಂದು ಜನರು ಓದಿ ಸೋಜಿಗಪಡುವ, ಮತ್ತೆ ಮಮತೆಯಿಂದ ಗೌರವಿಸುವ ದಿವ್ಯಕೃತಿ ಇದು."

# ಫ್ರೋಮಾ ಗಾರ್ಡೀಫ್ *

ಎಸ್. ಅನಂತನಾರಾಯಣ

ಮನುಷ್ಯನ ಸುಖದುಃಖಗಳು ಅವನಿಗೂ ಅವನ ಕ್ರಿಯೆಗೂ ಇರುವ ಸಂಬಂಧವನ್ನು ಅನುಸರಿಸಿವೆ ಎಂಬುದನ್ನು ಗಾರ್ಕಿಯು ಈ ಕಾದಂಬರಿಯಲ್ಲಿ ಚಿತ್ರಿಸಿದ್ದಾರೆ. ಮನುಷ್ಯನಿಗೆ ಜೀವನದಲ್ಲಿ ಅತೃಪ್ತಿ ಮೂಡಿದರಷ್ಟೇ ಸಾಲದು. ಆ ಅತೃಪ್ತಿಯನ್ನು ಮೂಲದವರೆಗೆ ಹಿಂಬಾಲಿಸಿ ಅರಿತುಕೊಂಡು ತುಂಬಿ ಕೊಳ್ಳಲು ಪ್ರಯತ್ನಿಸಬೇಕು. ಕವಿ, ಕ್ರಾಂತಿಕಾರಿ, ಕಲೆಗಾರ ಎಲ್ಲರೂ ಅತೃಪ್ತಿಯ ಕೂಸುಗಳೇ. ಆದರೆ ಆ ಅತೃಪ್ತಿಯ ಮೂಲವನ್ನು, ಅರ್ಥ ವನ್ನು ತಿಳಿದುಕೊಳ್ಳದೆ ಬೆಂದು ಅವನತಿಯ ಹಾದಿ ಹಿಡಿಯುವವರೇ ಬಲು ಮಂದಿ. ಆ ಅತೃಪ್ತಿಯಿಂದಲೇ ಒಂದು ಧ್ಯೇಯ ಹುಟ್ಟಿಕೊಂಡು ಆ ಧ್ಯೇಯ ಸಾಧನೆಗಾಗಿ ಹೆಣಗಿದರೆ ಮಾತ್ರ ಜೀವನ ಸಫಲವಾದೀತು. ಇದಕ್ಕೆ ವಿರುದ್ಧ ವಾಗಿ ನಡೆದು ಅವನತಿ ಹೊಂದಿದ ವ್ಯಕ್ತಿಯೆಂದರೆ ಫ್ರೋಮಾ. ಲಕ್ಷಾಧಿಪತಿ ಹಾರೈಸಿ ಹಾರೈಸಿ ಕೊನೆಗೆ ಹುಟ್ಟಿದ ಮಗ – ತಂದೆಯ ಕಣ್ಣಿನಲ್ಲಿ ಕಣ್ಣಾಗಿ ಬೆಳೆ ದವನು. ಬೇಕಾದುದನ್ನೆಲ್ಲ ಪಡೆದುಕೊಂಡವನು. ಎಳೆತನದಿಂದಲೇ ತನ್ನಿಷ್ಟ ಬಂದಂತೆ ನಡೆದವನು. ತಂದೆಯ ಎಲ್ಲಾ ಸ್ವತ್ತಿಗೂ ಅಧಿಕಾರಿಯಾಗಿ ಹಣವನ್ನು ನೀರಿನಂತೆ ಚೆಲ್ಲುವವನು. ತಂದೆಯಿಂದ ಚಂಚಲತೆಯನ್ನೂ ಹಣದೊಂದಿಗೆ ಬಳುವಳಿಯಾಗಿ ಪಡೆದವನು. ತಂದೆ ಆ ಚಂಚಲತೆಯನ್ನು ತನ್ನ ಹಿರಿಮೆಗೇ ಉಪಯೋಗಿಸಿಕೊಂಡಿದ್ದ. ಆದರೆ ಫ್ರೋಮನನ್ನು ಅದು ಕೆಡಿಸಿತು. ಎಳೆತನ ದಲ್ಲಿಯೇ ಒಬ್ಬರಾದ ಮೇಲೊಬ್ಬರಂತೆ ಮೂವರು ಸ್ತ್ರೀಯರನ್ನು—ಮೊದಲನೆ ಯವಳು ಭಿಕಾರಿಣಿ, ಅವನನ್ನು ನಿಜವಾಗಿ ಪ್ರೇಮಿಸಿದವಳು ; ಎರಡನೆಯವಳು ಸಮಾಜದ ಕಣ್ಣಿಗೆ ಮಣ್ಣೆರಚಿ ಸುಸಂಸ್ಕೃತಿಯ ಸೋಗಿನಲ್ಲಿ ಸೂಳೆಗಾರಿಕೆ ನಡೆಸುವ ಉಚ್ಚಕುಲದ ಹೆಣ್ಣು ; ಮೂರನೆಯವಳು ಹಣವಂತರ ಹೆಣ್ಣಾಗುವ ವಾರಾಂಗನೆ— ಈ ಮೂವರನ್ನೂ ಪ್ರೀತಿಸಿದವನು. ಹಳೆಯ ರೀತಿಯ ಹಳಿಯ ಮೇಲೆ ಹರಿಯುವ ಚಕ್ರ, ಒಂದೊಂದು ಬಾರಿ ಹೊಸ ರೀತಿಯನ್ನು ಹುಡುಕಿ

---

* Foma Gordyeeff.

ಎರಡೂ ಇಲ್ಲದೆ ಹಳಿಯಿಂದುರುಳಿ ನುಚ್ಚುನೂರಾಗುವಂತೆ, ತಾನೆಷ್ಟು ತಾನೇ ಹಣ ಚೆಲ್ಲಿ ದೈಹಿಕ ಸುಖಪಟ್ಟರೂ ಅದರಿಂದ ನಿಜವಾದ ಆನಂದ, ಮನ ಶ್ಯಾಂತಿ ದೊರಕಲಿಲ್ಲವಲ್ಲಾ ಎಂದು ತವಕಿಸುವನು. ಕೊನೆಗೆ ದಿಕ್ಕುಗಾಣ ದಂತಾಗಿ ಎಲ್ಲವನ್ನೂ ಹರಿದ ಕಾಗದದ ಚೂರನ್ನು ಎಲ್ಲ ಕಡೆಗೂ ತೂರಿಬಿಡು ವಂತೆ ಹಣವವನ್ನು ಚೆಲ್ಲುವನು. ಆದರೆ ಸುತ್ತಲಿನ ವ್ಯಾಪಾರಿಗಳ, ಶೋಷಕ ಸಮಾಜದ ಕ್ರೂರ ಕೈಗಳಿಗೆ ಬಿದ್ದು ಹುಚ್ಚನಾಗುವನು. ಇದು ಫೋಮನ ಜೀವನ.

ಹುಟ್ಟಿದುದು ಶೋಷಕವರ್ಗದ ವ್ಯಾಪಾರಿಯೊಬ್ಬನ ಮಗನಾಗಿ. ಬಾಯಲ್ಲಿ ಚಿನ್ನದ ಚಮಚವನ್ನಿಟ್ಟುಕೊಂಡೇ ಬೆಳೆದವನು, ತನ್ನ ತಂದೆಯು ಗೆಳೆಯ ಯಾಕೋವನ ಮನೆಯಲ್ಲಿ. ಆಗಿನಿಂದಲೇ ಆರಂಭ ಮುಂದೆ ತಾನು ಹೇಗಿರಬೇಕು, ಹಣ ಹೇಗೆ ಕೂಡಿಸಬೇಕು, ತನ್ನ ತಂದೆಯ ಆಸ್ತಿಯನ್ನು ಹೇಗೆ ಊರ್ಜಿತಗೊಳಿಸಿ ಹೆಚ್ಚಿಸಬೇಕು ಎಂದು. ಆದರೆ ಅದು ಅವನ ತಲೆಗೆ ಏಕೋ ಏನೋ ಹಿಡಿಯದು. ತಂದೆ ತನ್ನನ್ನು ನೋಡಿ ಮುದ್ದಾಡಲು ಬಂದಾಗ ಫೋಮ ಕೇಳುವ ಪ್ರಶ್ನೆ ಅರ್ಥಗರ್ಭಿತವಾಗಿದೆ.

ಫೋಮನಿಗೆ ಆಗಿನ್ನು ಎಂಟು ವರ್ಷ. ಬಹಳ ಕಾಲ ಯಾತ್ರೆಮಾಡಿ ತಂದೆ ಹಿಂದಿರುಗಿದ್ದಾನೆ. "ಅಪ್ಪ, ಇದುವರೆಗೂ ಎಲ್ಲಿದ್ದೆ ?" ಫೋಮನ ಪ್ರಶ್ನೆ.

"ಓಲ್ಗಾ ನದಿಯ ಮೇಲೆ"

"ಅಲ್ಲಿ ದರೋಡೆ ಮಾಡುತ್ತಿದ್ದೆಯಾ ?" ಫೋಮ ಮೃದುವಾಗಿ ಕೇಳಿದ.

"ಏ-ಏ-ಏ-ನು ?"

"ನೀನು ದರೋಡೆಗಾರನಲ್ಲವೇನಪ್ಪ ? ನನಗೆ ಗೊತ್ತು !" ಫೋಮ ತನ್ನ ತಂದೆಯ ಗುಟ್ಟೆಲ್ಲ ತನಗೆ ಸಂಪೂರ್ಣವಾಗಿ ತಿಳಿದಿದೆಯೆಂದುಕೊಂಡು ತನ್ನ ಬುದ್ಧಿಗೆ ತಾನೇ ಮೆಚ್ಚಿದಂತೆ ಕಣ್ಣು ಮಿಟುಕಿಸಿದ.

ಈ ಪುಟ್ಟ ದೃಶ್ಯದಲ್ಲಿ ಫೋಮನ ಎಳೆತನದ ಅರಿವು ನಮಗಾಗುವು ದಲ್ಲದೆ, ಮುಂದೆ ಇವನ ಜೀವನ ಸುಗಮವಾದೀತೇ, ಎನ್ನುವ ಶಂಕೆಯೂ ನಮ್ಮಲ್ಲಿ ಅಂಕುರಿಸುತ್ತದೆ.

ತಂದೆಗೆ ಒಂದೇ ಒಂದು ಧ್ಯೇಯವಿತ್ತು. ಅದು ಹಣ ಗಳಿಸುವುದು, ಹೇಗಾದರೂ ಸರಿ ಅವನು ಆ ಧ್ಯೇಯವನ್ನು, ಆ ಗುರಿಯನ್ನು ಸಾಧಿಸುತ್ತಿದ್ದ. ಗುರಿ ಸಾಧಿಸುವ ಮಾತೆತ್ತಿದಾಗ ಅದಕ್ಕಾಗಿ ಹೆಣಗುತ್ತಿದ್ದ. ಹೆಣಗಿ ಹಣ ಗಳಿಸಿದ. ಎಲ್ಲವೂ ಯಾರಿಗಾಗಿ? ತನ್ನೊಬ್ಬನೇ ಮಗನಾದ ಫೋಮನಿಗಾಗಿ.

ಯಾಕೋವ ಫೋಮನ ಸಾಕುತಂದೆ. ಪ್ರಚಂಡ ಪ್ರತಿಭಾವಂತ. ಅತಿ ಚತುರ-ಚಾಣಕ್ಯ. ವ್ಯಾಪಾರಿಗಳಲ್ಲಿ ಅವನೆಂದರೆ ಎಲ್ಲರಿಗೂ ಗೌರವ, ಭೀತಿ. ಅವನ ತಲೆಯಲ್ಲಿ ಯಾವಾಗ ಏನು ಸುಳಿಯುತ್ತದೆಯೋ ಯಾರಿಗೂ ಹೇಳಲು ಸಾಧ್ಯವಿಲ್ಲ ಆ ಪ್ರಚಂಡನ ಸಾಕುಮಗನಾಗಿ ಬೆಳೆದರೂ ಫೋಮ ಅವನ ಚುರುಕನ್ನಾಗಲೀ ಕಾರ್ಯಚಾತುರ್ಯವನ್ನಾಗಲೀ ಕಲಿಯಲಿಲ್ಲ. ಯಾಕೋವನಿಗೂ ಜೀವನದಲ್ಲಿ ಒಂದು ಗುರಿಯಿತ್ತು. ಅದು ಉಳಿದವರನ್ನು ಉರುಳಿಸಿ ತನ್ತನವನ್ನು ಬೆಳಗಿಕೊಳ್ಳುವುದು. ಕೀರ್ತಿಯ ಹುಚ್ಚು ಅವನ ಹಣದ ಹುಚ್ಚಿಗೆ ಕಡಿಮೆಯಾಗಿರಲಿಲ್ಲ. ಕೊನೆಗೂ ಅವನು ಆ ಊರಿನ ಪೌರ ಸಭಾಧ್ಯಕ್ಷನಾಗಿಯೇ ಆಗುತ್ತಾನೆ ತನ್ನ ಮಗಳನ್ನೂ ಫೋಮನನ್ನೂ ದಂಪತಿಗಳನ್ನಾಗಿ ಮಾಡಿ ತನ್ನ ಮತ್ತು ಫೋಮನ ಹಣದ ಗಂಟುಗಳನ್ನು ಒಂದುಗೂಡಿಸಬೇಕೆಂದು ಇಚ್ಛಿಸಿದವನು ಫೋಮನ ಅವನತಿ ಕಂಡೊಡನೆಯೇ ಮಗಳು ಲ್ಯೂಬೊವಳನ್ನು (Lubova) ಸ್ಮೋಲಿನ್ ಎಂಬ ವರ್ತಕನಿಗೆ ಕೊಟ್ಟು ಮದುವೆ ಮಾಡುತ್ತಾನೆ. ತಾನು ಫೋಮನ ಪೋಷಕನಾಗಿ ನಿಯಮಿತನಾದುದನ್ನು ಉಪಯೋಗಿಸಿಕೊಂಡು ಫೋಮನನ್ನು ಹುಚ್ಚಾಸ್ಪತ್ರೆಗೆ ಓಡಿಸುತ್ತಾನೆ. ಇಂತಹ ಮಹಾತಂತ್ರಿ ಯಾಕೋವ. ತನ್ನ ಮಗ ಟಾರಸನೂ ಹಣವಂತನಾದ ಮೇಲೆ ಅವನಿಗೆ ಮತ್ತೆ ಯಾವ ಅಭ್ಯಂತರವೂ ತೋರಲಿಲ್ಲ. ಅವನ ಅಭಿಪ್ರಾಯದಂತೆ "ಮನುಷ್ಯ ಒಂದು ಬಂಡವಾಲ - ರೂಬಲಿನಂತೆ" .... ನಾಣ್ಯ ಚಲಾವಣೆಯಾದಂತೆ ಬಡ್ಡಿಯನ್ನು ತೆತ್ತೇ ತೀರಬೇಕು. ಸಾಯುವಾಗ ಕೂಡ ಮಗ ಟಾರಸ್, ಮಗಳು ಲ್ಯೂಬೋವ ಮತ್ತು ಅಳಿಯ ಸ್ಮೊಲಿನ್ ಇವರಿಗೆ ಕೊಟ್ಟ ಅವನ ಉಪದೇಶಾಮೃತವೆಂದರೆ ಜೀವನದ ಮಹಾತಂತ್ರವನ್ನು ಹೇಗೆ ನಡೆಸಿಕೊಂಡು ಹೋಗಬೇಕೆಂದು. "ಸಿರಿವಂತರಾಗಿಯೇ ಬಾಳಿ, ಹೆಚ್ಚು ತಾತ್ವಿಕರಾಗದಿರಿ. ಪಾಪದಿಂದ ಹಿಂದೆಗೆಯುವನು ಪವಿತ್ರನಾಗಿರುವನೆಂಬುದನ್ನು ನಂಬಬೇಡಿ. ಹೇಡಿತನದಿಂದ ಪಾಪ

ದಿಂದ ಪಾರಾಗಲು ಸಾಧ್ಯವಿಲ್ಲ. ಗುರಿ ಮುಟ್ಟಲಿಚ್ಛಿಸುವವನು ಪಾಪಭೀರು ವಾಗಲೇ ಕೂಡದು.'' ಇದನ್ನೋದುತ್ತಾ ನಮಗೆ ಅವನ ಈ ಪ್ರಚಂಡಬುದ್ಧಿ ಶಕ್ತಿ, ಚಾಣಿಕ್ಯ ನೀತಿ, ಜೀವನದ ನೈಜ ಅರಿವು, ತಿಳಿವುಗಳು ಸ್ವಾರ್ಥ ಸಾಧನೆಯ ಸಂಕೋಚ ಧ್ಯೇಯಕ್ಕುಪಯೋಗಿತವಾಗುವ ಬದಲು ಜೀವನ ವನ್ನು ಎಲ್ಲರಿಗೂ ಸುಖಮಯವಾಗಿಸಲು ಉಪಯೋಗಮಾಡಿದ್ದರೆ ಒಳ್ಳೆತಾಗು ತ್ತಿತ್ತಲ್ಲಾ ಎನಿಸುವುದು.

ಯಾಕೋವನ ಮಗಳು ಲ್ಯೂಬೋವ ತಂದೆಗೆ ತಕ್ಕ ಮಗಳಲ್ಲ. ಯಾಕೋವನ ಚಾಣಿಕ್ಯಬುದ್ಧಿಯಾಗಲೀ ಅರಿವಾಗಲೀ ಆಕೆಗಿಲ್ಲ. ಏಕಾಂಗಿ ಯಾಗಿ, ಗಂಡನ ಜತೆಗಾಗಿ ಕಾದು ಕಾದು ಬೇಸರಿಸಿ ಪುಸ್ತಕ ಪ್ರಪಂಚದಲ್ಲಿ ಮಗ್ನಳಾದ ಹೆಣ್ಣು. ಎದೆಯ ಆ ಹಸಿವೆಯನ್ನು ಪುಸ್ತಕ ಪ್ರಪಂಚದ ಕನಸು ಮತ್ತೂ ತೀವ್ರಗೊಳಿಸುತ್ತವೆ ಬಿಳಿಯ ಬಟ್ಟೆಯ ಮೇಲಿನ ಒಂದೇ ಒಂದು ಕಪ್ಪುಚುಕ್ಕಿಯಾದರೂ ಎದ್ದು ತೋರುವಂತೆ, ಪುಸ್ತಕಗಳ ನೂರಾರು ತೃಪ್ತವಿಚಾರಗಳ ತಲೆಯಲ್ಲಿ ಅವಳ ಹೃದಯದ ಅತೃಪ್ತಿ ಎದ್ದು ತೋರುತ್ತದೆ. ಪ್ರೇಮದ ಕನಸು, ಸಮಾಜಸೇವೆಯ ಕನಸು, ಸಮಾನತೆಯ ಕನಸು, ಸುಖ ಜೀವನದ ಕನಸು—ಎಲ್ಲ ಕನಸುಗಳ ನಡುವೆ ಏಕಾಂಗಿತನದ ನನಸು ಹೆಚ್ಚು ಪ್ರಖರವಾಗಿ ಪ್ರಕಟವಾಗುತ್ತದೆ. ಆದರೆ ಅವಳು ಹೆಣ್ಣು - ಸ್ವಾತಂತ್ರ್ಯ ವಿಲ್ಲದವಳು. ತಂದೆಯನ್ನು ವಿರೋಧಿಸಲು ಧೈರ್ಯವಿಲ್ಲ. ಏನಾದರೂ ಅಂದರೆ ತಂದೆ ಅವಳನ್ನು ಗದರಿಕೊಂಡು ಬಿಡುವನು. ಮತ್ತೆ ಉಳಿದುದು ಆಕೆಗೆ ಪುಸ್ತಕಗಳು. ಪುಸ್ತಕಗಳಲ್ಲಿ ಬರುವ ವಿರುದ್ಧ ವಿಚಾರಗಳ ನಡುವೆ ಸಿಕ್ಕಿ ಸಂತಪ್ತಳಾಗುವಳು ಲ್ಯುಬೋವ. ಅವುಗಳನ್ನು ವಿವೇಚಿಸಿ ಅರ್ಥಮಾಡಿ ಕೊಳ್ಳದೆ ಅಲ್ಪಸ್ವಲ್ಪ ಅರಿತುಕೊಂಡು ಅದರಿಂದ ಆತ್ಮಕ್ಕೆ ಅಸಮಾಧಾನದ ವಿಷವನ್ನು ಊಡಿಸಿದಾಕೆ. ಪುಸ್ತಕ ಆಕೆಗೆ ಕುಡುಕನಿಗೆ ಮದ್ಯದಂತೆ. ಅದನ್ನು ಆಕೆಯೇ ಒಪ್ಪುತ್ತಾಳೆ. ಅವಳು ಈ ರೀತಿಯಾದರೆ ಅವಳ ಅಣ್ಣ ಟಾರಸ್ ಕಾರ್ಯದಲ್ಲಿ ತಂದೆಯನ್ನೇ ಹೋಲುವವನು. ಸೈಬೀರಿಯಾಕ್ಕೆ ಹೋಗಿ ಯಾದರೂ ಸಂಪಾದನೆ ಮಾಡಿಕೊಂಡು ಸಮಾಜದಲ್ಲಿ ಸ್ಥಾನಗಳಿಸಿಕೊಂಡ ವನು. ಅವನಿಗೆ ಕನಸುಗಳು ಯಾವುವೂ ಇಲ್ಲ. ಅದರಿಂದಲೇ ಸುಖವಾಗಿ ಹಣದಲ್ಲಿ ಕಾಲ ಕಳೆಯುವನು.

ಫೋಮ ಪುಸ್ತಕವನ್ನೇ ಮುಟ್ಟದವನು. ಜೀವನದಲ್ಲಿ ವಿವಿಧ ರೀತಿಯ ಬಾಳು ಕಂಡುಂಡು ಎಲ್ಲವನ್ನೂ ಪ್ರಶ್ನಿಸಿ ಅತೃಪ್ತಿಯ ಹೊಳೆಯಲ್ಲಿ ಮುಳುಗಿದವನು. ವ್ಯಾಪಾರಿಯ ಮಗನಾಗಿ ಹುಟ್ಟಿದರೂ ಕಾರ್ಯಕರ್ತನಾಗುವ ಸ್ಥೈರ್ಯ, ದೃಢತೆಯಿಲ್ಲದೆ ಆತ್ಮದ ಅನಂತಅತೃಪ್ತಿಯನ್ನು ಹೆಂಡ ಮತ್ತು ಹೆಣ್ಣುಗಳಿಂದ ತುಂಬಲು ಯತ್ನಿಸಿದ. ಹೆಂಡದ ಹುಚ್ಚುಹೊಳೆಯಲ್ಲಿ ಮುಳುಗಿದ. ತನ್ನ ಗೆಳೆಯ ಯೋಸೋವ್‌ನೊಂದಿಗೆ ಕೆಲಸಗಾರರ ಬಳಿಗೂ ನಡೆದ. ಅಲ್ಲಿ ಕೂಡ ಶಾಂತಿ ದೊರಕದು. ಒಂದೊಂದು ಬಾರಿ ಒಂದೊಂದು ರೀತಿಯ ಜೀವನವನ್ನು ಕಂಡಾಗಲೂ ಅವನಲ್ಲಿ ಒಂದೊಂದು ಪ್ರಶ್ನೆ ಏಳುತ್ತದೆ. ಆದರೆ ಅತಿ ಹಿರಿಯ ಪ್ರಶ್ನೆ - ಇದೆಲ್ಲಾ ಏಕೆ ? ಇದರಿಂದ ಉಪಕಾರವೇನು ? – ರೈತರನ್ನು ಕಂಡಾಗ ಇವರು ಬರಿಯ ಹುಳುಗಳು. ಅವರನ್ನು ತಿನ್ನುವ ಗುಬ್ಬಚ್ಚಿಗಳು ನಾವು - ವ್ಯಾಪಾರಿಗಳು – ಎಂದುಕೊಳ್ಳುತ್ತಾನೆ. ತಕ್ಷಣ ಪ್ರಶ್ನೆ ಭುಗಿಲೇಳುತ್ತದೆ. ಇಷ್ಟು ಕಷ್ಟಪಟ್ಟಾದರೂ ಇವರು ಏಕೆ ಜೀವಿಸಿದ್ದಾರೆ ? ಮತ್ತೆ ಮುಂದಿನ ಪ್ರಶ್ನೆ ಇಷ್ಟೊಂದು ಹಣದಿಂದ ನನಗೇನು ಉಪಯೋಗ ? ಈ ಪ್ರಶ್ನೆಗೆ ಉತ್ತರ ದೊರಕದೆ ಬಾಳೆಲ್ಲವನ್ನೂ ಅವನತಿಯ ಹಾದಿಗೆ ದೂಡುತ್ತಾನೆ. ತನ್ನ ಪೋಷಕ ಯಾಕೋವನ ಇಚ್ಛಾವಿರುದ್ಧವಾಗಿ ನಡೆದು ಕೊನೆಗೆ ಬಲಾತ್ಕಾರದಿಂದ ಹುಚ್ಚಾಸ್ಪತ್ರೆಗೆ ಕಳಿಸಲ್ಪಡುತ್ತಾನೆ. ಇದು ಫೋಮನ ಕೊನೆ.

ಬಾಳು ವ್ಯಕ್ತಿ ಶಕ್ತಿಗಳ ಜಂಜಾಟ. ವ್ಯಕ್ತಿ ಜೀವನದ ಶಕ್ತಿಯನ್ನು ತನ್ನ ಆಳನ್ನಾಗಿಸಿಕೊಳ್ಳಬೇಕು. ಜೀವನ ಒಂದು ಕುದುರೆಯಂತೆ. ವ್ಯಕ್ತಿ ಅದರ ಸವಾರನಾಗಿ ತನ್ನ ಬುದ್ಧಿಶಕ್ತಿಯ ಕಡಿವಾಣದಿಂದ ಅದನ್ನು ತನ್ನ ಮನಬಂದೆಡೆ ಸಾಗುವಂತೆ ಆಳಬೇಕು. ಈ ಕಾರ್ಯ ನಡೆಸುವ ವ್ಯಕ್ತಿಗೆ ಹೃದಯವಿರಲಾಗದು. ಪಶ್ಚಾತ್ತಾಪದ ದಾವಾಗ್ನಿಯಲ್ಲಿ ಬೆಂದು ತುತ್ತಾಗುವ ದುರ್ಬಲ ಮನವಿರಬಾರದು. ಹೃದಯರಹಿತನಾಗಿದ್ದವನಿಗೆ ತಲೆ ತೀಕ್ಷ್ಣವಾಗಿದ್ದೀತು. ಬುದ್ಧಿಯ ಉಪಯೋಗದ ಕಾರ್ಯದಲ್ಲಿ ಹೃದಯವೂ ಅದರ ಮೋಹಗಳೂ ಕೈಯಿಕ್ಕಿದರೆ ಕೆಲಸ ಕೆಟ್ಟೀತು - ಎಲ್ಲವೂ ಮಣ್ಣಾಗಿಡೀತು. ಆದರಿಂದ ಹೃದಯ ಕಠಿನ ಕಲ್ಲಾಗಬೇಕು. ಯಾರನ್ನು ಬಲಿಗೊಂಡರೂ ಸರಿ, ನಿನ್ನದನ್ನು, ನಿನ್ನನ್ನು ಊರ್ಜಿತಗೊಳಿಸಿಕೊ ಎನ್ನುವ ವ್ಯಕ್ತಿ

ಯಾಕೋವ. ಪ್ರಶ್ನಿಸಬೇಡ. ಜೀವನದ ವಿಷಯವಾಗಿ ಪ್ರಶ್ನಿಸಲು ಹೊರಟ ಯೆಂದರೆ ಅದಕ್ಕೆ ಕೊನೆಯೇ ಇಲ್ಲ - ಅದರಿಂದ ನಿನ್ನ ಕೊನೆಯೇ ಆದೀತು ಎನ್ನುವ ಯಾಕೋವನ ತತ್ವಕ್ಕೆ ಸಂಪೂರ್ಣ ವಿರೋಧಿ ಫೋಮ. ಕೊನೆಗೆ ತನ್ನ ಕೊನೆಯನ್ನು ಯಾಕೋವನಿಂದಲೇ ಕಂಡ. ಹಾಲೂಡಿದ ಕೈ ಹಾಲಾ ಹಲವನ್ನು ಊಡಿಸಿತು! ಯಾಕೋವನನ್ನು ನಾವು ೧೯ನೆಯ ಶತಮಾನದ ಅಂತ್ಯದ ವ್ಯಾಪಾರಿ ವರ್ಗದ ಮೂರ್ತಿಯೆನ್ನಬಹುದು. ಚಾಲೂಕು, ಕುತಂತ್ರ, ಸ್ವಾರ್ಥತೆ, ಸ್ವಾತಂತ್ರ್ಯ ವಿರೋಧ, ಉಳಿದವರನ್ನು ದುಡಿಸಿ ತನ್ನ ದನ್ನು ತುಂಬಿಕೊಳ್ಳುವುದು ಇವು ಅವನ ಪ್ರಮುಖ ಗುಣಗಳು - ಶೋಷಕ ವರ್ಗದ ಮುಖ್ಯ ಗುಣಗಳು. ಅವುಗಳು ೧೯ನೆಯ ಶತಮಾನದ ಅಂತ್ಯದಲ್ಲಿ ಎಷ್ಟು ಪ್ರಬಲವಾಗಿದ್ದುವೆಂಬುದನ್ನು ಯಾಕೋವನ ಜಯದಿಂದಲೇ ನಾವು ಊಹಿಸಬಹುದು.

ಈ ವರ್ತಕರ ಸಂತೆಯಲ್ಲಿ ಒಂದು ವ್ಯಕ್ತಿ ಎದ್ದು ನಿಲ್ಲುತ್ತದೆ. ಅದು ಫೋಮನ ಗೆಳೆಯ ಯೋಸೋವ. ಬಡವರ ಮಗ ಅವನು, ಬುದ್ಧಿಶಾಲಿ. ಶಾಲೆಯಲ್ಲಿ ತಿಂಡಿಯ ಆಸೆಗಾಗಿ ಫೋಮನಿಗೆ ಪಾಠಗಳನ್ನೆಲ್ಲಾ ಬರೆದುಕೊಡು ತ್ತಿದ್ದ. ವಿಶ್ವವಿದ್ಯಾನಿಲಯದಲ್ಲಿ ಕೂಡ ವ್ಯಾಸಂಗ ಮಾಡಿದ. ಕೊನೆಗೆ– ಅಂದಿನ ಕ್ರೂರ ಸಮಾಜದ ಹತಾಹುತಿಗೆ ಸಿಕ್ಕಿ ಸಂಕಟಪಟ್ಟು ಶೂನ್ಯವಾದಿ (Nihilist) ಯಾದ. ಬಾಳೊಂದು ದುಸ್ವಪ್ನ. ಇಲ್ಲಿ ಯಾವುದೂ ಸರಿಯಿಲ್ಲ ವೆಂದುಕೊಂಡು ಎಲ್ಲವನ್ನೂ ಎಲ್ಲರನ್ನೂ ಎದುರಿಸುತ್ತಾನೆ. ಬಾಳಿನ ಬಯ ಲಾಟ ಬರಿಯ ಬೈಗಳಿಂದ ಸರಿಯಾಗಲಾರದು, ಸುಗಮವಾಗಲಾರದೆಂಬು ದನ್ನು ಅರಿಯಲಾರದೇ ಹೋದ ಬುದ್ಧಿಜೀವಿ ಯೋಸೋವ. ತನ್ನ ಅಮೋಘ ಬುದ್ಧಿಯನ್ನು, ಅಪಾರ ಪಾಂಡಿತ್ಯವನ್ನು ಕಾಸೆರಡು ಕಾಸಿಗೆ ಮಾರಿಕೊಂಡು ಕುಡಿತದಲ್ಲಿ ನೋವನ್ನು ಮುಳುಗಿಸಲು ಯತ್ನಿಸಿದ ಪತ್ರಿಕೋದ್ಯೋಗಿ ಯೋಸೋವ. ತನ್ನಂತಹರಿಗೆ ಸರಿಯಾದ ಸ್ಥಾನವಿಲ್ಲವೆಂದೇ ತಿಳಿದಿದ್ದಿರ ಬೇಕು ಆತ. ತನ್ನ ದುಡಿಮೆಯನ್ನು ಮಾರಿಕೊಳ್ಳುವ ವಿಷಯದಲ್ಲಿ ಅವನು ಕೂಲಿಕಾರರಿಗಿಂತ ಕಡೆ. ಅವರು ದೈಹಿಕವಾಗಿ ಮಾತ್ರ ಬಂದಿಗಳು. ಇವನು ಮಾನಸಿಕವಾಗಿ ಬಂದಿ. ಈ ವಿಷಯದಲ್ಲಿ ನಮಗೆ ಮತ್ತೊಂದು ವ್ಯಕ್ತಿಯ ನೆನಪು ಬರುತ್ತದೆ. ಚಾರಲ್ಸ್ ಡಿಕನ್ಸನ "ಎರಡು ಪಟ್ಟಣಗಳ ಕಥೆ"

ಕಾದಂಬರಿಯ ಸಿಡ್ನಿ ಕಾರ್ಗನ್ ನೆನಪಿಗೆ ಬರುತ್ತಾನೆ. ಇಬ್ಬರೂ ಪ್ರಚಂಡ ಬುದ್ಧಿಶಾಲಿಗಳು, ಜೀವನದಲ್ಲಿ ಬೇಸರಪಟ್ಟವರು. ತಮ್ಮದಕ್ಕೆ ಸರಿಯಾದ ಪಾಲ್ಯ ದೊರೆಯದೆ ಬುದ್ಧಿಯನ್ನು ಇತರರಿಗೆ ಮಾರಿಕೊಳ್ಳುವವರು. ಕೊನೆಗೆ ಕುಡಿತದಲ್ಲಿ ಜೀವನದ ಕುದಿಮಿದಿಯನ್ನು ಮುಚ್ಚಲು ಯತ್ನಿಸುವವರು. ಈ ವಿಚಾರವೊಂದರಲ್ಲಿ ಮಾತ್ರ ಅವರಿಬ್ಬರಿಗೂ ಹೋಲಿಕೆ. ಯೋಸೋವನ ಜೀವನ ಕೂಡ ಅಸಮಾಧಾನದ ಸಂತೆ - ಅತೃಪ್ತಿಯ ಕಂತೆ. ಅದಕ್ಕಾಗಿ ಎಲ್ಲರ ಮನನೋಯಿಸುವ ಯತ್ನ ಅವನದು. ಎಲ್ಲರ ಮೇಲೂ ವಿಡಂಬನ ಬರೆಯುವ ಅವನ ಜೀವನದಲ್ಲಿ ಅಳಿಸಲಾರದ ನೋವುಗಳು, ಮಾಗಲಾರದ ಗಾಯಗಳು ಎಷ್ಟು ಎಂಬುದನ್ನು ನಾವು ಅವನ ನಾಲ್ಕಾರು ಮಾತು ಗಳಿಂದಲೇ ತಿಳಿಯಬಹುದು. ಯೋಸೋವನ ಅಳಿಸಿಹೋದ, ಮಾಸಿಹೋದ ಬಾಳನ್ನು ಕಂಡು ನಮ್ಮ ಕಣ್ಣಿನಲ್ಲಿ ನೀರುಕ್ಕಿ ಎದೆ 'ಅಯ್ಯೋ' ಎನ್ನುತ್ತದೆ.

ನಮ್ಮ ಮನಸೆಳೆಯುವ ದುರಂತ ವ್ಯಕ್ತಿ ಮತ್ತೊಂದು - ಅದು ಸಾಷಾ. ಫೋಮನ ಸೂಳೆ ಆಕೆ. ಹಣವಿದ್ದವರಲ್ಲಿ ಹೆಣ್ಣಾಗಿ, ತೊತ್ತಾಗಿ ಹೋಗುವ ವಾರಾಂಗನೆ. ಆಕೆಯ ರೂಪದಷ್ಟೇ ಆಕೆಯ ವ್ಯಕ್ತಿತ್ವವನ್ನು ಕೂಡ ಬಹಳ ಸುಂದರವಾಗಿಸಿದ್ದಾನೆ ಗಾರ್ಕಿ. ಮುಖದ ಮೇಲೆ ಮುಸುಕಿದ್ದ ಗಾಂಭೀರ್ಯ ಎದೆಯಳಲಿನ ಮೇಲ್ಮುಸುಕು ಮಾತ್ರ. ಆಕೆಯ ಹಾಡು ಕೂಡ ಅಂತಹುದೇ. ಮನಸ್ಸಿನ ದುಗುಡವನ್ನೆಲ್ಲಾ ಎರಕಹೊಯ್ದಂತೆ ಹಾಡಿನಲ್ಲಿ ದುಃಖಪೂರಿತ ವಾಗಿ ತುಂಬಿ ತನ್ನ ಜೀವನವನ್ನೇ ತೇಲಿಸಿಬಿಡುವಳು.

"ಹುಲ್ಗರಿಕೆಯಂತೆ ತನ್ನ ಹೃದಯ ಬಾಡಿಹುದು", ಒಬ್ಬರಾದ ಮೇಲೊಬ್ಬರಂತೆ ಗಂಡಸರೆನ್ನಿಸಿಕೊಂಡವರ ಕಾಮತೃಪ್ತಿಗಾಗಿ ವ್ಯಕ್ತಿಯಿಂದ ವ್ಯಕ್ತಿಯ ಬಳಿಗೆ ವಲಸೆಹೋಗುವ ಹೆಣ್ಣಿನ ಈ ಜೀವನಯಾತ್ರೆ ದುರಂತ ವಲ್ಲದೆ ಮತ್ತೇನು? ಅವಳು ಫೋಮನಿಗೆ ಕೊನೆಯಲ್ಲಿ ಕೊಡುವ ಬುದ್ಧಿವಾದ ಆಕೆಯ ಹೃದಯದ ವೈಶಾಲ್ಯ ಮತ್ತು ಆಳವನ್ನು ನಮಗೆ ತೋರಿಕೊಡುತ್ತದೆ. ಈ ಕಾದಂಬರಿಯ ಉಳಿದೆಲ್ಲ ವ್ಯಕ್ತಿಗಳಂತೆ ಆಕೆ ಒಂದು ದುರಂತ ವ್ಯಕ್ತಿ!

ಫೋಮನು ತನ್ನ ಆತ್ಮದ ಅತೃಪ್ತಿಯನ್ನು ಎಷ್ಟೋ ರೀತಿಯಲ್ಲಿ ತುಂಬಿ ಕೊಳ್ಳಲು ಯತ್ನಿಸಿ ದಿನೇ ದಿನೇ ಅವನತಿ ಹೊಂದಿ ಪಶ್ಚಾತಾಪದ ದಾರಿಯಲ್ಲಿ

ನಡೆದು ಕೊನೆಗೆ ಹುಚ್ಚಾಸ್ಪತ್ರೆಯಲ್ಲಿ ತನ್ನ ಜೀವವನ್ನು ಮುಗಿಸುತ್ತಾನೆ. ಮೂರು ವರ್ಷದ ಬಲಾತ್ಕಾರದ ಹುಚ್ಚಾಸ್ಪತ್ರೆಯ ಜೀವನ ಅವನನ್ನು ನಿಜ ವಾಗಿಯೂ ಹುಚ್ಚನನ್ನಾಗಿ ಮಾಡುತ್ತದೆ. ಅವನು ಬೀದಿಯ ಭಿಕಾರಿಯಾಗು ತ್ತಾನೆ. ಜೀವನದ ಮೊಟ್ಟಮೊದಲಿನ ಮೆಟ್ಟಲಿನಲ್ಲಿಯೇ ವಿಚಾರೀಜೀವನದ ಹೊಸ ಹರೆಯ ಮೂಡಿ, ಹಳೆಯದು ಹೊಲಸು, ಆದುದರಿಂದ ಹೊಸದು ಹುಟ್ಟಬೇಕು. ಅದನ್ನು ಕಟ್ಟುವುದರಲ್ಲಿ ನಾನೂ ಕರ್ಮಕಾರಿಯಾಗುತ್ತೇ ನೆನ್ನುವ ಅರಿವು ಆತನಲ್ಲಿ ಹುಟ್ಟಿದ್ದರೆ ಈ ರೀತಿ ಅವನ ಬಾಳು ಹುಡಿಗನಸಾಗು ತ್ತಿರಲಿಲ್ಲವೋ ಏನೋ ?

ಗಾರ್ಕಿಯ ಕಾದಂಬರಿಯಲ್ಲಿ ಪ್ರತಿಯೊಂದು ದೃಶ್ಯವೂ ಮನಮುಟ್ಟು ವಂತಹುದು. ಪ್ರತಿಯೊಂದನ್ನು ಸೂಕ್ಷ್ಮವಾಗಿ ಅವಲೋಕಿಸಿ ಯಾವುದನ್ನೂ ಬಿಡದೆ ಚಿತ್ರಿಸುವುದರಲ್ಲಿ ಗಾರ್ಕಿಯ ಕೈಚಳಕ ಅಮೋಘವಾದುದು. ಆ ವಿಚಾರದಲ್ಲಿ ಗಾರ್ಕಿಯನ್ನು ನಾವು ಥಾಮಸ' ಹಾರ್ಡಿ ಇವರಿಗೆ ಹೋಲಿಸ ಬಹುದು. ಆದರೆ ಗಾರ್ಕಿಯಲ್ಲಿ ಸ್ಕಾಟಿನ ಮೋಲ್ಮುಸುಕಿನ ಮೋಹವಾಗಲೀ ಹಾರ್ಡಿಯ ದುರಂತತೆಯ ಪ್ರೇಮವಾಗಲೀ ಕಾಣದು. ಈ ಕಾದಂಬರಿಯ ಕೊನೆಯ ಚಿತ್ರ ಗಾರ್ಕಿ ಹಳೆಯ ಸಮಾಜದ ವಿಚಾರವಾಗಿ ಕಂಡ ಕನಸೋ ಎನ್ನಬಹುದು.

"ಥೋಮನು ಕುರ್ಚಿಯ ಬೆನ್ನಿಗೆ ಒರಗಿ ಕುಳಿತಿದ್ದ. ತಲೆ ಭುಜದ ಮೇಲೆ ಓಲಿತ್ತು. ಕಣ್ಣುಗಳು ಮುಚ್ಚಿದ್ದುವು. ಕಣ್ಣೆವೆಗಳ ಸಂದಿನಿಂದ ಕಣ್ಣೀರಿನ ಹನಿಗಳು ಒಂದೊಂದೇ ಕೆನ್ನೆಯ ಮೇಲೆ ಹರಿದು ಮೀಸೆಯ ಮೇಲೆ ಬಿದ್ದುವು. ಥೋಮನ ತುಟಿಗಳು ಎಳೆತರೋಗ ಬಂದಂತೆ ನಡುಗಿದವು. ಕಣ್ಣೀರಿನ ಹನಿ ಅವನ ಮೀಸೆಯಿಂದ ಎದೆಯ ಮೇಲೆ ಬಿದ್ದಿತು. ಥೋಮ ಮೌನವಾಗಿದ್ದ. ಅವನ ಎದೆ ಮಾತ್ರ ಬಹಳ ಕಷ್ಟದಿಂದ ಹಾಗೂ ಹೀಗೂ ಏರಿಳಿಯುತ್ತಿತ್ತು. ವ್ಯಾಪಾರಿಗಳು ಅವನ ಕುಂದಿದ, ಅಶ್ರುಪೂರಿತ ಮತ್ತು ದುಃಖಾನುಭವದಿಂದ ಜರಿದ ನೀಳಮುಖದ ಕಡೆ ನೋಡಿ ನೀರವತೆಯಿಂದ ಸದ್ದಿಲ್ಲದೆ ಹೊರಟು ಹೋದರು.

ಥೋಮ ಏಕಾಕಿ – ಕೈಗಳು ಬೆನ್ನ ಹಿಂದೆ ಕಟ್ಟಲ್ಪಟ್ಟಿದ್ದುವು – ಹಬ್ಬ ದುಣಿಸಿನಲ್ಲಿ ಮಿಕ್ಕ ಸೀದುಹಾದುಹೋದ ಹೊಲಸು ಆಹಾರದಿಂದ ತುಂಬಿದ್ದ

ಮೇಜಿನ ಮುಂದೆ ಕುಳಿತಿದ್ದ. ಆಗಾಗ ತನ್ನ ಊದಿದ ಭಾರವಾದ ಕಣ್ಣಿವೆಗಳನ್ನು ಮೇಲೆತ್ತಿದಾಗ; ಅವನ ಕಣ್ಣುಗಳು, ಕಣ್ಣೀರಿನ ಮೂಲಕ, ಹೊಲಸಾದ, ಕ್ರಮವಿಲ್ಲದೆ ತಿರುಗುಮುರುಗಾದ ಮತ್ತು ನಾನಾವಶೇಷವಾದ ವಸ್ತುಗಳಿಂದ ತುಂಬಿದ ಮೇಜಿನ ಕಡೆಗೆ ದುಃಖಪೂರ್ಣವಾಗಿ ದಿಟ್ಟಿಸುತ್ತಿದ್ದುವು."

ಇದನ್ನು ಓದುವಾಗ ನಮಗೆ ಆ ಮೇಜು ಫ್ರೋಮನ ಜೀವನದ ಸಂಯೋಜಿತ ಮತ್ತು ಅರ್ಥವನ್ನೆಲ್ಲ ಬಿಂಬಿಸುವ ವಸ್ತುವಲ್ಲವೇ ಎನಿಸುವುದು – ಇದೇ ಇದ್ದಿರಬಹುದು ಎಲ್ಲ ಬಂಡವಾಳಿಗರ ಸ್ಥಿತಿಯೂ – ಗಾರ್ಕಿ ತನ್ನ ಸಾಹಿತ್ಯದಿಂದ ದುಡಿದ ರಷ್ಯನ್ ಕ್ರಾಂತಿ ನಿಜವಾದಾಗ!

———:———

*

# * ಅವನತಿ

## ಎಸ್. ಅನಂತನಾರಾಯಣ

ರಷ್ಯದ ಜನತಾಕ್ರಾಂತಿಗೆ ಮೊದಲಿನ ಜೀವನವನ್ನೂ, ಅದು ಹೇಗೆ ಕ್ರಾಂತಿಯಲ್ಲಿ ಕೊನೆಗಂಡಿತೆಂಬುದನ್ನೂ ಚಿತ್ರಿಸುವುದರಲ್ಲಿ ಗಾರ್ಕಿಯವರಿಗೆ ಅಗ್ರಸ್ಥಾನ ಸಲ್ಲಬೇಕು. ಅವರ ಕಾದಂಬರಿಗಳಲ್ಲಿ ಬಲುಪಾಲು ಕ್ರಾಂತಿಗೆ ಹಿನ್ನೆಲೆಯ ಚಿತ್ರವನ್ನು ನಮ್ಮ ಮುಂದಿರಿಸುವುವು. ಡಿಕೇಡನ್ಸ ಕಾದಂಬರಿ ಕೂಡ ಅಂತಹವುಗಳಲ್ಲೊಂದು. ಇದರ ಕಥೆ ೧೮೬೩ ರಲ್ಲಿ ಪ್ರಾರಂಭವಾಗಿ ೧೯೧೭ ರಲ್ಲಿ ಮುಕ್ತಾಯಗೊಳ್ಳುತ್ತದೆ. ೧೮೬೩ ರಿಂದ—ಆಗ ತಾನೇ 'ಹಿರಿಯ ಬಿಡುಗಡೆ' (The Great Emancipation) ಆಗಿದ್ದಿತು—ಸಂದರ್ಭಗಳು ಯಾವ ರೀತಿಯಲ್ಲಿ ಬೆಳೆದು ೧೯೧೭ ರ ಕ್ರಾಂತಿಯಲ್ಲಿ ಕೊನೆಗಂಡುವೆಂಬುದನ್ನೂ ೧೮೬೩ ರಲ್ಲಿ ತಾನೇ ತಾನಾಗಿದ್ದ ವ್ಯಕ್ತಿವಾದ (Individualism) ಹೇಗೆ ಕಾಲ ಸಾಗಿದಂತೆ ಕಳೆಗುಂದಿ ಅವನತಿ ಹೊಂದಿತೆಂಬುದನ್ನು ಒಂದು ಹಳ್ಳಿಯ ಜೀವನ ತೆಗೆದುಕೊಂಡು ಗಾರ್ಕಿಯವರು ಸೊಗಸಾಗಿ ಚಿತ್ರಿಸಿದ್ದಾರೆ.

'ಅವನತಿ' ಕಾದಂಬರಿಯ ಕಥೆ ಮೂರು ತಲೆಮಾರಿನದು. ಮೊದಲನೆಯವನು ಇಲ್ಯ ಆರ್ಟ ಮನೋವ—ತನ್ನ ಶಕ್ತಿಯಲ್ಲಿ ಅಪಾರ ನಂಬಿಕೆಯುಳ್ಳವನು. ದರ್ಪಶಾಲಿ. ಯಾರನ್ನಾದರೂ ತನ್ನ ಇಷ್ಟಕ್ಕೆ ಬಗ್ಗಿಸಿಕೊಳ್ಳುವನು. ತನ್ನ ಹಿರಿಮೆ ತಾನು ಅರಿತವನು. ತಾನು ಏನು ಬೇಕಾದರೂ ಮಾಡಬಲ್ಲವನು—ಉಳಿದವರು ಏನಾದರೂ ಅನ್ನಲಿ ಎನ್ನುವ ವ್ಯಕ್ತಿವಾದಿ. ಜಾರ್ ಚಕ್ರವರ್ತಿಯ ಅನುಗ್ರಹಕ್ಕೆ ಪಾತ್ರನಾಗಿದ್ದವನು. ರಾಜಕುಮಾರ ಜಾರ್ಜ ರಾಟ್ಸ್ಕಿಯ ಕುದುರೆ ಲಾಯದ ಮೇಲ್ವಿಚಾರಕನಾಗಿದ್ದವನು ವಿಶ್ರಾಂತಿ ಪಡೆದು ಡ್ರೈಮೋವ್ ಹಳ್ಳಿಗೆ ಬರುತ್ತಾನೆ. ಊರಿನಲ್ಲಿ ಕಾಲಿಟ್ಟ ದಿನವೇ ತನ್ನ ಹಿರಿಮೆಯನ್ನು ತೋರಿಸಿಕೊಂಡು ಊರಿನವರೆಲ್ಲರ ದ್ವೇಷಕ್ಕೆ ಪಾತ್ರನಾಗುತ್ತಾನೆ. ತನ್ನ ಛಲದ ಬಲದಿಂದ ಊರಿನ ಮೇಯರ್ ಬೈಮಾ

---

* Decadence.

ಕೋವನ ಮಗಳನ್ನು ತನ್ನ ಹಿರಿಯ ಮಗ ಪೈಟರನಿಗೆ ಕೊಡುವಂತೆ ಬೈಮಾಕೋವನನ್ನು ಬಲವಂತಗೊಳಿಸಿ ಒಪ್ಪಿಸುತ್ತಾನೆ. ಬೈಮಾಕೋವ ಆದಾದ ೧೨ ದಿನಗಳಲ್ಲೇ ಮರಣಹೊಂದುತ್ತಾನೆ. ಪೈಟರ್ ಮತ್ತು ನಾಟಾಲ್ಯರ ಮದುವೆಯ ದಿನ ರಾತ್ರಿ ಬೈಮಾಕೋವನ ಸುಂದರ ವಿಧವೆ ಉಲ್ಯಾನಳು ಇಲ್ಯನ ಕಾಮುಕ್ಕೆ ಬಲ್ಲಿ ಬೀಳುತ್ತಾಳೆ.

ಇಲ್ಯನು ಅಲ್ಲಿ ಕಿತ್ತಾನಾರಿನ ಕಾರ್ಖಾನೆ ಸ್ಥಾಪಿಸುತ್ತಾನೆ. ಹಿರಿಯ ಮಗ ಪೈಟರನಿಗೇ ಅದರಲ್ಲಿ ಹೆಚ್ಚು ಆಸಕ್ತಿ. ಎರಡನೆಯ ಮಗ ನಿಕಿಟ ಗೂನು ಬೆನ್ನಿನವನು, ಚಿಕ್ಕ ವಯಸ್ಸಿನಿಂದ ತೋಟದ ಕೆಲಸಮಾಡಿ ಈಗಾಗಲೇ ೧೯ ವಯಸ್ಸಿಗೇ ನುರಿತ ತೋಟಗಾರನಾಗಿದ್ದಾನೆ. ಅವನು ಮತ್ತಾವ ಕೆಲಸಕ್ಕೂ ಉಪಯೋಗವಿಲ್ಲ. ಮೂರನೆಯವನು ಸಾಕು ಮಗ ಅಲ್ಯೂಷ— ಯಾವಾಗಲೂ ಹಸನ್ಮುಖಿ. ಅಂತರ್ಮುಖಿ. ನಿಕಿಟನತೆ ಅಷ್ಟೇನೂ ಯಾವುದನ್ನೂ ಮನಸ್ಸಿಗೆ ಹಚ್ಚಿಕೊಳ್ಳದೆ ಸುಖದ ಬೇಟೆ ಮಾಡುವವನು. ತನ್ನ ಜೀವನ ಸುಖಕ್ಕಾಗಿ ಎಂದು ಯಾವಾಗಲೂ ಸುಖಲೋಲುಪ್ತನಾಗಿರುವನು.

ಕಿತ್ತಾನಾರಿನ ಕಾರ್ಖಾನೆಯೊಂದಿಗೇ ತೊಂದರೆಗಳು ಕೂಡಿ ಬರುತ್ತವೆ. ಕಾರ್ಖಾನೆಯ ಯಂತ್ರಗಳೂ ಅಲ್ಲಿಯ ಕೂಲಿಗಳೂ ಸರಿಯಾಗಿ ಕೆಲಸ ಸಾಗಿಸುವಂತೆ ನೋಡಿಕೊಳ್ಳಲು ಮೇಲ್ವಿಚಾರಕರಾಗಬೇಕು. ಕೂಲಿಗಳು ತಲೆಯೆತ್ತದಂತೆ ದರ್ಪ ತೋರಿಸಿ ಅವರನ್ನು ಅಡಗಿಸಬೇಕು - ಬೇರೆ ಜಾಗಗಳಿಂದ ಬಂದ ಕೂಲಿಗಳಿಗೆ ಬಿಡಾರ ಏರ್ಪಡಿಸಬೇಕು-ಇವೇ ಮುಂತಾದ ನೂರಾರು ಯೋಚನೆಗಳು. ಅಲ್ಯೂಷ ಯಾವ ಕೆಲಸಕ್ಕೂ ಬರುವುದಿಲ್ಲ—ನಿಕಿಟ ನಿಷ್ಪ್ರಯೋಜಕ. ಇನ್ನುಳಿದವನೆಂದರೆ ಪೈಟರ. ಪೈಟರನೇ ಕಾರ್ಖಾನೆಯ ಮೇಲ್ವಿಚಾರಕನಾಗಿ ಅದರ ವಿಚಾರದಲ್ಲಿಯೇ ಕೊರಗುತ್ತಿರುತ್ತಾನೆ. ಕಾಲ ಸಾಗಿದಂತೆ ಕಾರ್ಖಾನೆಯ ಕೆಲಸವೂ ಜವಾಬ್ದಾರಿಯೂ ಹೆಚ್ಚುತ್ತದೆ. ಮುದುಕನಾದರೂ ಹಲ್ಕಚ್ಚಿ ಕೆಲಸ ಮಾಡುತ್ತಿದ್ದ ಆರ್ಟ ಮನೋವ ಕೆಲಸದ ಒತ್ತಡ ತಡೆಯಲಾರದೆ ರಕ್ತ ಕಾರಿ ಪ್ರಾಣ ಬಿಡುತ್ತಾನೆ.

ತಂದೆ ಸತ್ತ ಮೇಲೆ ಪೈಟರನಿಗೇ ಎಲ್ಲ ಜವಾಬ್ದಾರಿ! ಅಲ್ಯೂಷ ತನ್ನಷ್ಟಕ್ಕೆ ತಾನು ಹಣ ವ್ಯಯಮಾಡಿ ಮದ್ಯಪಾನಕ್ಕೂ ಮಾಸ್ಕೋಗೆ ಹೋಗಿ

ಬರುವುದಕ್ಕೂ ತನ್ನ ತಂದೆ ಕಷ್ಟಪಟ್ಟು ಸಂಪಾದಿಸಿದುದನ್ನು ಸುಲಭವಾಗಿ ನೀರಿನಂತೆ ವ್ಯಯ ಮಾಡುತ್ತಾನೆ. ಪೈಟರನಿಗೆ ಜೀವನ ಯಾಂತ್ರಿಕವಾಗಿ ಬಹಳ ಬೇಸರವಾಗುತ್ತದೆ. ನಿಕಿಟ ತನ್ನಣ್ಣನ ಹೆಂಡತಿ ನಾಟಾಲ್ಯಳನ್ನೇ ಪ್ರೇಮಿಸಿ ಭಗ್ನಪ್ರಣಯನಾಗಿ ಸನ್ಯಾಸಿಯಾಗಿ ಚರ್ಚಿಗೆ ಹೊರಟು ಹೋಗುತ್ತಾನೆ. ಅವನ ಭಾಗದ ಆಸ್ತಿ ಪೈಟರ್ ಮತ್ತು ಅಲ್ಯೂಷರಿಗೇ ದೊರೆಯುತ್ತದೆ. ಅಲ್ಯೂಷ ಮದುವೆಯಾಗಿ ತನ್ನಣ್ಣನನ್ನು ಬಿಟ್ಟು ಬೇರೆ ಕಡೆ ಸಂಸಾರ ಹೂಡುತ್ತಾನೆ.

ಪೈಟರನ ದುಡಿತದಿಂದ ಕಾರ್ಖಾನೆ ದಿನೇ ದಿನೇ ಬೆಳೆಯುತ್ತದೆ. ಅದು ಬೆಳೆದಂತೆ ಇವರ ತೊಂದರೆಯೂ ಬೆಳೆಯುತ್ತದೆ.

ಮೂರನೆಯ ತಲೆಮಾರಿನವರೆಂದರೆ ಪೈಟರನ ಹಿರಿಯ ಮಗ ಇಲ್ಯಾ—ಇವನು ವಿಶ್ವವಿದ್ಯಾನಿಲಯದಲ್ಲಿ ಕಲಿತ ವಿದ್ಯಾವಂತ. ಅಲ್ಲಿ ಹೊಸ ವಿಚಾರಗಳನ್ನು ತಿಳಿದು ಸಾಮ್ಯವಾದೀ ಸಂಗಡಕ್ಕೆ ಸೇರುತ್ತಾನೆ. ಇವನ ತಮ್ಮ ಯಾಕೋವ ಅಲ್ಯೂಷನ ತಿಳಿಗೇಡಿ ಸುಖಲೋಲುಪ್ತತೆಯನ್ನು ಚಿಕ್ಕಂದಿನಿಂದಲೇ ತೋರಿಸುತ್ತಾನೆ. ಇಲ್ಯನ ತಾಯಿಯೂ ಮತ್ತು ತಮ್ಮನೂ ತಂದೆಯ ಮಾತುಗಳನ್ನು ವಿಚಾರಿಸದೆ ಒಪ್ಪುವುದಿಲ್ಲ. ಆದರೆ ಅವರಲ್ಲಿ ಸರಿಯಾದ ಹಾದಿ ತುಳಿದು ಹೋಗುವವನೆಂದರೆ ಇಲ್ಯ ಮಾತ್ರ. ತನ್ನ ಮಕ್ಕಳನ್ನು ಸಾಕುವ ರೀತಿ ತನಗೆ ತಿಳಿಯದೆಂದು ಪೈಟರನಿಗೆ ಮನವರಿಕೆಯಾಗುತ್ತದೆ. ಅದು ಉಳಿದವರಿಗೂ ಗೊತ್ತು. ಆದ್ದರಿಂದ ಅವನ ಮನಸ್ಸಿಗೆ ಶಾಂತಿಯಿಲ್ಲ. ತನ್ನ ಮಕ್ಕಳನ್ನು ಪ್ರೇಮಿಸುತ್ತಾನೆ. ಆದರೆ ಅವರಿಗಾಗಿ ಅವನು ಏನನ್ನೂ ಮಾಡಲಾರ—ಅವನು ಮಾಡಿದುದು ಅವರಿಗೆ ಒಗ್ಗುವುದಿಲ್ಲ. ಜತೆಗೆ ಪೈಟರನ ಮನಸ್ಸಿಗೆ ಚಿಂತೆಗಳು ನೂರಾರು—ಕಾರ್ಖಾನೆಯ ಕೂಲಿಗಳು ಅವನನ್ನು ದ್ವೇಷಿಸುತ್ತಾರೆ. ಅವನಿಗೆ ತನ್ನ ತಂದೆಯಷ್ಟು ಶಕ್ತಿಯಾಗಲೀ ಆತ್ಮವಿಶ್ವಾಸವಾಗಲೀ ಇಲ್ಲ. ಅವನ ಜೀವನ ಯಾಂತ್ರಿಕವಾಗುತ್ತದೆ. ಹೆಂಡತಿಯಲ್ಲಿ ಬೇಸರವಾಗಿ ಬೇರೆ ಹೆಂಗಸರನ್ನು ಹುಡುಕಿಕೊಂಡು ಹೊರಟ ಅವನಿಗೆ ಕಾರ್ಖಾನೆಯ ಕೂಲಿ ಹೆಣ್ಣುಗಳ ಹೇಸಿಗೆ ಜೀವನ ಸ್ಪಷ್ಟವಾಗುತ್ತದೆ. ಕಾಸೆರಡುಕಾಸುಗಳಿಗೇ ದೇಹತೆರುವವರು ಅವರು! ಕಾರ್ಖಾನೆಯಲ್ಲಿ ಕೂಡ ಕೆಲವರು ಸಾಮ್ಯವಾದಿಗಳಿರುವರೆಂಬುದು ಪೈಟರನಿಗೆ ತಿಳಿಯುತ್ತದೆ. ಇಲ್ಯ

ತಂದೆಯೊಂದಿಗೆ ಜಗಳವಾಡಿ ಹೊರಟು ಹೋಗುತ್ತಾನೆ. ಪ್ಯೆಟರನಿಗೆ ಅದೊಂದು ಕೊರಗು. ಕಾರ್ಖಾನೆಯ ವಿಚಾರದಲ್ಲಿ ಆಸಕ್ತಿ ವಹಿಸುವವನೆಂದರೆ ಅಲ್ಯೂಷನ ಮಗ ಮ್ಯೆರನ್—ಪ್ಯೆಟರನಿಗೆ ಹೊಟ್ಟೆಯುರಿ! ತನ್ನ ಮಗ ಯಾಕೋವನನ್ನು ಕಾರ್ಖಾನೆಯ ವಿಚಾರದಲ್ಲಿ ಆಸಕ್ತಿ ತೋರುವಂತೆ ಬಲವಂತ ಪಡಿಸುತ್ತಾನೆ. ಆದರೆ ಯಾಕೋವ ಮಾಸ್ಕೋಗೆ ಓಡಿಹೋಗುತ್ತಾನೆ, ಹೆಂಡ ಮತ್ತು ಹೆಂಗಸರಿಗಾಗಿ. ಕೊನೆಗೆ ೧೯೧೪-೧೮ರ ಯುದ್ಧವಾದಾಗ ಯಾಕೋವ ತನ್ನ ಪ್ರೇಯಸಿಯೊಂದಿಗೆ ಮಾಸ್ಕೋಗೆ ಓಡಿದಾಗ ದಾರಿಯಲ್ಲೇ ಸ್ಯೆನಿಕರಿಂದ ಮರಣ ಹೊಂದುತ್ತಾನೆ. ಪ್ಯೆಟರನಿಗೆ ತನ್ನ ಮಕ್ಕಳದೊಂದು ಕೊರಗು, ಕಾರ್ಖಾನೆಯದೊಂದು ಕೊರಗು—ಜತೆಗೆ ನಿಕಿಟ ಚರ್ಚಿನಲ್ಲಿ ಶಾಂತಿ ದೊರೆಯದೆ ಚರ್ಚುಬಿಟ್ಟು ಓಡಿಬರುತ್ತಾನೆ ಮನೆಗೆ. ಕೊನೆಗೂ ಅವನು ಚರ್ಚಿಗೆ ಕಾಲಿಡುವುದಿಲ್ಲ. ೧೯೧೪ರ ಯುದ್ಧ ಪ್ರಾರಂಭವಾಗುವುದಕ್ಕೆ ಕೆಲವು ದಿನ ಮುಂಚೆ ಸಾಯುತ್ತಾನೆ. ಪ್ಯೆಟರ್ ಕೊರಗಿನಿಂದ ಕಾಹಿಲೆ ಬಿದ್ದಿರುವಾಗ ಕ್ರಾಂತಿಯ ಬಿಸಿ ತಗಲುತ್ತದೆ ಅಲ್ಲಿಗೂ. ಕಥೆ ಅಲ್ಲಿಗೆ ಕೊನೆಗಾಣುತ್ತದೆ.

ಕಥೆಯನ್ನು ಗಾರ್ಕಿಯವರು ಹೆಣೆದಿರುವ ರೀತಿ ಬಹಳ ಹೃದಯಂಗಮವಾಗಿದೆ. ಸಾಮಾನ್ಯವಾಗಿ ನಾವು ರಷ್ಯನ್ ಕಾದಂಬರಿಗಳಲ್ಲಿ ಕಾಣುವುದು ಒಂದು ವ್ಯಕ್ತಿಯ ಸುತ್ತ ಹೆಣೆದ ಕಥೆ. ಅವುಗಳಲ್ಲೆಲ್ಲಾ ವ್ಯಕ್ತಿವಾದಕ್ಕೆ ಬಲು ಬೆಲೆ-ಪ್ರಾಮುಖ್ಯತೆ. ಆದರೆ ಗಾರ್ಕಿಯವರು ಅದೇ ವ್ಯಕ್ತಿವಾದ ೧೮೬೩ರಿಂದ ೧೯೧೭ರ ವರೆಗೆ ಹೇಗೆ ಅವನತಿಹೊಂದಿ ತನ್ನ ವಿನಾಶದ ಮೂಲ ತನ್ನಲ್ಲೇ ಹೇಗಿಟ್ಟುಕೊಂಡು ಆತ್ಮಹತ್ಯಮಾಡಿಕೊಂಡಿತೆಂಬುದನ್ನು ಈ ಕಾದಂಬರಿಯಲ್ಲಿ ಚಿತ್ರಿಸಿದ್ದಾರೆ.

ಗಾರ್ಕಿಯವರ ಈ ಕಾದಂಬರಿಯಲ್ಲಿ ನಮಗೆ ಮೊದಲು ತೋರುವುದೆಂದರೆ ಅವರ ಪಾತ್ರನಿರೂಪಣೆ. ಮೂರು ತಲೆಮಾರಿನ ಜೀವನ ಚಿತ್ರಿಸುವುದರಲ್ಲಿ ಒಂದೊಂದರ ವ್ಯಕ್ತಿಗಳಲ್ಲೂ ಎಷ್ಟೆಷ್ಟು ವ್ಯತ್ಯಾಸವಿದೆಯೆಂಬುದನ್ನು ಗಾರ್ಕಿಯವರು ಚಿತ್ರಿಸುವ ವ್ಯಕ್ತಿಗಳನ್ನೇ ತೆಗೆದು ಒಂದೆರಡು ಉದಾಹರಣೆಗಳಿಂದ ಸ್ಪಷ್ಟಗೊಳಿಸಬಹುದು.

ಇಲ್ಯ ಆರ್ಟಮನೋವ - ಅವನು ರಾಜಕುಮಾರನ ಸೇವೆಯಲ್ಲಿದ್ದನು.

ರಾಜರೊಂದಿಗೆ ಇದ್ದೆನೆಂಬ ಗರ್ವ, ತನಗೆ ಅವರ ಅನುಗ್ರಹವಿದೆ, ತಾನೇನು ಬೇಕಾದರೂ ಮಾಡಬಲ್ಲೆನೆಂಬೊಂದು ಅಹಂಭಾವ, ತನ್ನ ಶಕ್ತಿಯಲ್ಲಿ ಪ್ರಚಂಡ ವಿಶ್ವಾಸ - ಇವೆಲ್ಲವರ ಜತೆಗೆ ಸಾಮಾನ್ಯ ಜನತೆಯ ವಿಚಾರದ ಬಗ್ಗೆ ತಿರಸ್ಕಾರ! ಇವುಗಳೇ ಇವನ ಗುಣಗಳು. ಇವನ ವ್ಯಕ್ತಿತ್ವ ಕಾದಂಬರಿಯ ಮೊದಲಿನಲ್ಲಿ ಉಳಿದವರೆಲ್ಲರನ್ನು ಮೂಕರನ್ನಾಗಿಸಿ ಅವನೆಂದಂತೆ ಅವರು ನಡೆಯುವಂತೆ ಮಾಡುತ್ತದೆ.

ಇಲ್ಯನ ಪರಿಚಯ ನಮಗೆ ಕಾದಂಬರಿಯ ಪ್ರಾರಂಭದಲ್ಲೇ ಆಗುತ್ತದೆ. ಡ್ರ್ಯೆಮೋವ್ ಹಳ್ಳಿಗೆ ಹೊಸಬನಾಗಿ ಬಂದವನು ಕೊನೆಯವರೆಗೂ ಹೊಸಬನಾಗಿಯೇ ಉಳಿಯುತ್ತಾನೆ - ಬಂದ ದಿನವೇ ಊರ ಕಿರಿಯರ ಸಮಾನನಾಗಿ, ಅವರಿಗಿಂತಲೂ ಹಿರಿಯನಂತೆ ಚರ್ಚೆಸಲ್ಲಿ ದರ್ಪ, ಠೀವಿ ತೋರಿಸುತ್ತಾನೆ. ಅವನು ಯಾರಿರಬಹುದೆಂದು ತಿಳಿಯಲು ಕುತೂಹಲದಿಂದ ಊರಿನವರು ಕಳುಹಿಸಿದ ಕಾವಲುಗಾರನನ್ನು "ನೀನೇಕೆ ಇಷ್ಟು ಕುರೂಪಿಯಾಗಿದ್ದೀ?" ಎಂದು ಕೇಳಿ ಮೂಕನಾಗಿ ಮಾಡಿ ಹಿಂತಿರುಗಿಸುತ್ತಾನೆ. ಊರಿನ ಮೇಯರ್ ಬೈಮಾಕೋವನನ್ನು ಕಂಡಾಗಲೇ "ನೀನು ನಿನ್ನ ಮಗಳನ್ನು ನನ್ನ ಮಗನಿಗೆ ಕೊಡಬೇಕು" ಎಂದು ಹೇಳಿ ಬಲವಂತಗೊಳಿಸಿ ಒಪ್ಪಿಸುತ್ತಾನೆ. ಕಿತ್ತಾನಾರಿನ ಕಾರ್ಖಾನೆ ಸ್ಥಾಪಿಸುವ ತನ್ನ ಯೋಜನೆಯನ್ನು ಬೈಮಾಕೋವನಿಗೆ ತಿಳಿಸಿದಾಗ ಬೈಮಾಕೋವ "ಇಲ್ಲಿ ಯಾರೂ ಕಿತ್ತಾನಾರು ಬೆಳೆಯುವುದಿಲ್ಲ" ಎನ್ನಲು, "ಬೆಳೆಯುವಂತೆ ಮಾಡುತ್ತೇನೆ" ಎಂದು ಕಟುವಾಗಿ ದೃಢವಾಗಿ ಹೇಳುತ್ತಾನೆ. ಹೀಗೆಯೇ ಇನ್ನೂ ಬೇಕಾದಷ್ಟು ಉದಾಹರಣೆಗಳನ್ನು ಕೊಡಬಹುದು. ನಮಗೆ ಅವನ ಪ್ರತಿಯೊಂದು ಮಾತಿನಲ್ಲಿಯೂ ಕಾಣಬರುವುದು ಅವನ ಪ್ರಚಂಡ ಆತ್ಮವಿಶ್ವಾಸ, ಹಿಡಿದದ್ದನ್ನು ಕೊನೆಗಾಣಿಸುವ ಛಲ ತನ್ನಲ್ಲಲ್ಲದೆ ಉಳಿದವರಿಂದೇನೂ ಸಾಧ್ಯವಿಲ್ಲವೆಂಬ ಅಹಂಭಾವ, ಜನತೆಯಲ್ಲಿ ತಿರಸ್ಕಾರ. ಆದರೆ ಇದೆಲ್ಲದರ ಜತೆಗೆ ಮತ್ತೊಂದು ಕೂಡಿದೆ - ಅದು ಅವನ ಕೆಲಸದಲ್ಲಿನ ಆಸಕ್ತಿ, ಕೆಲಸಕ್ಕೋಸ್ಕರ ಏನು ಬೇಕಾದರೂ ಮಾಡಲು ತಯಾರಿದ್ದಾನೆ ಇಲ್ಯ!

ಇಲ್ಯನ ಮಗ ಪ್ಯೆಟರ—ತಂದೆಯ ದೃಢತೆ, ಆಸಕ್ತಿ, ಶಕ್ತಿಗಳೆಲ್ಲಕ್ಕೂ ಹೊರತಾದವನು. ತನ್ನ ತಂದೆಯಂತೆಯೇ ಕಾರ್ಖಾನೆಯ ಕೆಲಸದಲ್ಲಿ ನಿರತ

ನಾಗಿದ್ದರೂ ಯಾವಾಗಲೂ ಗೊಣಗುತ್ತಿರುತ್ತಾನೆ. ಆದರೆ ತಂದೆಗೆ ಇಲ್ಲದ ಒಂದು ಹೊಸಗುಣ ಇವನಲ್ಲಿ ಕಾಣುತ್ತದೆ. ಅದು ಪ್ರೇಮ! ತನ್ನ ಮಗ ಇಲ್ಯನಲ್ಲಿ ಪೈಟರನಿಗೆ ಬಹಳ ಪ್ರೇಮ. ಅವನಿಗೋಸ್ಕರ ಇವನೊಂದು ಖೂನಿ ಕೂಡ ಮಾಡುತ್ತಾನೆ. ಆದರೆ ಆ ಪ್ರೇಮ ನಿಷ್ಪ್ರಯೋಜಕ. ಇಲ್ಯನಿಗೆ ಅದರಿಂದ ಕೊಂಚವಾದರೂ ಉಪಯೋಗವಾಗುವಂತಿಲ್ಲ. ಉಪಕಾರಕ್ಕಿಂತ ಅಪಕಾರವೇ ಹೆಚ್ಚೆನ್ನಬಹುದು. ಮನಸ್ಸಿನಲ್ಲಿ ಏನೇ ಇದ್ದರೂ ಅದನ್ನು ಕಾರ್ಯರೂಪಕ್ಕೆ ತರುವ ಕೆಚ್ಚು ಇವನಲ್ಲಿಲ್ಲ!

ಪೈಟರ ತಮ್ಮ ನಿಕಿಟನ ಚಿತ್ರ ಪೈಟರನ ಚಿತ್ರಕ್ಕಿಂತಲೂ ಹೆಚ್ಚು ಕಲಾಯುತವಾಗಿದೆಯೆನ್ನಬಹುದು. ಅವನ ವಿಕಾರಾಕೃತಿ—ಅವನೊಬ್ಬ ಗೂನ—ಬೀದಿಯಲ್ಲಿ ನಡೆಯುವಾಗ ಅವನ ನೆರಳು ವಿಚಿತ್ರವಾಗಿರುತ್ತಿದ್ದುವು. ಅವನ ನೀಲ ಕಣ್ಣುಗಳು—ಆಕಾಶದಂತೆ ನೀಲವಾಗಿ ಆಕಾಶದಷ್ಟೇ ಅಡಗಿಸಿಕೊಂಡಿರುವ ಕಣ್ಣುಗಳು, ಅವನ ಮೌನ ನಮ್ಮ ಮನಸ್ಸನ್ನು ಅವನ ಕಡೆಗೆ ಸೆಳೆಯುತ್ತವೆ. ಅವನು ಹಾಸ್ಯಕ್ಕೊಂದು ಗುರಿ. ಅಣ್ಣತಮ್ಮಂದಿರ ತಿರಸ್ಕಾರ, ಊರಿನವರೆಲ್ಲರ ಅವಹೇಳನ—ತಂದೆಯಂತೂ ಇದ್ದನೇ ಸತ್ತನೇ ಎಂದು ಕೂಡ ವಿಚಾರಿಸುತ್ತಿರಲಿಲ್ಲ—ಇವುಗಳ ನಡುವೆ ಬೆಳೆದು ಮನಸ್ಸಿನಲ್ಲೇ ಕೊರಗಿ ಅಂತರ್ಮುಖಿಯಾಗುತ್ತಾನೆ ತನ್ನಷ್ಟಕ್ಕೆ ತಾನು—ಉಳಿದವರ ಪರಿವೆಯೇ ಇಲ್ಲ. ಯಾರು ಎಷ್ಟೇ ಹಾಸ್ಯ ಅವಹೇಳನ ಮಾಡಿದರೂ ತನ್ನ ಕೆಲಸ ಮಾತ್ರ ಬಿಡದೆ ಸೊಗಸಾದ ಹೂತೋಟ ಬೆಳೆಸುತ್ತಾನೆ. ಇವನಿಗೆ ಜತೆಗಾರನೆಂದರೆ ಒಬ್ಬನೇ ಒಬ್ಬ—ಅವನೂ ಒಬ್ಬ ಕೂಲಿಗಾರ ಟ್ರೈಕನ್. ನಿಕಿಟ ತನ್ನಣ್ಣನ ಹೆಂಡತಿ ನಾಟಾಲ್ಯಳನ್ನ ಪ್ರೇಮಿಸುತ್ತಾನೆ. ತಾನು ಗೂನ, ತನ್ನ ಪ್ರೇಮ ಬರಿಯ ನೀರಿನಹೋಮ ಎಂಬುದು ಅವನಿಗೆ ಚೆನ್ನಾಗಿ ಗೊತ್ತು. ಆದ್ದರಿಂದಲೇ ಆ ವಿಷಯವನ್ನು ಯಾರಲ್ಲಿಯೂ ಹೇಳದೆ ತನ್ನ ಮನಸ್ಸಿನಲ್ಲಿಯೇ ಇಟ್ಟು ಕೊಂಡಿರುತ್ತಾನೆ. ಸಮಯ ದೊರೆತಾಗಲೆಲ್ಲ ನಾಟ್ಯಾಲಳ ಬಳಿಯೇ ಇರಲು ಯತ್ನಿಸುತ್ತಾನೆ. ಆಕೆಗೇನಾದರೂ ಸಹಾಯ ಬೇಕಿದ್ದರೆ ಮುಂಬರಿದು ಕಷ್ಟ ಬಿದ್ದು ಮಾಡುವವನು ನಿಕಿಟ. ಕೊನೆಗೆ ಪ್ರೇಮದ ಕಾವು ತಡೆಯಲಾರದೆ ನೇಣು ಹಾಕಿಕೊಳ್ಳುತ್ತಾನೆ. ಆ ದೃಶ್ಯ ಕಣ್ಣಿಗೆ ಕಟ್ಟುವಂತಹುದು.

ಅವನ ಪ್ರೇಮ ಎಲ್ಲಿಯವರೆಗೂ ಹೋಗಿತ್ತೆಂದರೆ ನಾಟಾಲ್ಯಳ ಕರವಸ್ತ್ರಗಳನ್ನು ಕೂಡ ಮುದ್ದಿಡುತ್ತಿದ್ದ! ಇಷ್ಟಾಗಿ ಅದು ನಾಟಾಲ್ಯಳಿಗೇ ತಿಳಿಯದು! ಅವನನ್ನು ಟ್ರೈಕನ್ ಆತ್ಮಹತ್ಯೆಯಿಂದ ರಕ್ಷಿಸುತ್ತಾನೆ. ಆಗ ಅವನನ್ನು ಕಾಣಲು ಪೈಟರ್ ಬರುತ್ತಾನೆ. ಎಂತಹ ಸನ್ನಿವೇಶ. ''ಪೈಟರನಿಗೆ ಆ ವಿಷಯ ತಿಳಿದಿದೆಯೋ ಏನೊ? ಟ್ರೈಕನನು ಎಲ್ಲವನ್ನೂ ಹೇಳಿ ಬಿಟ್ಟಿರುವ ನೇನೋ'' ಎಂದು ಒಂದು ಕಡೆ ಯೋಚನೆ. ಮತ್ತೊಂದು ಕಡೆ ತಾನುಳಿದು ಕೊಂಡೆನಲ್ಲಾ ಎಂಬ ಚಿಂತೆ. ಅಣ್ಣನಬಳಿ ಹೋಗಲು ಅವಮಾನ, ಮಾತೇ ಬರದು. ಅಷ್ಟೊಂದು ಎದೆ ಕುಗ್ಗಿ ಧೈರ್ಯ ಬತ್ತಿ ಹೋಗುತ್ತದೆ. ಅದಕ್ಕೆ ಸರಿಯಾಗಿ ಪೈಟರನು ಆಡುವ ಎದೆ ಚುಚ್ಚುವ ಮಾತುಗಳು-''ನಾಚಿಕೆಗೇಡು! ದೈವವಿರುದ್ಧ ಪಾಪಕೃತ್ಯ! ಕುಲಕ್ಕೊಂದು ಕಳಂಕ!''—ತಕ್ಷಣ ಮನಸ್ಸು ಕಲ್ಲು ಮಾಡಿಕೊಂಡು ಭಿಕ್ಷುವಾಗಲು ನಿರ್ಧರಿಸಿ ತನ್ನ ಹಣವನ್ನೆಲ್ಲಾ ತನ್ನಿಬ್ಬರು ಸೋದರರಿಗೇ ಹಂಚಿ ಹೊರಟು ಹೋಗುತ್ತಾನೆ. ಅವನು ಕೊನೆಯಲ್ಲಿ ಟ್ರೈಕನನ್ನು ಬೀಳ್ಕೊಟ್ಟು ಹೊರಡುವ ದೃಶ್ಯ ನಮ್ಮ ಮನಸ್ಸು ಅವನಿಗಾಗಿ ಕರಗುತ್ತದೆ. ನಿಕಿಟ ಚರ್ಚಿನಲ್ಲಿ ಮೌನಿಯಾಗಿ ಒಳ್ಳೆಯ ಹೆಸರು ತೆಗೆದು ಕೊಳ್ಳುತ್ತಾನೆ. ಆದರೆ ಆವನಿಗೆ ಅಲ್ಲಿಯೂ ಮನಶ್ಶಾಂತಿ ದೊರೆಯದು. ಇವನು ಮಹಾ ಮುದಿಯೆಂದು ಪ್ರಚಾರಮಾಡಿ ಹೆಚ್ಚು ಹಣ ಸಂಪಾದಿಸಲು ಯತ್ನಿಸುತ್ತಾರೆ ಆ ಚರ್ಚಿನವರು. ಚರ್ಚಿನ ಜೀವನ ಸಾಬೀಳವೆ ನಿಕಿಟ ಹಿಂದಿರು ಗುತ್ತಾನೆ. ಮತ್ತೆ ಚರ್ಚಿಗೆ ಹಿಂದಿರುಗುವುದಿಲ್ಲ. ''ನನ್ನನ್ನು ಅಲ್ಲಿಗೆ ಕಳುಹಿಸ ಬೇಡಿ'' ಎಂದು ಬೇಡಿಕೊಳ್ಳುತ್ತಾನೆ.

ಟ್ರೈಕನನು ಮೂರು ತಲೆಮಾರಿನ ಜನರೊಂದಿಗೂ ಇರುವ ವ್ಯಕ್ತಿ. ಇಲ್ಯಾ ಆರ್ಟಮನೋವ, ಪೈಟರ್ ಇವನನ್ನು ಪ್ರೀತಿಸುತ್ತಾರೆ. ಇವನು ಯಾವಾಗಲೂ ಮಿತಭಾಷಿ. ಉಳಿದವರ ತಂಟೆಗೆ ಹೋಗುವವನಲ್ಲ. ಆದರೆ ಎಲ್ಲರ ವಿಷಯ ವನ್ನು ಚೆನ್ನಾಗಿ ತಿಳಿದ ವ್ಯಕ್ತಿ. ಇವನಿಗೆ ಆರ್ಟ ಮನೋವನ ಸಂಸಾರ ಕಂಡರೆ ದ್ವೇಷ. ಮೇಲ್ಮಾತ್ರ ತನ್ನ ಭಾವವನ್ನು ಬಯಲು ಮಾಡುವುದಿಲ್ಲ ಇವನು. ಕೊನೆಗೆ ಇವನೂ ಕ್ರಾಂತಿಕಾರರೊಂದಿಗೆ ಕೂಡುತ್ತಾನೆ.

ಉಳಿದ ಪಾತ್ರಗಳ ನಿರೂಪಣೆಯಲ್ಲೂ ನಮಗೆ ಇದೇ ಕೌಶಲ್ಯ ಕಾಣ ಬರುತ್ತದೆ. ವ್ಯಕ್ತಿಯನ್ನು ಮೊದಲ ಬಾರಿ ನೋಡಿದಾಗಲೇ ಅವರ ಸ್ವಭಾವ

ಇಂತಹುದೆಂಬುದನ್ನು ಸುಲಭವಾಗಿ ಹೇಳಿಬಿಡಬಹುದು. ಸಾಮ್ಯವಾದಿಗಳ ಗುಂಪಿಗೆ ಸೇರುವ ಇಲ್ಯ - ಪೈಟರನ ಮಗ - ಚಿಕ್ಕಂದಿನಿಂದ ಸ್ವತಂತ್ರ ಮನೋಭಾವ ತೋರಿಸುತ್ತಾನೆ. ಚಿಕ್ಕಂದಿನಿಂದ ಜನತೆಯೊಂದಿಗೆ ಬೆರೆಯುತ್ತಾನೆ. ಫ್ಯಾಕ್ಟರಿ ಕೂಲಿಗಳ ಮಕ್ಕಳೊಂದಿಗೆ ಆಟವಾಡುವುದೆಂದರೆ ಅವನಿಗೆ ಬಲು ಇಷ್ಟ. ತಾಯಿ ತನ್ನನ್ನು ಬೈದಳೆಂದು ಅವಳೊಂದಿಗೆ ಮಾತನಾಡುವುದನ್ನೇ ಬಿಡುತ್ತಾನೆ. ಅವನ ತಾತನಂತೆಯೇ ಅವನಿಗೂ ಅಸಾಧ್ಯ ಆತ್ಮವಿಶ್ವಾಸ - ಛಲ. ಬಟ್ಟೆಯೊಗೆಯುವ ತೊಟ್ಟಿಯೊಂದನ್ನು ಹಡಗುಮಾಡಿ ನೀರಿನಲ್ಲಿ ತೇಲಿಸಿಯೇ ತೇಲಿಸುತ್ತೇನೆಂದು ಹಟತೊಟ್ಟು ಹಾಗೆಯೇ ಮಾಡಿ ಬದಿಯಲ್ಲಿ ಸಿಕ್ಕಿಕೊಳ್ಳುತ್ತಾನೆ. ಆದರೆ ಸಮಯಕ್ಕೆ ಸರಿಯಾಗಿ ಯೋಚಿಸಿ ಕೆಲಸ ಕೈಕೊಳ್ಳುವ ಸ್ವಭಾವ ಅಲ್ಲಿಯೇ ತೋರಿಬರುತ್ತದೆ. ಬದಿಯಲ್ಲಿ ಸಿಕ್ಕಿಕೊಂಡರೂ ಉಳಿದ ಮಕ್ಕಳಂತೆ ಕಿರುಚಾಡದೆ ಅಲ್ಲಿದ್ದ ಕೂಲಿಗಳನ್ನು ಕೂಗಿ ಬದಿಯಿಂದ ಬಿಡಿಸಿಕೊಳ್ಳುತ್ತಾನೆ. ವಿಶ್ವವಿದ್ಯಾನಿಲಯದಲ್ಲಿ ವ್ಯಾಸಂಗ ಮಾಡುತ್ತಿರುವಾಗ ಹೊಸ ವಿಚಾರಗಳನ್ನು ತಿಳಿದು ಸಾಮ್ಯವಾದಿಯಾಗುತ್ತಾನೆ. ತನ್ನನ್ನು ಬಹಳವಾಗಿ ಪ್ರೀತಿಸುತ್ತಿದ್ದ ತಂದೆಯನ್ನು ತಾಯಿಯನ್ನು ಬಿಟ್ಟು ತನ್ನ ಧ್ಯೇಯಸಾಧನೆಗೆ ಹೊರಡುತ್ತಾನೆ. ಸೈಬೀರಿಯಾದ ಸೆರೆಯ ಸುಖ ಕೂಡ ಕೆಲವು ಕಾಲ ಅನುಭವಿಸುತ್ತಾನೆ ತಂದೆ ಅವನನ್ನು ಎಷ್ಟೇ ಪ್ರೇಮಿಸಿದರೂ ಆ ಪ್ರೇಮ ನಿಷ್ಫಲವಾದುದು. ಇವನು ಕೆಡುವನೆಂದು ಪೈಟರ್ ಇವನ ಜತೆಗಾರನನ್ನು ಖೂನಿ ಕೂಡ ಮಾಡುತ್ತಾನೆ. ಆದರೆ ಮಗ ಮಾಡುತ್ತಾನೆ. ಆದರೆ ಮಗ ಮಾತ್ರ ಅವನಿಂದ ದಿನೇ ದಿನೇ ದೂರ ಸರಿದು ಕೊನೆಗೆ ದೂರವೇ ಆಗಿಬಿಡುತ್ತಾನೆ. ಆದರೆ ಕೊನೆಯಲ್ಲಿ ತನ್ನ ತಂದೆಯ ಜೀವವನ್ನು ಉಳಿಸುವವನೂ ಅವನೇ!

ಇದೇ ಪಾತ್ರನಿರೂಪಣೆಯ ಕೈಚಳಕ ಯಾಕೋವ, ನಾಟಾಲ್ಯ, ವ್ಯೆರನ್ ಮುಂತಾದವರ ಚಿತ್ರಗಳಲ್ಲಿ ಕೂಡ ನಮಗೆ ಕಾಣಬರುತ್ತದೆ.

ವಿಷಯ ನಿರೂಪಣೆ ಚಾರಿತ್ರಿಕ (Historic Method) ರೀತಿ. ಮೊದಲು ಆರ್ಟಮನೋವ, ಆಮೇಲೆ ಅವನ ಮಕ್ಕಳು ಮೊಮ್ಮಕ್ಕಳ ಜೀವನ. ಆದರೆ ಒಂದಕ್ಕೊಂದಕ್ಕೆ ಎಷ್ಟು ವ್ಯತ್ಯಾಸ, ಅಂತರ ಎಂಬುದನ್ನು ಬಹಳ ಸೊಗಸಾಗಿ ತೋರಿದ್ದಾರೆ ಗಾರ್ಕಿ. ಮೊದಲು ಆರ್ಟಮನೋವ - ಪ್ರಚಂಡ ವ್ಯಕ್ತಿ, ಆತ್ಮ

ವಿಶ್ವಾಸಿ, ಆದರೆ ಹೃದಯರಹಿತ - ಎರಡನೆಯ ತಲೆಮಾರಿಗೆ ಸೇರಿದ ಪ್ಯೆಟರ್, ನಿಕಿಟ ಮತ್ತು ಆಲ್ಯೋಷ. ಮೊದಲ ತಲೆಮಾರಿನ ಆತ್ಮವಿಶ್ವಾಸವಾಗಲೀ ಶಕ್ತಿಯಾಗಲೀ ಇದರಲ್ಲಿಲ್ಲ. ವ್ಯಕ್ತಿಯ ಶಕ್ತಿ ಕುಗ್ಗಿದೆ ಇವರಲ್ಲಿ. ಕಾರ್ಖಾನೆಯ ಜೀವನ ಇವರೆಲ್ಲರನ್ನೂ ಒಂದಿಗೇ ಇಟ್ಟಿದ್ದರೂ ಕೂಡ ಒಬ್ಬರನ್ನೊಬ್ಬರು ಅರ್ಥಮಾಡಿಕೊಳ್ಳದೆ ತಮ್ಮ ತಮ್ಮ ಹಾದಿ ಹಿಡಿದು ಸುತ್ತ ಒಂದು ವಿಚಿತ್ರ ಬಲೆ ನೇಯಲು ಹಾದಿ ಮಾಡಿಕೊಳ್ಳುತ್ತಾರೆ. ಮೂರನೆಯ ತಲೆಮಾರಿಗೆ ಸೇರಿದ ಇಲ್ಯ, ಯಾಕೋವ, ಮ್ಯಿರನ್ ಹಳೆಯ ಪದ್ಧತಿಗಳಿಗೆ ವಿಚಾರವಿಲ್ಲದೆ ತಲೆಬಾಗುವವರಲ್ಲ. ಆದರೆ ಅವರಲ್ಲಿ ಸರಿಯಾದ ಹಾದಿ ತಿಳಿದು ಸಾಮ್ಯವಾದೀ ಸಂಗಡಕ್ಕೆ ಸೇರಿ ಸಮಾಜಕ್ಕೆ ಸೇವೆ ಸಲ್ಲಿಸುವನೊಬ್ಬ ಮಾತ್ರ! - ಇಲ್ಯ! ಇಲ್ಯನು ತನ್ನ ತಾತನಂತೆಯೇ ಛಲವುಳ್ಳವನು ಬಲವುಳ್ಳವನು, ಆತ್ಮವಿಶ್ವಾಸಿ ಆದರೆ ಜನತೆಯನ್ನು ಕೀಳಾಗಿ ಕಾಣುತ್ತಿದ್ದ ತಾತ ಇಲ್ಯನೆಲ್ಲಿ! ಜನತೆಯಲ್ಲಿ ಒಂದಾದ ಕ್ರಾಂತಿಕಾರ ಇಲ್ಯನೆಲ್ಲಿ!

ಈ ಕಾದಂಬರಿಯಲ್ಲಿ ಮೊದಲಿನಿಂದ ಕೊನೆಯವರೆಗೂ ಕಾಣಬರುವುದು ವ್ಯಕ್ತಿವಾದದ ಅವನತಿ ಮತ್ತು ಮುಂಬರಲಿರುವ ಸಮಾಜವಾದದ ಪ್ರಗತಿ. ಬೀದಿಯಲ್ಲಿ ಹುಚ್ಚ ಹುಡುಗ ಹಾಡುವ ಹಾಡು

"Christ is risen, He is risen
And the cart has lost a wheel"

ಇದನ್ನು ನಾವು ಕಾದಂಬರಿಯ ಮುಖ್ಯ ಮಂತ್ರವೆನ್ನಬಹುದು. ಹೇಗೆ ಸಾಮಾನ್ಯ ಜನತೆ ೧೮೬೩ ರ ಹತ್ತಿರದಲ್ಲೇ ವ್ಯಕ್ತಿವಾದವನ್ನು ದ್ವೇಷಿಸುತ್ತಿತ್ತು. ಆದರೆ ಅವರ ದ್ವೇಷ ಹೇಗೆ ನಿರ್ಜೀವವಾಗಿತ್ತು ಎಂಬುದು ಇಲ್ಯಾ ಆರ್ಟೆಮನೋವನನ್ನು ಡ್ರ್ಯೆವೆನ್ ಹಳ್ಳಿಗೆ ಹಳ್ಳಿಯೇ ದ್ವೇಷಿಸುತ್ತಿದ್ದುದರಿಂದ ತಿಳಿಯಬಹುದು. ಕಾಲ ಸಾಗಿದಂತೆ ಆ ದ್ವೇಷ ಹೇಗೆ ಬೆಳೆದು ಸಮಾಜವಾದದಲ್ಲಿ ಕೊನೆಗಂಡಿತು—ಸಾಮ್ಯವಾದಿ ಗುಂಪಿನಿಂದ ಕ್ರಾಂತಿಯಾಯಿತು ಎಂಬುದು ಕೂಡ ಈ ಕಾದಂಬರಿಯನ್ನು ಓದುವುದರಿಂದ ನಮಗೆ ಮನವರಿಕೆಯಾಗುತ್ತೆ. ಪಾಠಶಾಲೆಯ ಉಪಾಧ್ಯಾಯರು ಕೂಡ ಸಾಮ್ಯವಾದಿಗಳಾಗಿದ್ದು ಸೆರೆಮನೆಗೆ ಹೋಗುತ್ತಾರೆ!

ಕಾರ್ಖಾನೆಯ ಗುಲಾಮಗಿರಿಯ ಹಗಲು ಬಾಳು, ಆ ಮೇಲೆ ಸೂಳೆಗಾರಿಕೆಯಲ್ಲಿ ರಾತ್ರಿಯ ಹೇಸಿಗೆ ಬಾಳು, ಹಣಗಾರರ ಸುಖಸಾಧನಗಳು—ಮಾಸ್ಕೋ ಮುಂತಾದ ದೊಡ್ಡ ಪಟ್ಟಣಗಳ ಸೂಳೆಗಾರಿಕೆಯ ಮನೆಗಳು, ಬೆತ್ತಲೆ ನೃತ್ಯಶಾಲೆಗಳು—ಇವುಗಳೆಲ್ಲ ಹೇಗೆ ಅವನತಿ ಹೊಂದಿ ತಮ್ಮಲ್ಲಿಯೇ ತಮ್ಮ ನಾಶ ಬೀಜ ಹುದುಗಿಸಿಟ್ಟುಕೊಂಡಿದ್ದುವೆಂಬುದನ್ನು ಗಾರ್ಕಿಯವರು ಇಲ್ಲಿ ಚಿತ್ರಿಸಿದ್ದಾರೆ. ಹಾಗೆಯೇ ಚರ್ಚುಗಳ ದೈವಭಕ್ತಿಗಿಂತ ಮಿಗಿಲಾದ ಧನಭಕ್ತಿ, ಸಾಮ್ಯವಾದೀ ಪಂಗಡಗಳು ಬಹಿರಂಗವಾಗಿ ಬರಲು ಮಾರ್ಗವಿಲ್ಲದೆ ಗುಪ್ತವಾಗಿಯೇ ಕಾರುಬಾರು ನಡೆಸಿ ಕ್ರಾಂತಿ ತಂದ ರೀತಿ ಇವುಗಳನ್ನು ಈ ಕಾದಂಬರಿಯಲ್ಲಿ ನಾವು ಕಾಣಬಹುದು.

ಕೊನೆಯದಾಗಿ ಗಾರ್ಕಿ ನಮಗಿಲ್ಲಿ ಕೊಟ್ಟಿರುವುದು ಒಂದು ಜೀವನ ಚಿತ್ರವೆಂಬುದನ್ನು ನಾವು ಮರೆಯಬಾರದು. ಈ ಜೀವನ ಚಿತ್ರ ಕೊಡುವುದರಲ್ಲಿ ಗಾರ್ಕಿಯವರು ನಿರಾಶಾವಾದವನ್ನಾಗಲೀ ಇಲ್ಲ ಅತಿ ಆಶಾವಾದವನ್ನಾಗಲೀ ಒಂದು ತತ್ವವನ್ನಾಗಿಟ್ಟುಕೊಂಡಿಲ್ಲ. ಈ ಕಾದಂಬರಿ ಯಾವ ತತ್ವವನ್ನೂ ಪ್ರತಿಪಾದಿಸುವುದಿಲ್ಲ. ಅದರ ಮುಖ್ಯ ಕರ್ತವ್ಯ ಕ್ರಾಂತಿಗೆ ಮೊದಲಿನ ಜೀವನ ಎಷ್ಟು ಕಷ್ಟತರವಾಗಿತ್ತು, ಎಷ್ಟೊಂದು ಹೇಸಿಗೆಯಿಂದ ಕೂಡಿದ್ದು—ಕೊನೆಗೆ ಕ್ರಾಂತಿಯೊಂದರಿಂದಲೇ ಅದರ ಕೊನೆ ಹೇಗಾಯಿತೆಂದು ತಿಳಿಸುವುದು. ಕ್ರಾಂತಿಯ ಹೊಸ ಚಕ್ರಕ್ಕೂ ಹಳಸಿಹೋದ ಹಿಂದಿನ ಹಣಶಾಹೀ ಜೀವನ ಬಂಡಿಗೂ ಹೇಗೆ ಒಗ್ಗುವುದಿಲ್ಲವೆಂಬುದನ್ನು ಗಾರ್ಕಿಯವರು ಕಾದಂಬರಿಯ ಕೊನೆಯಲ್ಲಿ ಪ್ಯೆಟರ್ ಮತ್ತು ನಾಟಾಲ್ಯರ ಕೊನೆಯ ಸಂಭಾಷಣೆಯಲ್ಲಿ ಚಿತ್ರಿಸಿದ್ದಾರೆ.

ಪ್ಯೆಟರ್ ಅನ್ನವಿಲ್ಲದೆ ಸಾಯುವ ಸ್ಥಿತಿ ಬಂದು ಮಲಗಿದ್ದಾನೆ. ನಾಟಾಲ್ಯ ಬಹಳ ಕಷ್ಟಪಟ್ಟು ಒಂದು ತುಣುಕು ರೊಟ್ಟಿಯನ್ನೂ ಸೌತೇಕಾಯಿಯನ್ನೂ ಸಂಪಾದಿಸಿಕೊಂಡು ಬರುತ್ತಾಳೆ. ತನ್ನ ಗಂಡನಿಗಾಗಿ. ಆದರೆ ಮೂರು ಬಾರಿ ಗಂಡನನ್ನ ಬಲವಂತಗೊಳಿಸಿದರೂ ಅವನು ಅವನ್ನು ತಿನ್ನ ಲೊಪ್ಪುವುದಿಲ್ಲ.

"ಕೋಪಿಸಿಕೊಳ್ಳಬೇಡಿ—ಅದನ್ನು ತಿನ್ನಿ" ನಾಟಾಲ್ಯ ಎಂದಳು.

ಆದರೆ ಆರ್ಟೆಮಸೋವ ಅವಳ ಕೈಯನ್ನು ದೂಡಿದನು. ಹಲ್ಲು ಕಚ್ಚಿ, ಕಣ್ಣು ಮುಚ್ಚಿ, ಉಗ್ರಕೋಪದಿಂದ ಮತ್ತೆ ಹೇಳಿದ.

" ನನಗದು ಬೇಕಿಲ್ಲ—ತೆಗೆದುಕೊಂಡು ಹೋಗು "

ಮಹಾಸಾಹಿತಿಗಳ ಜೀವನದಲ್ಲಿ ಕೃತಿಗಳಲ್ಲಿ ಆಯಾ ರಾಷ್ಟ್ರದ - ದೇಶದ - ಮತ್ತು ಜನತೆಯ ಸಂಪೂರ್ಣ ಜೀವನದ ಪ್ರತಿಬಿಂಬವನ್ನು ನಾವು ಕಾಣಬಹುದು.

———:———

# ಗಾರ್ಕಿ ಕಂಡ ರಷ್ಯ *

ಕುಮಾರ ವೆಂಕಣ್ಣ

ಮಹಾಸಾಹಿತಿಗಳ ಜೀವನದಲ್ಲಿ ಆಯಾ ರಾಷ್ಟ್ರದ-ದೇಶದ-ಮತ್ತು ಜನತೆಯ ಸಂಪೂರ್ಣ ಜೀವನದ ಪ್ರತಿಬಿಂಬವನ್ನು ನಾವು ಕಾಣಬಹುದು.

ರಷ್ಯಾದ ಹಿರಿಯ ಸಾಹಿತ್ಯ ಕೃತಿಗಳಲ್ಲಿ ನಾವಿದನ್ನು ಕಾಣುತ್ತೇವೆ. ರಾಷ್ಟ್ರೀಯ ಅನುಭವದ ಹಾಗೂ ಚಿಂತನೆಯ ಅನರ್ಘ್ಯ ಭಂಡಾರದ ಚಿತ್ರ ನಮ್ಮ ಕಣ್ಣಿಗೆ ಕಟ್ಟುತ್ತೆ. ದೇಶದ ಮೇಲಣ ಅಭಿಮಾನ ಪ್ರೇಮ ಅಧಿಕವಾಗುತ್ತವೆ.

ಮ್ಯಾಕ್ಸಿಂ ಗಾರ್ಕಿ ಸೃಜಿಸಿದ ರಷ್ಯದ ಚಿತ್ರ ಅಮರ. ಆ ಕಲಾಕೃತಿ ನಮ್ಮ ಮುಂದಿರಿಸುವ ವಿಚಾರ ಅಪಾರ. ಇಂದಿನ ಸಮರಲೋಕದಲ್ಲಿ ಆ ಕಾಲದ ಸಿಂಹಾವಲೋಕನ ಅನಿವಾರ್ಯ.

ಗಾರ್ಕಿಯ 'ಮದರ್' (ತಾಯಿ) ಮತ್ತು 'ದಿ ಲೈಫ್ ಆಫ್ ಮಾಟ್ವೀ ಕೊರೆವ್ಯಾಕಿನ್' ಎಂಬ ಗ್ರಂಥಗಳಲ್ಲಿ ಓದುಗರು ಎರಡು ಪ್ರತ್ಯೇಕವಾದ ಜಗತ್ತನ್ನು ಕಾಣುತ್ತಾರೆ. ಕೂಲಿಗಾರರ ಭಾವೀ ಜಗತ್ತು, ಗ್ರಾಂಹರ ಜನತೆಯ ಇತಿಹಾಸ, ಪ್ರಗತಿಪರ ಮನೋಭಾವನೆಯ ಸಾಧನೆ 'ಮದರ್' ಕಾದಂಬರಿಯಲ್ಲಿ ಚಿತ್ರಿತವಾಗಿದೆ. ಎರಡನೆಯದರಲ್ಲಿ ಹತ್ತೊಂಭತ್ತನೆಯ ಶತಮಾನದ ಉತ್ತರಾರ್ಧದ ಮಂದವಾದ, ಸ್ಥಿರವಾಗಿದ್ದು ಸಾರುವ ಜೀವನ, ಕದಡಿದ ಭಾವನೆ, ಸಂದೇಹಾತ್ಮಕ ಪ್ರಶ್ನೆಗಳು, ಉತ್ತಮವಾದ ಹಿತವಾದ ಜೀವನದ ಬಗ್ಗೆ ಏಳುವ ಸಂದೇಹಗಳ ತಡೆಗಳು ಚಿತ್ರಿತವಾಗಿವೆ. ಈ ಗ್ರಂಥ ಸಾಹಿತ್ಯ ದೃಷ್ಟಿಯಲ್ಲಿ ಮಹತ್ತಾದುದು. ಆದರೆ ಸಾಕಷ್ಟು ಪ್ರಸಾರಗೊಂಡಿಲ್ಲ. ಈ ಕೃತಿಯ ಆವರಣದೊಳಗೆ ಸ್ಥಿಮಿತಚಿತ್ರದ ಅಂತರಾಳವಲ್ಲಿ ಇನ್ನೊಂದು ಚಿತ್ರವನ್ನು ಗಾರ್ಕಿ ಸೆಯ್ದಿದಾನೆ. ಹಳೆಯ ಗ್ರಾಮ್ಯಜೀವನ, ಅದರ ಮೇಲಣ ಅಭಿಮಾನ, ಬದಲಾಗಲು ನಿರಾಕರಿಸುವ ನೀತಿ, ಹಳೆಯದನ್ನೇ ಭದ್ರವಾಗಿ ಹಿಡಿವ ಆಸೆ ಇವುಗಳಿಂದ ಎಲ್ಲರಿಗೆ ಅರಿವಾಗಬಹುದಾದ ಭಾವನೆಯೆಡೆ, ಉಜ್ವಲ ನೀತಿಯೆಡೆ, ಎಲ್ಲರನ್ನೂ ಒಂದಾಗಿ ಕೂಡಿಸಬಲ್ಲ ರೀತಿಯೆಡೆ ತಿರುಗಿಸುವಾಗ ಉಂಟಾಗುವ ಘರ್ಷಣಗಳ ಚಿತ್ರ ಕಣ್ಣಿಗೆ ಕಟ್ಟುತ್ತದೆ.

ಗಾರ್ಕಿಯ ಕೃತಿಗಳನ್ನು ಹೆಚ್ಚುಹೆಚ್ಚಾಗಿ ವಿಮರ್ಶಿಸಿದಂತೆಲ್ಲಾ ಭೀಷಣ ಬಿರುಗಾಳಿಗೆ ಒಳಗಾದ ಆ ಕಾಲದ ರಷ್ಯದ ಇತಿಹಾಸವೇ ನಮ್ಮ ಮುಂದೆ ನಿಲ್ಲುತ್ತದೆ. ಇವನ "ನನ್ನ ವಿಶ್ವವಿದ್ಯಾನಿಲಯಗಳು" ಎಂಬ ಕೃತಿ ಈ ಮಾತನ್ನು ಇನ್ನೂ ಹೆಚ್ಚು ಸ್ಪಷ್ಟಪಡಿಸುತ್ತದೆ.

ರಷ್ಯದ ನಾನಾಮುಖವಾದ ಪರಿಸ್ಥಿತಿ ಗಾರ್ಕಿಯ ಕೃತಿಗಳಲ್ಲಿ ಚಿತ್ರಿಸಲ್ಪಟ್ಟಿವೆ. ಸಮಕಾಲೀನ ರಷ್ಯದ ಜನಜೀವನದಲ್ಲಿ ಉಂಟಾಗುತ್ತಿದ್ದ ಅಭೂತಪೂರ್ವ ಬದಲಾವಣೆಗಳು, ಅದರ ಅನುಭವಗಳು ಇಲ್ಲಿ ಕಾಣುತ್ತಿವೆ. ರಷ್ಯ ವಿಶಾಲ ಮತ್ತು ಸಮಸ್ಯಾತ್ಮಕ. ಅಲ್ಲಿನ ಭೀಷಣ ರಾಜಕೀಯ ಬದಲಾವಣೆಗಳು ಗಾರ್ಕಿಯ ಜನತಾದೃಷ್ಟಿಯಿಂದ ಕ್ರೋಢೀಕರಿಸಲ್ಪಟ್ಟಿವೆ. ಜನತೆ ಇಂತಹ ಸಂದರ್ಭಗಳಲ್ಲಿ ಯಾವ ಒಂದು ಭಾವನಾಮಥನದಲ್ಲಿ, ಅಸ್ಥಿರ ಚಿತ್ತದಲ್ಲಿ ಇರಬಹುದೆಂಬುದನ್ನು ಗಾರ್ಕಿಯ ಕೃತಿಗಳಲ್ಲೇ ನೋಡಬೇಕು.

ವಿಚಿತ್ರವೂ ವಿವಿಧವೂ ಆದ ಶಕ್ತಿಗಳು ಧ್ಯೇಯಗಳು ಸಾಧನೆಗಳು, ಅವುಗಳ ಚಂಡಮಾರುತ ರೂಪ, ರಷ್ಯನರ ಅದ್ಭುತ ಬುದ್ಧಿಸಾಮರ್ಥ್ಯ, ಅವರ ಜೀವನದಲ್ಲಿ ಪ್ರಕಟವಾಗುತ್ತಿದ್ದ ಅಪಾರ ಉತ್ಸಾಹ ಇವೆಲ್ಲವುಗಳನ್ನು ಕಂಡ ಗಾರ್ಕಿ ರಷ್ಯದ ಜೀವನ "ಅತ್ಯಮೋಘ" ಎಂದಿದ್ದಾನೆ. ಈ ಹಿನ್ನೆಲೆಯಿಂದಲೇ ಇಡೀ ರಷ್ಯದ ಸಾಹಿತ್ಯದ ಬೆಳವಣಿಗೆಗಾಗಿ, ಗಾರ್ಕಿಯ ಕೃತಿಗಳ ಸೃಷ್ಟಿಯಾಗಿದೆ ಎಂದು ಹೇಳಬಹುದು. ತನ್ನ ಕವಿತಾ ಸಾಮರ್ಥ್ಯದಿಂದ ಚೆಕಾಫ್ ದೇಶದ ಭವ್ಯ ಭವಿತವ್ಯವನ್ನು ಕಂಡ. ಅದನ್ನು ರೂಪುಗೊಳಿಸಲು ಹೋರಾಡಿದ. "ಜೀವನ ದೀರ್ಘ, ಹಿತ ಅಹಿತಗಳಿಗೆ ಅಲ್ಲಿ ಇನ್ನೂ ಸ್ಥಾನವಿದೆ. ತಾಯಿ ರಷ್ಯಾದೇಶ ಇದೆಲ್ಲಕ್ಕೂ ಸಾಕಷ್ಟು ವಿಶಾಲವಿದೆ" ಎಂಬ ಚೆಕಾಫನ ವಾಣಿ ಗಾರ್ಕಿಯ ಜೀವನದಲ್ಲಿ, ಕೃತಿಯಲ್ಲಿ, ಹೋರಾಟದಲ್ಲಿ ಅಮರತ್ವವನ್ನು ಪಡೆದಿದೆ.

ಗಾರ್ಕಿಯಲ್ಲಿ ಚೆಕಾಫನ ನುಡಿಗಳೆಷ್ಟು ಪರಿಣಾಮಕಾರಿಯಾದುವೆಂಬುದನ್ನು ಅವನ ಕೃತಿಗಳಿಂದಲೇ ನೋಡಬಹುದು. "ಲೈಫ್ ಆಫ್ ಮೊಟ್ವೇ ಕೊಂ ಮ್ಯಾಕಿನ್" ಎಂಬ ಗ್ರಂಥದಲ್ಲಿ "ರಷ್ಯ ಅಪಾರ, ಮಹತ್ತಾದುದು, ಹಿತವಾದುದು ಮೋಟ್ವಿ! ತಾಯಿ ರಷ್ಯ ವಿಶಾಲ. ಈಗ ಸ್ವಾತಂತ್ರ್ಯ-ವಿಶಾಲವಾದುದು. ಹೊಸ ಜೀವನ ಆಕೆ ಆರಂಭಿಸಿದಾಗ ನೀ ನೋಡುವೆಯೆಂತೆ

ಎಂತಹ ಹೆಮ್ಮೆಯಿಂದ ಮುನ್ನಡೆಸಳೆಂದು!" ಎಂದು ತನ್ನ ನವ ರಷ್ಯದ ಭಾವೀ ಕನಸನ್ನು ಕಂಡಿದಾನೆ.

ರಷ್ಯದ ಜನಜೀವನವನ್ನು ಆಳವಾಗಿ ಅಭ್ಯಸಿಸಿ ಅನುಭವಿಸಿ ಅದರ ಸಾರಸರ್ವಸ್ವವನ್ನು ಗಾರ್ಕಿಯಂತೆ ಮತ್ತಾವ ರಷ್ಯನ್ ಲೇಖಕನೂ ನಮಗೆ ಕೊಟ್ಟಿಲ್ಲ. ಜನತೆಯ ಹೃದಯದಲ್ಲಾಗುತ್ತಿದ್ದ ಆಲ್ಲೋಲಕಲ್ಲೋಲ, ಅದು ಪ್ರಗತಿಯೆಡೆ ಸರಿಯಲು ಹವಣಿಸುತ್ತಿದ್ದುದು, ಆ ಮುನ್ನಡೆಯ ನಿರ್ದಿಷ್ಟ ಧ್ಯೇಯ ಇವೆಲ್ಲ ಅವನ ಕೃತಿಗಳಲ್ಲಿ ತೀಕ್ಷ್ಣವಾಗಿ ನಿರೂಪಿತವಾಗಿವೆ. ಗಾರ್ಕಿಯು ಚಿತ್ರಿಸಿದ ರಷ್ಯ ಸೋವಿಯಟ್ ರಷ್ಯನ್ ಜನತೆಯ ಇಂದಿನ ಅಸಮಾನ ಶಕ್ತಿ, ತ್ಯಾಗ, ಸಾಹಸ; ಕೆಂಪು ಸೇನೆಯ ಅಮರ ಶೌರ್ಯಗಳ ಗೂಢವನ್ನು ತಿಳಿಯಲು ಸಹಾಯಕವಾಗಿದೆ. ಜರ್ಮನ್ ಫಾಸಿಸ್ಟ್ ಶಕ್ತಿಯನ್ನು ಇದುರಿಸಿ ಹುಡಿಗೂಡಿಸಿದ ರಷ್ಯನ್ ಜನತೆಯ ತೇಜೋಬಲದ ಮೂಲವನ್ನು ನಮ್ಮ ಮುಂದಿಟ್ಟಿದಾನೆ ಗಾರ್ಕಿ.

ಗಾರ್ಕಿ ಚಿತ್ರಿಸಿದ ರಷ್ಯದ ಆಂದೋಲನ, ಕ್ರಾಂತಿ, ದೇಶದ ಪರಿಸ್ಥಿತಿ ಇಂದಿನ ಯುದ್ಧಕಾಲದ ರಷ್ಯದ ಪರಿಸ್ಥಿತಿಗೆ ಸಂಪೂರ್ಣ ಬೇರೆಯಾಗಿದೆ. ೧೯೦೫ರ ರಷ್ಯನ್ ಕ್ರಾಂತಿಕಾಲದ ಜನತೆಯ ಅಂತರಾಳವನ್ನು ಚಿತ್ರಿಸಿ ಕ್ರಾಂತಿಗಾಗಿ ಮೊದಲು ಗಾರ್ಕಿ ಜನತೆಯನ್ನು ಸಿದ್ಧಮಾಡಿದ. ಮುಂದೆ ೧೯೧೭ರ ಕ್ರಾಂತಿಗೂ ಜನತೆಯನ್ನು ನಡೆಸಿ, ಜಾಗೃತಗೊಳಿಸಿ, ಕ್ರಾಂತಿಯನ್ನು ಸಫಲವಾಗುವಂತೆ ಮಾಡಿ ಸೋವಿಯಟ್ ಸರಕಾರದ ಸ್ಥಾಪನೆಯೆಡೆಗೆ ಜನತೆಯನ್ನು ಮುನ್ನಡೆಸಿದ ಕೀರ್ತಿ ಗಾರ್ಕಿಗೂ ಇದೆ! 'ಬೈಸ್ಟಾಂಡರ್'ನ ಕರ್ತನಾದ ಗಾರ್ಕಿ ಮುಂದಿನ ವರ್ಷಗಳಲ್ಲಾಗಬಹುದಾದುದನ್ನೆಲ್ಲ ಚಿತ್ರಿಸಿ ಜನತೆಗೆ ದಾರಿ ತೋರಿದಾನೆ. ಇಂದಿನ ಯುದ್ಧ ಹಿಂದಿನದಕ್ಕಿಂತ ಬೇರೆಯಾದರೂ ಒಂದು ವಿಚಾರದಲ್ಲಿ ಎರಡೂ ಒಂದೇ. ಅಂದಿನ ಸಮರದಂತೆ ಇಂದಿನದೂ ಸರ್ವಜನತೆಯ ಸರ್ವಶಕ್ತಿ ಸಾಮರ್ಥ್ಯಗಳನ್ನು ಅಪೇಕ್ಷಿಸಿದೆ. ೧೯೦೫ರಿಂದ ೧೯೧೭ರ ಕಾಲದಂತೆ ಇಂದಿನ ೧೯೪೧-೪೪ರ ಸಮರ ಜನತೆಯ ಸತ್ವಪರೀಕ್ಷೆಯನ್ನು ನಡೆಸಿ, ದೇಶದ ಆತ್ಮಶಕ್ತಿಯನ್ನೂ, ಸುಪ್ತವಾದ ಅಮೋಘ ತೇಜಸ್ಸನ್ನೂ ಹೊರಗೆಡವಿದೆ.

ಈ ಸಂದರ್ಭದಲ್ಲಿ ಒಂದು ವಿಚಾರವನ್ನು ನಾವು ಮರೆಯಬಾರದು.

ಯುದ್ಧ ದೇಶದ ಸತ್ವಪರೀಕ್ಷೆಯನ್ನು ಮಾಡುವದರೊಡನೆ ಜನಜೀವನ ಸಂಸ್ಕೃತಿಗಳನ್ನು ತನ್ನ ಮೂಸೆಯಲ್ಲಿಕ್ಕಿ ಪವಿತ್ರಗೊಳಿಸುತ್ತದೆ. "ಸಾಮಾನ್ಯ ಚಿಕ್ಕಪುಟ್ಟ, ಬಾಹ್ಯ, ಕೃತಕವಾದ ಎಲ್ಲವನ್ನೂ ದುರಂತಗಳು ಎದುರಿಸಿ ಅಂತರ್ಯಾದ ಅಂತರಾಳದಲ್ಲೇನಿದೆ ಎಂಬುದನ್ನು ಪ್ರಕಾಶಗೊಳಿಸುತ್ತವೆ. ಉದಾಹರಣೆಗಾಗಿ ಯುದ್ಧದಂತಹ ದುರಂತವನ್ನೇ ತೆಗೆದುಕೊಳ್ಳೋಣ. ಎಲ್ಲ ರಾಜಕೀಯ ಪಕ್ಷಗಳೂ, ಸಂಸ್ಥೆಗಳೂ ಅಗ್ನಿಪರೀಕ್ಷೆಗೆ ಒಳಗಾಗುತ್ತವೆ. ಸಂಸ್ಥೆಗಳ, ಸಂಘ ಸಮಾಜಗಳ, ರೀತಿನೀತಿಗಳ ಶಕ್ತಿ-ಅಶಕ್ತಿಗಳೆಲ್ಲಾ ಆಯಾ ಯುದ್ಧದ ಫಲದಿಂದ ನಿರ್ಧರವಾಗುತ್ತವೆ" ಎಂದಿದಾನೆ ಲೆನಿನ್.

ಈ ನುಡಿಯ ಸತ್ಯತೆ ಇಂದಿನ ಸಮರದಿಂದ ಲೋಕಕ್ಕೆ ವಿಶದವಾಗಿದೆ. ಅನಿರೀಕ್ಷಿತವಾದ ಯುದ್ಧವನ್ನು ಎದುರಿಸಿ ವೈರಿಯನ್ನು ಸದೆಬಡೆದ ಜಗತ್ತಿನ ಏಕಮಾತ್ರ ರಾಷ್ಟ್ರ ರಷ್ಯಾ! ಅಂದಮೇಲೆ ಅದರ ರಾಜಕೀಯ ಪಕ್ಷ, ಆಡಳಿತದ ಶಕ್ತಿ, ಜನಜೀವನದ ಶ್ರೇಷ್ಠತೆ, ರೀತಿನೀತಿಗಳ ಮಹತ್ವ ಅರಿವಾಗದಿರದು. ಮಾನವಸಮಾಜದ ಇತಿಹಾಸದಲ್ಲೇ ಅಸಮಾನವಾದ ಯುದ್ಧದ ಪರೀಕ್ಷೆಯಲ್ಲಿ ಸೋವಿಯಟ್ ಜನತೆ ಉತ್ತೀರ್ಣರಾಗಿದಾರೆ. "ಅಂತರಾಳದ ಅಸ್ತಿವಾರ" ಎಲ್ಲರ ಮುಂಪೆ ಬಿಡಿಸಲ್ಪಟ್ಟಿದೆ. ಇಂದಿನ ಅವರ ಪ್ರತಿಯೊಂದು ಗೆಯ್ಮೆಯೂ ರಷ್ಯನ್ ಜನತೆ, ಸಂಸ್ಥೆ, ಜನಜೀವನ ಹಾಗೂ ಸಂಸ್ಕೃತಿಯನ್ನು ಸತ್ಯದ ಹಾದಿಯಲ್ಲಿ ನಡೆಸಿದೆ.

ಪರಿಸ್ಥಿತಿ ಬಿರಿಯುವ ದಿನ ಹತ್ತಿರವಾಗುತ್ತಿತ್ತೆ ಎಂತ ಗಾರ್ಕಿ "ಚೆಲ್ಕಾಷ್"ನಲ್ಲಿ ನಂಬಿದಾನೆ. "ಸುತ್ತಲಿನ ಎಲ್ಲವೂ ಬಿರುಗಾಳಿಯಾಗುವ ಭೀಷಣವಾಗುವ ಪರಿಸ್ಥಿತಿಗೆ ಬಂದಿದೆ" ಎನ್ನುತ್ತ ಮುಂದೆ ಇನ್ನೊಂದು ಕೃತಿಯಾದ "ಒಮ್ಮೆ ಮಾನವರಾಗಿದ್ದ ಜೀವಜಂತುಗಳು'' ಎಂಬುದರಲ್ಲಿ "ಕಂದು ಬಣ್ಣದ ಸದೃಢ ಮೋಡಗಳು ಇಡೀ ಆಕಾಶವನ್ನೇ ಹರಡಿಕೊಂಡಿವೆ. ಭೀಷಣ ಬಿರುಮಳೆ ಸುರಿಸಲು ಯತ್ನಿಸುವಂತೆ ಒಂದುಗೂಡುತ್ತಿವೆ ಈ ಕಾರ್ಮೋಡಗಳು. ಇಂದಿನ ದುಃಖಮಯ, ಸಂಕಟಮಯ, ವಿಷಾದ ಜಗತ್ತಿನ ಎಲ್ಲ ಕೊಳೆಯನ್ನು ಕೊಚ್ಚಿಕೊಂಡೊಯ್ಯುವ ಸೂಚನೆ ಕೊಡುತ್ತಿವೆ" ಎಂದು ಗಾರ್ಕಿ ಕ್ರಾಂತಿಯ ಉದಯವನ್ನು ನೋಡಿದಾನೆ. ಈ ಕತೆಯನ್ನು ನೋಡಿ ಚೆಸ್ಟರ್‌ಟನ್ "ಜಗತ್ತು ಎಂದೂ ಕಂಡಿರದ ಪ್ರಜಾಸತ್ತಾತ್ಮಕ ಪ್ರಜಾಸತ್ತೆ

ರಷ್ಯದಲ್ಲಿ ತಲೆ ಎತ್ತುವುದು" ಎಂತ ಸಾರಿದಾನೆ. ಆದರೆ ಆ ಪ್ರಜಾಸತ್ತೆ ಅತ್ಯಂತ ಉತ್ಸಾಹಮಯ"ವಾದುದಾಗುತ್ತೆ ಎಂತ ಗಾರ್ಕಿ 'ಮದರ್' ನಲ್ಲಿಯೇ ಹೇಳಿದಾನೆ.

ಸಾಹಿತ್ಯ ಒಂದು ದೇಶದ, ಜನಾಂಗದ, ಪ್ರಗತಿಗೆ ಸ್ವಾತಂತ್ರ್ಯಕ್ಕೆ ಎಷ್ಟು ಸಹಾಯಕವಾಗಬಲ್ಲುದು ಎಂಬುದನ್ನು ಗಾರ್ಕಿಯ ಕೃತಿಗಳೂ ಇಂದಿನ ರಷ್ಯವೂ ಜಗತ್ತಿಗೆ ತೋರಿಸಿಕೊಟ್ಟಿವೆ. ಶಿಥಿಲವಾಗುತ್ತಿದ್ದ ಜೀವನ, ನೀತಿ ರೀತಿಗಳೆಡೆ ತನ್ನ ಗಮನ ಹರಿಸಿ ಗಾರ್ಕಿ ಜನತೆಗೆ ತಮ್ಮ ನೂರಾರು ಸಾಮಾಜಿಕ ಸಂಕಲೆಗಳನ್ನು ಕಿತ್ತೊಗೆದು ಮುನ್ನಡೆದು ಸ್ವತಂತ್ರರಾಗುವ ಮಾರ್ಗ ತೋರಿದಾನೆ. ಸಮಾಜದ ಕೆಲವ್ರೊಂದು ಮಂದಿ ಅಧಿಕ ಮಂದಿಯನ್ನು ಮೆಟ್ಟನಿಂದರೆ ಆ ಕೆಲವರ ಗತಿ ಏನಾಗಬಹುದೆಂಬುದನ್ನು ಮೊದಲೇ ಎಚ್ಚರಿಸಿದಾನೆ ಗಾರ್ಕಿ. ಸಮಾಜದ ಕುರುಡುನೀತಿ, ಅಂಧಶ್ರದ್ಧೆ, ಅನವಶ್ಯಕವಾದ ಪದ್ಧತಿ, ಅಪ್ರಯೋಜಕವಾದ ಕಾರ್ಯ ನಮ್ಮ ಜನಾಂಗದ ಸೌಂದರ್ಯ, ಅಪೂರ್ವ ವ್ಯಕ್ತಿತ್ವ, ಕಲೆ, ಭಾವನೆ – ಸಂಸ್ಕೃತಿಗಳನ್ನು ಹೇಗೆ ಹಿನ್ನಡೆಸಲು ಯತ್ನಿಸಬಲ್ಲುವು ಎಂಬುದನ್ನು ಅತ್ಯಂತ ಪರಿಣಾಮಕಾರಕ ರೀತಿಯಿಂದ ತೋರಿದಾನೆ ಗಾರ್ಕಿ.

ಅತ್ಯಂತ ಹಿಂದುಳಿದು ದೇಶದ-ಸಮಾಜದ-ಪ್ರಗತಿಯಲ್ಲಿ ಯಾವ ಭಾಗವನ್ನೂ ವಹಿಸದೆ ತಾಟಸ್ಥ್ಯ ಧೋರಣೆ ವಹಿಸಿದ ಜನತೆ ಕೂಡಾ, ದೇಶದ ಪ್ರಗತಿಯ ಸಂಧಿಕಾಲ ಬಂದಾಗ ಯಾವ ರೀತಿ ಜಾಗ್ರತರಾಗಿ ದುಡಿಯಬಲ್ಲರು ಎಂಬುದನ್ನು 'ಮದರ್' ನಲ್ಲಿ ಗಾರ್ಕಿ ಚಿತ್ರಿಸಿದಾನೆ. ಈ ರೀತಿ ಮುನ್ನಡೆಯುತ್ತ ೧೯೦೫ರ ನಂತರದ ಇಡೀ ರಷ್ಯದ ಚಿತ್ರವನ್ನೇ ಚಿತ್ರಿಸಿ, ಕ್ರಾಂತಿಗೆ ತೊಡಕಾಗುವ ತಾಟಸ್ಥ್ಯ ನೀತಿಗಳನ್ನೆಲ್ಲ ಚಿತ್ರಿಸಿ, ಜನಜಾಗ್ರತಿಗೊಳಿಸಿದಾನೆ. ಅನಿವಾರ್ಯವಾದ ಸೋಲು, ಅಡ್ಡಿ, ಆತಂಕಗಳಿಗೂ ಹಿಮ್ಮೆಟ್ಟದೆ, ನಿರಾಶರಾಗದೆ ಜನತೆ ಮುನ್ನಡೆಯಬೇಕು. ವೈರಿಗಳಿಗೆ ಯಾವ ರೀತಿಯಿಂದಲೂ ವಿಜಯಕ್ಕೆ ಆಸ್ಪದಕೊಡದೆ ಹೋರಾಡಬೇಕು. "ಗಾಳಿಯಿಂದ ಹಾರಾಡಿ ಕೊಚ್ಚೆಯಲ್ಲಿ ಬಿದ್ದ ಬೀಜ ಬೇರುಬಿಟ್ಟು ಸಸಿಯಾಗಲು ಆಸ್ಪದವಿಲ್ಲದೆ ಅಳಿಯಬಹುದು." "ಆದರೆ, ಯಾವುದೋ ಒಂದು ಶಕ್ತಿ ನನ್ನನ್ನು ಹೊಸತೊಂದು ದಾರಿ ಹಿಡಿವಂತೆ ಮಾಡಿದೆ. ಆ ದಾರಿ ನಾ ತಿಳಿದಿಲ್ಲ. ಆದು ದೂರವಿದೆ.

ಆದರೆ, ಸಾವಿನೆಡೆಗೂ ನಡೆಯಲು ಸಿದ್ಧನಾಗಿ ನಾ ಇದುವರೆಗೆ ನಡೆದ ದಾರಿ ಗಿಂತ ಇದು ಹೆಚ್ಚಿನದು, ಮೇಲಿನದು. ಕಾರಣ ; ಎಲ್ಲರೂ ಅದೇ ದಾರಿಯಲ್ಲಿ ಸಾಗುತ್ತಿದ್ದಾರೆ. ಜನತೆಯ ದಾರಿ ಇದು. ಮುನ್ನಡೆಯುವುದೇ ಜೀವನದ ನಿಜವಾದ ಧ್ಯೇಯ."

ಗಾರ್ಕಿಯ ಈ ಅಮರ ಧ್ಯೇಯ ಇಂದಿನ ನಮ್ಮ ಜೀವನದಲ್ಲಿ ಮಾರ್ಗ ದರ್ಶಕವಾಗಿದೆ. ಜನ ನಡೆದ ದಾರಿ ನಮ್ಮ ದಾರಿಯಾಗಲಿ, ಜನತೆಯನ್ನು ಮೆಟ್ಟಿದ ಕೆಲವರ ದಾರಿಯಲ್ಲಿ ನಾವೇನೋ ನಡೆದಿಲ್ಲವೆಂದಲ್ಲ. ಇಂದಿಗೆ ಆ ದಾರಿ ಬಿಡೋಣ. ದೇಶದ ರಾಜಕೀಯ ಪಕ್ಷಗಳಲ್ಲಿ ಯಾವದರ ಹಿಂದೆ ಲೇಖಕ ನಿಲ್ಲಬೇಕು ಎಂಬುದನ್ನು ಗಾರ್ಕಿಯ ಈ ನುಡಿಯಿಂದ ಅರ್ಥಮಾಡಿ ಕೊಳ್ಳಬಹುದು. ತನ್ನ ಸಮಾಜದ ಯಾವ ಅಂಗವನ್ನು ಕಂಡರೂ ಇದೇ ಅಭಿಪ್ರಾಯಕ್ಕೆ ಮುಟ್ಟಿದಾನೆ ಗಾರ್ಕಿ. ಯಾವ ಮೂಲೆಯಲ್ಲಿಣಿಕಿದರೂ, ಸಮಾಜದ ದುರಂತ ಕಣ್ಣುಮುಂದೆ ನಿಂತಿದೆ. ಅದನ್ನು ಸುಧಾರಿಸುವ ಮಾರ್ಗದ ಬಗ್ಗೆ ವಿವೇಚಿಸಿದಾಗಲೆಲ್ಲ ಒಂದೇ ದಾರಿಯನ್ನಾತ ಕಂಡಿದಾನೆ. ಅದು ಲೆನಿನ್‌ನ ದಾರಿ. ಸ್ಟಾಲಿನ್‌ನ ದಾರಿ! ಮಾರ್ಕ್ಸ್-ಏಂಗೆಲ್ಸ್ ತತ್ವ.

"ಪರಿಸ್ಥಿತಿ ನನ್ನನ್ನು ಅತ್ತಿಂದಿತ್ತ-ಇತ್ತಿಂದತ್ತ ಆಡಿಸಿದೆ. ಒಂದೆಡೆ ಯಿಂದ ಇನ್ನೊಂದೆಡೆ ಸರಿಸಿದೆ. ತನ್ನ ವಿಚಿತ್ರ ನೀತಿಯ ಅರಿವು ಮಾಡಿ ಕೊಟ್ಟಿದೆ. ಅದೇನೂ ಶಾಶ್ವತವಾಗಿ ಇರುವಂತಹದಲ್ಲ ಎಂಬುವನ್ನು ಖಚಿತ ಮಾಡಿಕೊಟ್ಟಿದೆ.'' "ಮಾನವನ ಉತ್ಸಾಹ ಮತ್ತು ಜ್ಞಾನ್ಯ ಜನತೆಯಿಂದಲೇ ಉಗಮವಾಗುತ್ತದೆ. ಆದರೆ ಆ ಮಹಾಜ್ಞಾನವೆಲ್ಲ ಬಂಡವಲಿಗನ ಪಾಲಾಗಿ ಜನತೆಯ ಏಳಿಗೆಗಾಗಿ ಸಾಧನ ಮಾಡದಂತೆ ತಡೆದು ನಪುಂಸಕತೆ, ಅನೀತಿ, ಮೌಢ್ಯ ಅಕೃತ್ಯಗಳ ಉಗಮಕ್ಕೆ ಕಾರಣವಾಡುತ್ತದೆ." "ನಮ್ಮ ಬುದ್ಧಿ ಜೀವಿಗಳಲ್ಲಿ ಹೆಚ್ಚಿನವರು ಪುಸ್ತಕ ಪಿಶಾಚಿಗಳು. ಅಲಸಿಗಳು, ಹೆಮ್ಮೆ ಹೇಳಿ ಕೊಳ್ಳುವವರು. ಜನತೆಯನ್ನು ಹೇಡಿತನದ ಹಾಗೂ ಅಹಂಕಾರದ ದೃಷ್ಟಿ ಯಿಂದ ನೋಡುವವರು. ಅಪ್ರಯೋಜಕವಾದ ಅಸಂಬದ್ಧ ನುಡಿಗಳಿಂದ ಜನತೆಯ ಏಳಿಗೆ ಬಯಸುವದಾಗಿ ತೋರಿ, ಹಾರ ಹಾಕಿಸಿಕೊಂಡು ಮೆರೆ ದಾಡುವ ವಂಚಕರು. ಜನತೆಯ ಬಗ್ಗೆ ಚಿಂತಿಸುವುದೂ ಅವರ ದೃಷ್ಟಿಯಲ್ಲಿ ಹೀನ. ಶತಮಾನಗಳ ಸುಪ್ತಾವಸ್ಥೆಯಿಂದ ಜನತೆ ಎಚ್ಚತ್ತು ಜಾಗೃತರಾಗಿ

ಮುನ್ನಡೆದರೆ ಅದು ಅಪ್ರಾಸಂಗಿಕ ಅಸಂಬದ್ಧ. ಆದರೆ ಈ ಅನೀತಿಯು "ಜ್ಞಾನ" ಜನತೆಯು ಚಳುವಳಿಯನ್ನು ತಡೆಯಲಾರದು. ಇಂದಾಗಲಿ ಮುಂದಾಗಲಿ ಅವರು ಜನತೆಯನ್ನು ಸೇರಿಕೊಳ್ಳಬೇಕು – ಬಾಳಬೇಕು. ಇಲ್ಲ ವಾದರೆ ಜನತೆಯ ಜಾಗೃತಿಯ ಪ್ರವಾಹ ಅವರನ್ನು ಕೊಚ್ಚಿಕೊಂಡು ಮುನ್ನಡೆ ಯುವುದು ಖಚಿತ! ಅಥವಾ ನಾಶಪಡಿಸಲೂ ಬಹುದು ಎಂತ ಗಾರ್ಕಿ ಎಚ್ಚ ರಿಕೆ ಕೊಟ್ಟಿದ್ದಾನೆ.

ಇಂತಹ ದುರಂತವನ್ನೂ ಹಾದು ರಷ್ಯಾ ವಿಜಯಶಾಲಿಯಾಗಿ ಎದ್ದು ನಿಲ್ಲುವುದೆಂದು ಗಾರ್ಕಿಗೆ ಖಚಿತವಾಗಿ ತಿಳಿದಿತ್ತು. ಸಾಮಾನ್ಯ ರಷ್ಯನ್ ಜನತೆಯ ಹೃದಯ ಶುದ್ಧವಾದುದು, ನಿಷ್ಕಳಂಕವಾದುದು, ತಾರುಣ್ಯತೆಯ ತೇಜವುಳ್ಳದ್ದೆಂದೂ ಅದು ಜಾಗೃತವಾಗಿ ಕ್ರಿಯಾತ್ಮಕ ಶಕ್ತಿಯಾಂತು ಪರಿ ಪಕ್ವ ಮಾನವ ಮಟ್ಟವನ್ನೇರುವುದೆಂಬ'' ವಿಶ್ವಾಸವಿತ್ತು ಗಾರ್ಕಿಗೆ.

ರಷ್ಯದ ವೈವಿಧ್ಯಮಯ ಜನಜೀವನ, ಸಮಸ್ಯಾತ್ಮಕ ಜಟಿಲ ಸಮಸ್ಯೆ, ಅಸಮಾನ ಪ್ರವಾಹದಂತೆ ಆಗುತ್ತಿದ್ದ ಜಾಗೃತಿಗಳನ್ನು ವಿವೇಚಿಸಿ ಅವುಗಳನ್ನು ಸರಿದಾರಿಗೆ ತರುವ ಮಾರ್ಗವನ್ನು ಲೆನಿನ್ ತೋರಿದ. ಗಾರ್ಕಿ ಈ ದಾರಿ ಯನ್ನು ಸಾಗುವ ಎಲ್ಲ ಉಪಾಯಗಳನ್ನು ತಿಳಿಸಿ ಜನತೆಯ ನಡೆಯಲ್ಲಿ ಬರ ಬಹುದಾದ ಎಡರುಗಳನ್ನು ತೊಡೆದುಹಾಕುವ ಉಪಾಯವನ್ನು ವಿವೇಚಿಸಿ ಅವರನ್ನು ಮುನ್ನಡೆಸಿದ.

ಹಿಂದಿನವರ ವಿವೇಚನೆಯಿಂದ ಮುಂದಿನ ದಾರಿಗೆ ಬೇಕಾದ ಬೆಳಕನ್ನು ಸೃಜಿಸಿದಾನೆ ಗಾರ್ಕಿ ತನ್ನ ಕೃತಿಗಳಿಂದ. ವಿವಿಧ ಕಾಲಗಳಲ್ಲಿ ಮಹಾ ಸಾಹಿತಿಗಳು ಆ ಕಾಲದ ಪರಿಸ್ಥಿತಿಯನ್ನು ವಿವೇಚಿಸಿದ್ದಾನೆ, ಚಿತ್ರಿಸಿದ್ದಾನೆ. ಬಾಲ್‌ಜ಼ಾಕ್ ಕೂಡ ಭೀಷಣ ಬಿರುಗಾಳಿಗೆ ನಿಂತ ಚಿತ್ರ ತಂದು ಕೊಡುತ್ತಾನೆ. ಹೊಸ ಜೀವನವೆಡೆ ಭೀಕರ ದಾರಿ ಹಾದು ನಡೆವ ಉಪಾಯ ಸೂಚಿಸಿಲ್ಲ. "ರಷ್ಯದ ಇತಿಹಾಸ ಏಳು ಯೋಜನ ವೇಗದಿಂದ ಮುನ್ನಡೆ ಯುತ್ತಿದೆ'' ಎಂತ ೧೯೦೨ರಲ್ಲಿ ಲೆನಿನ್ ಹೇಳಿದ ನುಡಿಗನುಗುಣವಾಗಿ, ಮುನ್ನಡೆದ ಅಮರ ಸಾಹಿತಿ ಗಾರ್ಕಿ. ತನ್ನ ಈ ಮುನ್ನಡೆಯಲ್ಲಿ ದಲಿತ ಅಶಾಂತ ಜನತೆಯನ್ನು ನೋಡಿದಾನೆ ಗಾರ್ಕಿ. ಅದು ಒಂದು ಚಿತ್ರವಲ್ಲ–

ನೂರು. ಮೂಕಚಿತ್ರವಲ್ಲ - ಪ್ರತಿಯೊಂದೂ ತಮ್ಮ ದುರಂತವನ್ನು ಸಾವಿರ ನಾಲಗೆಗಳಲ್ಲಿ ತೋಡಿಕೊಳ್ಳುವಂತಹವು. ಈ ಹೊಸ ಹುಟ್ಟಿನ ವೇದನೆ, ಸಂಕಷ್ಟಗಳೇ ಅಲ್ಲದೆ ಆ ನವೋದಯದ- ಕಲಾಮಯ ಶಾಂತ ಸೌಂದರ್ಯ ವನ್ನು ನಾವು ಗಾರ್ಕಿಯ ಕೃತಿಗಳಲ್ಲಿ ಕಾಣುತ್ತೇವೆ.

ಪ್ರಗತಿಶೀಲ ಮನೋಭಾವ ಅದೆಷ್ಟು ಸಂಕಟಮಯ ದುರಂತಮಯ ಪರಿಸ್ಥಿತಿಯಲ್ಲಿ, ಸನ್ನಿವೇಶದಿಂದ ಹುಟ್ಟುತ್ತೆ. ಎಲ್ಲ ಸಂಕಲೆಗಳನ್ನು ಕಡಿದು ವಿಜಯಶಾಲಿಯಾಗಿ ಬೆಳೆದು ಮುನ್ನಡೆಯುತ್ತೆ. ತಟಸ್ಥ, ದುಃಖಮಯ, ಅಂಧಕಾರವನ್ನು ತುಳಿದು ಹೇಗೆ ಬೆಳಕನ್ನೆತ್ತಿ ಬರುತ್ತೆ ಎಂಬುದನ್ನು ಗಾರ್ಕಿಯ 'ಸ್ಕೋಲ್ಜರ್' ಕೃತಿಯಲ್ಲೇ ಕಾಣಬೇಕು. ಮೂಢ, ಅವಿದ್ಯಾವಂತ, ಗುಲಾಮರಾದ ಕೂಲಿಗಳು ಇಂದಿನ ನೀತಿಯಿಂದ ಹೀಗಾಗಿದ್ದಾರೆ. ಒಮ್ಮೆ ಅವರ ರಾಜ್ಯ ಬರಲಿ, ಅವರ ಏಳಿಗೆಗೆ ದಾರಿ ಇರಲಿ, ಅವರು ನಮ್ಮೆಲ್ಲರನ್ನು ಮೀರಿಸುವ ಮಹಾ ವ್ಯಕ್ತಿಗಳಾಗುತ್ತಾರೆ ಎಂದು ಸತ್ಯ ನುಡಿದಿದಾನೆ. 'ಮಾಸ್ಟರ್' ಎಂಬ ತನ್ನ ಕತೆಯಲ್ಲಿ "ರಷ್ಯಾ ಬೇಗನೇ ಜ್ಞಾನವನ್ನು ಕಾಣುವುದು, ಅಭಿಮಾನಿಗಳನ್ನು ಪಡೆಯುವುದು" ಎಂಬ ಆಶಾವಾದ, ಚಿರಂತನ ಸತ್ಯ, ಆತ್ಮಭರವಸೆ ಪರಿಸ್ಥಿತಿಯು ದುಸ್ಥಿತಿಯಿಂದ ಕೆಸರಲ್ಲಿ ನಡೆದು ಮುಳುಗಿ ಉತ್ತರಿಸುವ ದಿನ ನುಡಿಯುತ್ತಾನೆ "ತ್ರೀ ಡೇಸ್" ನಲ್ಲಿ. ಸಮಾಜ ನಡೆಸಿದ ಸಾವಿರ ಅನ್ಯಾಯಗಳನ್ನು ಕ್ಷಮಿಸಿ, ಚಿತ್ರಹಿಂಸೆಗಳನ್ನು ಮನ್ನಿಸಿ, ಸೇವೆಯ ಸಾಧನೆಯ ಮೂಲಕ ಸಮಾಜಕ್ಕೂ ತಮಗೂ ಹೊಸ ಬೆಳಕನ್ನು ತರುವ ಕೆಚ್ಚಿನಿಂದ, ನಿಂದ ನಿಷ್ಕಲ್ಮಷ ಹೃದಯದ ಚಿತ್ರವನ್ನು 'ಸೆರೆ' ಕತೆಯಲ್ಲಿ ಕಾಣಬಹುದು.

ಗಾರ್ಕಿಯ ಲೇಖನಿ ಹಳೆಯ-ಹೊಸ, ದಾಸ್ಯ-ಸ್ವತಂತ್ರ, ಪ್ರಗತಿ-ಪ್ರತಿಗಾಮಿ ಚಿತ್ರಗಳನ್ನು ಚಿತ್ರಿಸುವಾಗ ರಕ್ತವನ್ನೇ ಹರಿಯಿಸುತ್ತದೆ. ಆ ಖಂಡನೆ-ಮಂಡನೆ ಅಷ್ಟು ತೀಕ್ಷ್ಣ, ಅಷ್ಟು ಸಜೀವ ಸತ್ಯ!

"ಮಾನವ ಇಂದಿರುವಂತೆ ಚಿತ್ರಿಸಿದರೆ ಸಾಲದು. ಮುಂದೆ ಆತ ಹೇಗಿರಬೇಕು, ಹೇಗಿರುತ್ತಾನೆ ಎಂಬುದನ್ನೂ ಚಿತ್ರಿಸಬೇಕು" ಎಂಬುದು ಗಾರ್ಕಿಯ ಖಚಿತವಾದ ಮತ.

"ಅವನ ಬೇಡಿ ಕಳಿದೊಗೆಯಿರಿ; ಆತ ಕನಸು ಕಾಣುವುದನ್ನು ಬಿಡುತ್ತಾನೆ. ಕೆಲಸ ಕೊಡಿರಿ; ಅದನ್ನು ಸಾಧಿಸಬಲ್ಲ. ಆ ಬಗ್ಗೆ ಸಂದೇಹವಿಲ್ಲ. ಕನಸಿನ ಪ್ರಪಂಚವನ್ನು ಬಿಟ್ಟು ಬಂದವರೆಲ್ಲ ಅಸಮಾನ ಶಕ್ತಿಸಾಮರ್ಥ್ಯಗಳನ್ನು ಪ್ರದರ್ಶಿಸುತ್ತಿದ್ದಾರೆ. ಅತುಲ ಎಡರು ತೊಡರುಗಳನ್ನೆದುರಿಸುವದರಲ್ಲಿ ಕೃತಕೃತ್ಯರಾಗಿದ್ದಾರೆ."

ಜನತೆಯಲ್ಲಿ ಶಕ್ತಿ, ಸಾಮರ್ಥ್ಯ, ಉತ್ಸಾಹ ಇರಬೇಕು ಎಂಬುದು ಗಾರ್ಕಿಯ ಆಶಯ. ಅದಕ್ಕಾಗಿ ತನ್ನ ಎಲ್ಲ ಕೃತಿಗಳಲ್ಲೂ ಆತ ಶ್ರಮಿಸಿದ್ದಾನೆ. ಸಂದಿಗ್ಧ ಪರಿಸ್ಥಿತಿಯಲ್ಲಿ, ಅಗತ್ಯದ ಪರ್ವಕಾಲದಲ್ಲಿ, ಹೇಡಿ ಹುಲಿಯಾಗುತ್ತಾನೆ, ಹಸುಳೆ ಹೆಬ್ಬುಲಿಯಾಗುತ್ತೆ ಎಂತ ತೋರಿದಾನೆ ಗಾರ್ಕಿ. ಜನತೆ ಎಷ್ಟೆ ಹಿಂದುಳಿದಿರಲಿ, ಅವರನ್ನು ಜಾಗೃತಗೊಳಿಸಿದಾಗ, ದೇಶದಲ್ಲಿ ಪರ್ವಕಾಲ ಬಂದಾಗ ಅವರು ತೋರಬಹುದಾದ ಸಾಮರ್ಥ್ಯ ಎಣಿಸಲಸದಳ ಎಂಬುದು ಗಾರ್ಕಿಯ ಕೃತಿಗಳಲ್ಲಿ ಕಂಡುಬರುವ ವಾಸ್ತವ ಚಿತ್ರ. "ಸಹನಶೀಲ ಸಾಮರ್ಥ್ಯ, ಆಜೀವ ನಿಲ್ಲಬಹುದಾದ ಶೌರ್ಯ" ಇರಬೇಕು. ಕ್ಷಣಿಕವಾದುದು ಸಾಲದು ಎಂತ ಗಾರ್ಕಿ ತಿಳಿಯ ಹೇಳಿದಾನೆ. "ಪರಿಸ್ಥಿತಿ ಅದೆಷ್ಟೇ ಕಠಿಣವಿರಲಿ, ಜಟಿಲವಿರಲಿ. ಅಂತಹ ಸಂದಿಗ್ಧ ಸಮಯ ಸನ್ನಿವೇಶಗಳಲ್ಲೂ ಆತ ನಿರಾಶನಾಗಿಲ್ಲ, ಕಂಗೆಟ್ಟಿಲ್ಲ. ಅದೆಂತಹ, ಅದೆಷ್ಟು ಭೀಷಣ ಪರಿಸ್ಥಿತಿಯೇ ಇದ್ದಿರಲಿ" ಎಂಬ ಲೆನಿನ್‌ನ ಗುಣಗಳನ್ನು ಬರೆದು ತನ್ನ ಅಭಿಮಾನ ವ್ಯಕ್ತಪಡಿಸಿದಾನೆ.

ದೇಶದ, ಜನತೆಯ ಪ್ರಗತಿಗಾಗಿ ಅದರ ಸಾಧನೆಗಾಗಿ ಹೋರಾಡಿದ ಈ ಅಮರ ಸವ್ಯಸಾಚಿ, ಪ್ರಗತಿಗೆ ಅಡ್ಡಬರುವ ಹೇಡಿಗಳನ್ನೂ ಬಿಟ್ಟಿಲ್ಲ. ಪೋಲೀಸರ ಹಿಂಸೆಗಳಿಗೆ ಬಾಗಿ ಧ್ಯೇಯ ಮರೆವ ದ್ರೋಹಿಗಳನ್ನು ಚಿತ್ರಿಸಿದಾನೆ. ಪ್ರಚಲಿತ ಪ್ರಪಂಚವನ್ನೇ ಮರೆತು ತಮ್ಮಷ್ಟಕ್ಕೇ ತಾವಿದ್ದುಕೊಂಡು ಅಗತ್ಯ ಬಿದ್ದಾಗ ಬೇಕಾದ ಪಕ್ಷ ಹಿಡಿವ ಅಪ್ರಯೋಜಕ ಮಾನವರ ಬಗ್ಗೆ ತಾತ್ಸಾರವಿದ್ದು, ಕ್ರೋಧವಿದ್ದೂ, ಎಲ್ಲವನ್ನೂ ನುಂಗಿ 'ಹಣೆಬರೆಹ' ಎಂದುಕೊಂಡು ಮೂಗು ಮುರಿದು ಬಿದ್ದವರನ್ನೆತ್ತಿ ತೋರಿದಾನೆ. ಇಂತಹ ಅಶಕ್ತತೆ, ಗಾಳಿಪಟದ ನೀತಿ ದೇಶದ ಪ್ರಗತಿಗೆ ಅಡ್ಡಿಯಾಗುತ್ತವೆ ಎಂದು ನೊಂದುಕೊಂಡಿದಾನೆ ಗಾರ್ಕಿ.

ಸತ್ಯ ಮತ್ತು ನ್ಯಾಯದ ಅಸ್ತಿವಾರದ ಮೇಲೆ ರಚಿತವಾದ ಸರಕಾರ ಬೇಕು ಎಂಬ ಜನತೆಯ ಆ ಸಾಮಾನ್ಯ ಧ್ಯೇಯ ಆಶಯುಗಳ ಮೇಲೆ ಹೊಂದಿ ಕೊಂಡಿವೆ ಗಾರ್ಕಿಯ ಕತೆಗಳೆಲ್ಲ. ಜಾನಪದ ಸಂಸ್ಕೃತಿ ವಿದ್ಯಾವಂತರೆನ್ನಿಸಿ ಕೊಂಡವರಿಂದ ತುಳಿಯಲ್ಪಡುತ್ತಿದೆ. ಮಹಾಜನರು ಜ್ಞಾನಿಗಳ ಬುದ್ಧಿಗೆ ಸಿಕ್ಕಿ ಬಿದ್ದಿದಾರೆ. "ರಷ್ಯನ್ ಜನತೆ ನಾಶವಾಗಲಾರದು. ಜನತೆ ಅಮರರು. ವ್ಯಕ್ತಿ ಅಳಿಯಬಹುದು. ದೇವರು ಜನತೆಯನ್ನು ಬಯಸುತ್ತಾನೆ. ಕಾರಣ ವಿಶ್ವದ ವಿಶ್ವಕರ್ಮರು ಅವರು" ಎಂಬ ಅಚಲ ವಿಶ್ವಾಸವಿತ್ತು ಗಾರ್ಕಿಗೆ. "ಮಾನವ ಮರಣವುಳ್ಳವ; ಜನತೆ ಅಮರರು" ಎಂದು ಗಾರ್ಕಿ ಉಕ್ರೈನ್‌ನ ಸಾಹಿತಿ ಕೊಟೂಬಿನ್‌ಸ್ಕಿ ಮಡಿದಾಗ ಬರೆದ.

"ಸ್ಪರ್ಶಗುಣದ ಸೂಜಿಯಂತೆ ತನ್ನ ದೇಶದ ಭಾವನೆಯನ್ನು 'ರಿಕಾರ್ಡ್' ಮಾಡಬಲ್ಲವನೇ ನಿಜವಾದ ಕಲಾವಿದ. ಅವನ ಕಾಲದ ನೈಜವಾಣಿ". "ರಷ್ಯದ ಸರ್ವಜನತೆಯ ರಕ್ತಮಾಂಸಗಳೇ ಆ ಕಲಾವಿದ'' ಎಂತ ತನ್ನ ಅಭಿಪ್ರಾಯ ತಿಳಿಸಿದಾನೆ ಗಾರ್ಕಿ.

ಮಿಂಚಿನ ವೇಗದಲ್ಲಿ, ಅನಿಮಿಷ ವೇಗವಲ್ಲಿ ಬದಲಾಗಿ ಪ್ರಗತಿ ಹೊಂದು ತ್ತಿರುವ ದೇಶದ ಬಿರುಗಾಳಿಯನ್ನು ಜಾಣ್ಮೆಯ ಕಾರ್ಯಶಕ್ತಿಯಾಗಿ ಉಪಯೋಗಿಸಿ, ಅದು ಮಾನವ ಸಹಜವಾದ ದೌರ್ಬಲ್ಯಗಳನ್ನು ನಿವಾರಿಸಿ, ಭಾವನೆಯು ಶಕ್ತಿಯಾಗಿ ಸೌಂದರ್ಯವಾಗಿ ಮಾರ್ಪಡಿಸಲು ಪ್ರಗತಿಶೀಲ ಜನತೆಗೆ ಸಹಕಾರಿಯಾಗುವುದೇ ಸಾಹಿತ್ಯ. ಕರ್ತವ್ಯದ ಅಮೋಘ ಸೌಂದ ರ್ಯವನ್ನು ನಿರೂಪಿಸುವುದೇ ಲೇಖಕನ ಧರ್ಮ. ಗಾರ್ಕಿ ಈ ತನ್ನ ಉದ್ದೇಶವನ್ನು ಎಂದೂ ಮರೆಯದೆ ದುಡಿದ ಅಮರ ಸಾಹಿತಿ.

ಅಂತರರಾಷ್ಟ್ರೀಯ ಸಾಹಿತ್ಯ ಕೃತಿಗಳನ್ನು ತಿರುಹಿ ಹಾಕದೆ, ತನ್ನ ಜನತೆಯ ನಿತ್ಯಜೀವನದ ಸತ್ಯ ದುರಂತ ಚಿತ್ರಗಳನ್ನೇ ಕಂಡು, ನೊಂದು, ಜೀವನದಲ್ಲಿ ಅಸಮಾನ ಸಂಕಟಗಳನ್ನು ಅನುಭವಿಸಿ ಪ್ರಗತಿಶೀಲ ಲೇಖಕನಾಗಿ ದಾನೆ ಗಾರ್ಕಿ. ಕರುಳು ಕತ್ತರಿಸುವ ಕರುಣಕತೆ ಅವನ ಬಾಳನ್ನು ಹಸನು ಮಾಡಿತು. ಕೊಂಪೆಯಿಂದ ಪಟ್ಟವನ್ನೇರಿದ ಗಾರ್ಕಿ, ಗೊಂಪೆಯ ಕಸಗಳನ್ನು ಮೇಲಕ್ಕೆತ್ತಿ, ''ಕೂಲಿಗಾರರು ಗಾರ್ಕಿಯಲ್ಲಿ ತಮ್ಮನ್ನೇ ತಾವು ಕಂಡುಕೊಳ್ಳು

ತ್ತಿದ್ದಾರೆ. ತನ್ನವನೇ ಒಬ್ಬ ಎಂತ ತಿಳಿದಿದ್ದಾರೆ. ತಮ್ಮ ಜೀವನ, ಅದೃಷ್ಟ, ಭವಿಷ್ಯಗಳನ್ನು ಗಾರ್ಕಿಯಲ್ಲಿ ಕಾಣುತ್ತಿದಾರೆ" ಎಂಬ ವಿ ಎಂ. ಮೊಲಟೋವ್‌ನ ನುಡಿಯನ್ನು ಸತ್ಯಮಾಡಿದ್ದಾನೆ.

ಅಂತ್ಯದ ಕಷ್ಟಮಯ ಸಂದಿಗ್ಧ ಸಮಯದಲ್ಲಿ ರಷ್ಯದ ಸಾಮಾನ್ಯ ಮಾನವ ಜನತೆಯ ನಾಯಕನಾಗಿ ಅವರನ್ನು ಮುನ್ನಡೆಸಬಲ್ಲ ಎಂದು "ಮಂಜು ಗಡ್ಡೆ ಒಡೆಯಿತು" ಎಂಬ ಕತೆಯಲ್ಲಿ ಚಿತ್ರಿಸಿದ ಗಾರ್ಕಿ "ಸಾವು ಮತ್ತು ಹೆಣ್ಣು" ಎಂಬುದರಲ್ಲಿ ಅಮರ ಪ್ರೇಮ ಮರಣವನ್ನು ಗೆಲ್ಲಬಲ್ಲುದೆಂತ ತೋರಿಸಿ ಕೊಟ್ಟಿದಾನೆ. "ಮನುಷ್ಯ ಅದೆಷ್ಟು ಗಾಯಗೊಂಡಿರಲಿ, ಸಾಯುವಂತಿರಲಿ, ಎಂದಿಗೂ ಆತ ವಿಜಯಿ—ಎಂತ ನಾತಿಳಿದಿದ್ದೇನೆ" ಎಂದು ದಬ್ಬಾಳಿಕೆ, ಅಮಾನುಷೀಯತೆಗಳನ್ನು ಎದುರಿಸುವ ಮಾನವನ ಬಗ್ಗೆ ಅಭಿಮಾನ ತೋರಿಸಿದಾನೆ.

"ಜಗತ್ತಿನ ಆವೆಡೆಯೂ ರಷ್ಯದ ಜನತೆಯಷ್ಟು ಸಾಂಸ್ಕೃತಿಕ ಪ್ರೇಮಿ ಗಳನ್ನು ಕಾಣಲಾರವು ಎಂದಿದಾನೆ ಲೆನಿನ್. ಗಾರ್ಕಿ ಇದೇ ಅಭಿಪ್ರಾಯ ದಿಂದಲೇ ತನ್ನ ಲೇಖನಿ ಹಿಡಿದಿದಾನೆ. ತನ್ನ ಜನತೆಯ ಆ ಸಂಸ್ಕೃತಿಯ ಮೇಲಿನ ಅಭಿಮಾನ ಸತ್ಯ ಸೌಂದರ್ಯಗಳ ಪ್ರೇಮ ಇವೆಲ್ಲವುಗಳು ಎಷ್ಟು ಕಾಣುತ್ತಿವೆ ಗಾರ್ಕಿಯ ಕೃತಿಗಳಲ್ಲಿ.

ಜನತೆಯ ಸಂಸ್ಕೃತಿಯನ್ನು, ಅವರ ಹೃದಯದಲ್ಲಿನ ಆ ಸಂಸ್ಕೃತಿಯ ಪ್ರೇಮವನ್ನು ಜಾಗೃತಗೊಳಿಸಬೇಕು. ಪ್ರಗತಿಶೀಲ ಮನೋಭಾವ ರಷ್ಯಾಕ್ಕೆ ಯಾವ ದೇಶಕ್ಕಿಂತ ಹಿಂದಿಲ್ಲ. ಗಾರ್ಕಿಗೆ ಹಿಂದಿನ ಯಾವ ಲೇಖಕನೂ ರಷ್ಯದ ಜನತೆಯ ಹೃದಯವನ್ನರಿತು, ಅವರ ಹೃದಯವನ್ನು ಹೊಗುವ ನುಡಿ ಗಳನ್ನು ನುಡಿದಿಲ್ಲ. ರಷ್ಯದ ಜನತೆಯ ನೈಜ ಪರಿಸ್ಥಿತಿ, ಅವರ ಮಹದಾಶೆ, ಅದನ್ನು ಸಾಧಿಸುವ ಹಾದಿ ತೋರಿಸಿಕೊಟ್ಟ ಸಾಹಿತಿ ರಷ್ಯಾಕ್ಕೆ ಒಬ್ಬನೇ – ಗಾರ್ಕಿ.

ಹೋರಾಟವೇ ನಮ್ಮ ಪಾಠಶಾಲೆ. ನಿರಾಶಜನಕ ಸ್ಥಿತಿಯ ಭೀಷಣ ಹೋರಾಟವೇ ಪಾಠ ಕಲಿಸಬಲ್ಲುದು." ಇಂತಹ ಹೋರಾಟಗಳ ಪರಂಪರೆ ಗಳಿಂದ ಗಾರ್ಕಿ ಜಗತ್ತಿನ ಸಾಹಿತಿಗಳ ಮಾರ್ಗದರ್ಶಕನಾಗಿದಾನೆ. ರಷ್ಯಾ

ಭೂಲೋಕ ಸ್ವರ್ಗವಾಗಿದೆ. ಈ ಹೋರಾಟದಿಂದ ಪಾಠ ಕಲಿಯಬೇಕು ; ತಪ್ಪು ತಿದ್ದಿಕೊಳ್ಳಬೇಕು. ಇಲ್ಲದಿದ್ದರೆ ಸಾವಿರ ಹೋರಾಟ ನಡೆದರೂ ಫಲ ಕೊಡಲಾರದು. ಭಾರತ ಇಂತಹ ಹೋರಾಟಗಳಲ್ಲಿ ಸಿಲುಕಿದೆ. ಸಾಹಿತಿ ತನ್ನ ನೆತ್ತರನ್ನೀ ಮಹಾಯಜ್ಞದಲ್ಲಿ ಧಾರೆ ಎರೆಯಬೇಕು. ಜನತೆಗಾಗಿ ಹೋರಾಡಬೇಕು. ಅವರ ಉಸಿರಾಗಿ ಬಾಳಬೇಕು ಎಲ್ಲ ಹೋರಾಟಗಳಿಂದಲೂ ಪಾಠ ಕಲಿತು ಸಾರಬೇಕು.

"ಬಿರುಗಾಳಿ ಇನ್ನೂ ಬಿರುಸಾಗಲಿ."

——:——

# ಗಾರ್ಕಿಯ ಜೀವನದ ಮೈಲಿಗಲ್ಲುಗಳು

1868 ಮಾರ್ಚಿ ೨೮ ಅಲೆಕ್ಸಿ ಮ್ಯಾಕ್ಸಿಮೋವಿಚ್ ಪೆಷ್‌ಕಾಫ್‌ನ ಜನನ. ನಿಜ್ನಿ ನೋವಾಗೋರಾಡನಲ್ಲಿ.

1872 ಗೋಡೆಗೆ ಕಾಗದ ಅಂಟಿಸುವ ವೃತ್ತಿಮಾಡುತ್ತಿದ್ದ ಅವನ ತಂದೆಯ ನಿಧನ.

1878 ತಾಯಿಯ ನಿಧನ. ಷೋಜಿನ ಅಂಗಡಿಯಲ್ಲಿ ವಾರ್ತಾವಾಹಕನಾಗಿ ಕೆಲಸ.

1880 ವೋಲ್ಗಾ ಹಡಗಿನಲ್ಲಿ ಅಡಿಗೆಯವನ ಸಹಾಯಕನಾಗಿ ಕೆಲಸ. ಓದುವುದಕ್ಕೆ ಅಡಿಗೆಯವನ ಪ್ರೋತ್ಸಾಹ.

1881-82 ಹಕ್ಕಿ ಹಿಡಿಯುವವ, ಪುಸ್ತಕದ ಭಂಡಾರದ ಗುಮಾಸ್ತ, ದೇವರ ಚಿತ್ರಗಳನ್ನು ಬರೆಯುವವನ ಸಹಾಯಕ.

1884 ನಿರ್ಗತಿಕ. ಕಾಜಾನಿನಲ್ಲಿ ಕೂಲಿಗಾರರೊಂದಿಗೂ, ಪರದೇಶಿಗಳೊಂದಿಗೂ ನದಿಯ ದಂಡೆಯ ಮೇಲೆ ವಾಸ. ಶರತ್ಕಾಲದಲ್ಲಿ ರೊಟ್ಟಿ ಅಂಗಡಿಯಲ್ಲಿ ಕೆಲಸ.

1888 ಕೆಲವು ಕ್ರಾಂತಿಕಾರರ ಪರಿಚಯವಾಗುತ್ತದೆ. ರೈತರಲ್ಲಿ ಕ್ರಾಂತಿ ತತ್ವದ ಪ್ರಸಾರ ಮತ್ತು ಅಂಡಲೆಯುವ ಜೀವನ. ಕ್ಯಾಸ್ಪಿಯನ್ ಸರೋವರದ ದಡದಲ್ಲಿ ಮೀನುಗಾರನಾಗಿ ಕೆಲಸ.

1888-89 ರೈಲ್ವೆ ಅಂಗಳದಲ್ಲಿ ಇರುಳು ಕಾಪಿನವನಾಗಿ ಕೆಲಸ. ಕೆಲವು ದಿವಸ ಸಾಮಾನುಗಳ ತೂಕ ಪರೀಕ್ಷಕನಾಗಿ ಕೆಲಸ.

1889 ಕೈದು. ನಿಜ್ನಿ ನೋವಾಗೊರಾಡ್ ಸೆರೆಮನೆಯಲ್ಲಿ ಬಂದಿ ಬಿಡುಗಡೆ. ವೋಲ್ಗಾ, ಡಾನ್ ಪ್ರಾಂತ್ಯ, ಕ್ರಿಮಿಯಾ, ಕಾಕಸಸ್‌ಗಳಲ್ಲಿ ಪ್ರವಾಸ.

1890 ಸಾಹಿತಿ ಕೊರೊಲೆಂಕೊ ಪರಿಚಯ.

1892 ಟಿಫ್ಲಿಸ್ ಪತ್ರಿಕೆಯಾದ "ಕಾವ್‌ಕಾಜ್" ನಲ್ಲಿ ಗಾರ್ಕಿಯ ಮೊದಲನೆಯ ಕಥೆ 'ಮಾಕರ್ ಚೂಡ್ರಾ' ದ ಪ್ರಕಟನೆ. ಮಾಕ್ಸಿಂ ಗಾರ್ಕಿ (ಕಹಿ ಗಾರ್ಕಿ) ಎಂಬ ಉಪನಾಮಧ್ಯೇಯದ ಸ್ವೀಕಾರ.

1893-94 ಅನೇಕ ಕಥೆಗಳನ್ನು ಬರೆಯುತ್ತಾನೆ. ಅವುಗಳಲ್ಲಿ ಮುಖ್ಯವಾದವು— 'ಅಜ್ಜ ಆರ್ಕಿಸ್', 'ಲೆಂಕ' 'ಜತೆ ಪ್ರಯಾಣಿಕ'.

1895 'ಚೆಲ್‌ಕಾಷ್' 'ಫಾಲ್ಕನ್ನಿನ ಗೀತೆ' 'ಮುದಿ ಇಜರ್‌ಗಿಲ್', 'ತೆಪ್ಪದ ಮೇಲೆ'

1895-96 ಸಮಾರಾ, ಓರೆಸಾ ಪತ್ರಿಕೆಗಳಲ್ಲಿ ಅನೇಕ ಲೇಖನ, ಕಥೆಗಳನ್ನು ಬರೆಯುತ್ತಾನೆ.

1896 ಕ್ಷಯರೋಗ. ಕ್ರಿಮಿಯಾಗೆ ಚಿಕಿತ್ಸೆಗಾಗಿ ಹೋಗುತ್ತಾನೆ. ' ಕೊನೊಲಾವ್ಲೋಫ್ ' ಬರೆಯುತ್ತಾನೆ.

1899 ' ಮಾನವರಾಗಿದ್ದ ಜೀವಜಂತುಗಳು, ' ' ಮಾಲ್ವಾ '

1898 ಎರಡು ಸಂಪುಟಗಳಲ್ಲಿ ಕತಾ ಸಂಗ್ರಹ ಪ್ರಕಟನೆ. ಆಂದ್ರೀವನೊಂದಿಗೆ ಪತ್ರವ್ಯವಹಾರ ಆರಂಭವಾಗುತ್ತದೆ. ಟಿಫ್ಲಿಸ್‌ನಲ್ಲಿ ಕ್ರಾಂತಿಕಾರಕ ಚಳುವಳಿಗಾಗಿ ಕೈದು – ಬಿಡುಗಡೆ – ಪೋಲೀಸರ ಸರ್ಪಕಾವಲು.

1899 ಚೆಕಾಫನ ಪರಿಚಯ " ಇಪ್ಪತ್ತಾರು ಗಂಡಸರು ಒಬ್ಬ ಹುಡುಗಿ " " ಫೋಮಾ ಗಾರ್ಡೀಫ್ "

1900 ಮಾಸ್ಕೋದಲ್ಲಿ ಟಾಲಸ್ಟಾಯರ ಭೇಟಿ. " ಅವರು ಮೂವರು "

1901 " ಉಗ್ರ ಸೈನ್ಯದ ಗೀತೆ "
ಸೋರ್‌ಮೋವೋ ಕೆಲಸಗಾರರನ್ನು ಉದ್ದೇಶಿಸಿ ಬರೆದ ಪತ್ರಕ್ಕಾಗಿ ಬಂದಿವಾಸ.

1902 ಅರ್‌ಜಾಮಾಸಿಗೆ ಗಡೀಪಾರು. " ವಿಜ್ಞಾನ ಪರಿಷತ್ತಿಗೆ " ಗೆ ಆಯ್ಕೆ. ಜಾರ್ ಅದನ್ನು ರದ್ದುಮಾಡುತ್ತಾನೆ.
" ಸ್ಮಗ್ ಸಿಟಿಜನ್ಸ್ " ನಾಟಕದ ಪ್ರದರ್ಶನ. " ಪಪಾತ "

1903-04 ಕೃತಿಗಳ ಅನೇಕ ಮುದ್ರಣಗಳು ಹೊರಬೀಳುತ್ತವೆ. " ಮಾನವ "

1905 ರಕ್ತ ಆದಿತ್ಯವಾರ ( ಜನವರಿ ೨೨ ) ದ ಎರಡು ದಿನಾನಂತರ ಸರಕಾರದ ವಿರುದ್ಧ ಬರೆದ ಪ್ರಸಿದ್ಧಪತ್ರಿಕೆಗಾಗಿ ಕೈಸೆರೆ ಮತ್ತು ಸೆಂಟ್ ಪೀಟರ್ಸ್‌ಬರ್ಗ್‌ನಲ್ಲಿ ಬಂಧನ. ಅಂತರರಾಷ್ಟ್ರೀಯ ವಿರೋಧ ಪ್ರದರ್ಶನ ಬಿಡುಗಡೆಯನ್ನು ದೊರಕಿಸುತ್ತದೆ.
" ಸೂರ್ಯ ಸಂತಾನ " ಸೆರೆಮನೆಯಲ್ಲಿ ಲೆನಿನನ ನೇತೃತ್ವದಲ್ಲಿ ' ನವಜೀವನ ' ವೆಂಬ ಬೋಲ್ಷೆವಿಕ ಪತ್ರಿಕೆಯ ವ್ಯವಸ್ಥೆಯಲ್ಲಿ ಭಾಗ. ಮಾಸ್ಕೋದಲ್ಲಾದ ಡಿಸೆಂಬರ್ ದಂಗೆಯಲ್ಲಿ ಭಾಗವಹಿಸುತ್ತಾನೆ.

1906 ಕ್ರಾಂತಿಗೆ ಅಪಜಯವಾಗಲು ವಿದೇಶಕ್ಕೆ ಪ್ರಯಾಣ. ಬೋಲ್ಷೆವಿಕ್ ಪಾರ್ಟಿಗೆ ಹಣ ಸಂಗ್ರಹಿಸಲು ಅಮೇರಿಕೆಯಲ್ಲಿ ಪ್ರವಾಸ. ಅಕ್ಟೋಬರ್ ತಿಂಗಳಲ್ಲಿ ಅನಾರೋಗ್ಯದ ದೆಸೆಯಿಂದ ಇಟಲಿಯಲ್ಲಿರುವ ಕೆಪ್ರಿ ದ್ವೀಪಕ್ಕೆ ವಿಶ್ರಾಂತಿಗಾಗಿ ಹೋಗುತ್ತಾನೆ. " ಶತ್ರುಗಳು, " " ರಷ್ಯನ್ ಜಾರ್ " " ಕಾಮ್‌ರೇಡ್ಸ್ " " ಹಳದಿ ಪಿಶಾಚಿಯ ತೌರೂರು " " ಫ್ರಾನ್ಸಿನ ರಂಭೆ "

## ರಾಜಕೀಯ ಗಡೀಪಾರು

1907 ಲಂಡನ್ನಿನಲ್ಲಾದ ರಷ್ಯನ್ ಸೋಷಿಯಲ್ ಡೆಮೋಕ್ರಾಟಿಕ ಪಾರ್ಟಿಯ ಅಧಿವೇಶನದಲ್ಲಿ ಭಾಗವಹಿಸುತ್ತಾನೆ. ಲೆನಿನೊಂದಿಗೆ ಪತ್ರವ್ಯವಹಾರ
"ತಾಯಿ"
"ಜನವರಿ ೯ ನೆಯ ತಾರೀಖು"

1908 ಗಾರ್ಕಿಯ ಭೇಟಿಗೆ ಲೆನಿನ್ ಕೆಪ್ರಿಗೆ ಬರುತ್ತಾನೆ. ಈಶ್ವರ ಸಾಧನೆಯಲ್ಲಿ ಮನಸ್ಸು. "ಪಾಪನಿವೇದನೆ" ಕಾದಂಬರಿಯಲ್ಲಿ ಅದರ ಛಾಯೆ. ಇಂತಹ ಅಭಿಪ್ರಾಯಗಳು ಅವಿವೇಕವೆಂದು ಪರಿತ್ಯಾಜ್ಯ ಮಾಡುತ್ತಾನೆ.
"ಸಿಪಾಯಿಗಳು."

1909 "ಅನವಶ್ಯಕ ಮಾನವನ ಜೀವನ ಚರಿತ್ರೆ."

1010 "ವಾಸಾ ಜೆಲ್‌ಯೆಜ್‌ನೋವಾ."

1911 ಕಥಾಸಂಗ್ರಹ ಪ್ರಕಟನೆ "ಮಾಟ್‌ವೇಯಿ ಕೊಜ್‌ಯಾಕಿನ್ನನ ಜೀವನ ಚರಿತ್ರೆ.'
'ಜ್ವೆಜ್‌ಡಾ (ನಕ್ಷತ್ರ)' ಎಂಬ ಬಾಲ್ಷೆವಿಕ್ ಪತ್ರಿಕೆಯ ಸಂಪಾದಕ ಮಂಡಳಿಯನ್ನು ಸೇರುತ್ತಾನೆ.

1913 ರಾಜಕೀಯ ಕ್ಷಮೆ ದೊರೆತು ರಷ್ಯಾಗೆ ಹಿಂದಿರುಗುತ್ತಾನೆ. (ಡಿಸೆಂಬರ್ ೩೧) ಬೋಲ್ಷೆವಿಕ್ ಪತ್ರಿಕೆಯಾದ 'ಎನ್‌ಲೈಟನ್‌ಮೆಂಟ್ (ಜ್ಞಾನೋದಯ)' ಪತ್ರಿಕೆಯ ಸಾಹಿತ್ಯ ಭಾಗದ ಸಂಪಾದಕನಾಗುತ್ತಾನೆ.
"ರಷ್ಯಾದ ಅಜೆ' 'ಕಾರಮೋಜಿವೊಯಿಸಮ್" 'ಪೇಟ್ರೆಸ್'

1914 'ನನ್ನ ಬಾಲ್ಯ' ಮುಗಿದುದು. ಶ್ರಮಜೀವಿ ಲೇಖಕರ ಸಂಗ್ರಹಕ್ಕೆ ಮುನ್ನುಡಿ.

1915 ಅಂತರರಾಷ್ಟ್ರೀಯ ಪತ್ರಿಕೆ 'ಆನಾಲ್ಸ್' ಪ್ರಧಾನ ಸಂಪಾದಕ.

1916 "ರೊಟ್ಟಿಯ ಸಂಪಾದನೆ"

1917 ಪೆಟ್ರೊಗ್ರಾಡಿನಲ್ಲಿ "ಸಂಸ್ಕೃತಿ ಸ್ವಾತಂತ್ರ್ಯ ಸಂಘ"ದ ಸ್ಥಾಪನೆ.

1917–18 ಸೋವಿಯೆಟ್ ಅಧಿಕಾರಕ್ಕೆ ಕೂಡಲೆ ಬೆಂಬಲ ಕೊಡುವುದಿಲ್ಲ. ಅನಂತರ ಆಧಾರಸ್ತಂಭಗಳಲ್ಲಿ ಒಬ್ಬನಾಗುತ್ತಾನೆ.

1919 'ವಿಜ್ಞಾನಗಳ ಪರಿಷತ್ತಿನ" ಅಧ್ಯಕ್ಷ. "ಜಗತ್ ಸಾಹಿತ್ಯ ಮಾಲೆ"ಯ ಮುಖ್ಯಸ್ಥ. 'ಜಗತ್ತಿನ ಜೀವನ' "ಟಾಲಿಸ್ಟಾಯನ್ನು ಕುರಿತು"

1921 ಮತ್ತೆ ಕ್ಷಯರೋಗದ ಉಪಟಳ. ಲೆನಿನನ ಸಲಹೆಯಂತೆ ವಿದೇಶ ಪ್ರಯಾಣ.

1922 'ಆಂದ್ರೀವನನ್ನು ಕುರಿತು.' 'ಕೊರೊಲೆಂಕೊ'

1923 ‘ನನ್ನ ವಿಶ್ವವಿದ್ಯಾನಿಲಯಗಳು’

1924 ‘‘ಲೆನಿನನ್ನು ಕುರಿತು’’. ಇಟಲಿಯಲ್ಲಿರುವ ಸೊರೆಂಟೋಗೆ ಪ್ರಯಾಣ

1925 ‘ಅವನತಿ’’

1926 ‘‘ಕ್ರಾಸಿನ್ನನನ್ನು ಕುರಿತು’’

1927 ‘‘ಬೈಸ್ಟ್ಯಾಂಡರ್’’ ಸೋವಿಯೆಟ್ ಯೂನಿಯನ್ನಿನ ಪರವಾಗಿ ಲೇಖನ ಮಾಲೆ.

1928 ‘‘ದಿ ಮ್ಯಾಗ್ನೆಟ್’’ ತನ್ನ ೬೦ನೆಯ ಹುಟ್ಟಿದ ಹಬ್ಬದ ದಿವಸ ರಷ್ಯಾಗೆ ಹಿಂದಿರುಗುತ್ತಾನೆ.

1929 ಯು. ಎಸ್. ಎಸ್. ಆರ್.ನ ಐದನೆಯ ಕಾಂಗ್ರೆಸ್ಸಿನ ಕಮ್ಯೂನಿಸ್ಟ್ ಪಾರ್ಟಿಯ ಕೇಂದ್ರ ಸಮಿತಿಗೆ ಚುನಾವಣೆ ಅನೇಕ ಸೋವಿಯೆಟ್ ಲೇಖಕರಿಗೆ ಧಾರಾಳವಾದ ಸಹಾಯ.

1930 ‘‘ಅಬ್ರಾಡ್’’ ಪತ್ರಿಕೆಯ ಸ್ಥಾಪನೆ, ಗಾರ್ಕಿಯ ನೇತೃತ್ವದಲ್ಲಿ ಕಾದಂಬರಿ ಭಂಡಾರದ ಪ್ರಕಟನೆ. ‘‘ಇತರ ಬೆಂಕಿಗಳು’’ ಕಾದಂಬರಿ.

1931 ಗಾರ್ಕಿಯ ನೇತೃತ್ವದಲ್ಲಿ ‘‘ಯು. ಎಸ್. ಎಸ್. ಆರ್. ನ ಸ್ವಯೂಥ ಕಲಹ’’ದ ಇತಿಹಾಸವನ್ನು ಪ್ರಕಟಿಸಬೇಕೆಂದು ಕಮ್ಯೂನಿಸ್ಟ್ ಪಾರ್ಟಿಯ ಕೇಂದ್ರ ಸಮಿತಿಯ ನಿರ್ಧಾರ.

1932 ‘ಎಗಾರ್ ಬುಲಿಚಾಫ್’ ನಾಟಕ. ಎಲ್ಲೆಡೆಗಳಲ್ಲಿಯೂ ಗಾರ್ಕಿಯ ಸಾಹಿತ್ಯ ಜೀವನದ ನಲವತ್ತನೆಯ ವರ್ಧಂತಿಯ ಆಚರಣೆ. ಅವನು ಹುಟ್ಟಿದ ಊರು ಮತ್ತು ಬೀದಿಗಳಿಗೆ ‘ಗಾರ್ಕಿ’ ಎಂದು ನಾಮಕರಣ. ಅವನ ಹೆಸರಿನಲ್ಲಿ ಸಾಹಿತ್ಯ ಪರಿಷತ್ತಿನ ಸ್ಥಾಪನೆ. ಸಾಹಿತ್ಯಾಭ್ಯಾಸಕ್ಕೆ ಗಾರ್ಕಿಯ ಹೆಸರಿನಲ್ಲಿ ಕಾಲಕ್ಷೇಪಗಳು.

1933 ‘‘ದೋಸ್ತಿಗಾಯಿಫ್ ಮತ್ತು ಇತರರು’’

1934 ಸೋವಿಯೆಟ್ ಲೇಖಕರ ಮೊದಲನೆಯ ಕಾಂಗ್ರೆಸ್ಸಿನ ನಾಯಕನಾಗಿ ಗಾರ್ಕಿ ಅದನ್ನು ನಿರ್ವಹಿಸುತ್ತಾನೆ.
‘‘ಸೋವಿಯೆಟ್ ಸಾಹಿತ್ಯ’’

1936 ಮಾಸ್ಕೋದಲ್ಲಿ ಜೂನ್ ೧೮ ನಿಧನ. ಸರ್ಕಾರ ಮತ್ತು ಜನತೆ ತಮ್ಮ ಅಸೀಮ ದುಃಖವನ್ನು ವ್ಯಕ್ತಪಡಿಸುತ್ತವೆ.

1938 ‘ಒಳ ಸಂಚಿನ ವಿಚಾರಣೆಯಲ್ಲಿ’ ಗಾರ್ಕಿಯ ಸಾವು ಅವನ ಕಾರ್ಯದರ್ಶಿಗಳ ಮತ್ತು ವೈದ್ಯರು ಸೋವಿಯಟ್ಟಿನ ಪ್ರಧಾನ ವ್ಯಕ್ತಿಗಳನ್ನು ಕೊನೆಗಾಣಿಸುವ ಸಂಚಿನಲ್ಲಿ ಸೇರಿದ್ದರಿಂದ ಸಂಭವಿಸಿತೆಂದು ಸಿದ್ಧವಾಗುತ್ತದೆ. ಗಾರ್ಕಿಗೆ ವಿಷಮುಣಿಸನ್ನಿಟ್ಟು ಕೊಂದರೆಂದು ಸ್ಥಿರವಾಗುತ್ತದೆ.